# ಚೆನ್ನಬಸವ ಸಾಹಿತ್ಯ

( ಶ್ರೀ ಚೆನ್ನಬಸವಣ್ಣನವರ ಕೃತಿಗಳ ಸಂಕಲನ )

ಶಿವತತ್ವಾಮೃತಾಸ್ವಾದ ಚೇತಸೇ ಯೋಗಿನೇ ನಮಃ
ಶ್ರೀ ಚೆನ್ನಬಸವೇಶಾಯ ಷಟ್ಸ್ಥಲಬ್ರಹ್ಮವಾದಿನೆ ||

—ಶ್ರೀ ಮರಿತೋಂಟದಾರ್ಯರು

ಸಹಜೀವನ ಸಾಹಿತ್ಯಮಾಲೆ-೪.

# ಚೆನ್ನಬಸವ ಸಾಹಿತ್ಯ

[ಶ್ರೀ ಚೆನ್ನಬಸವಣ್ಣನವರ ಕೃತಿಗಳ ಸಂಕಲನ].

(ಡಾ. ನಂದೀಮಠರ ಮುನ್ನುಡಿಯೊಂದಿಗೆ)

ಸಂಪಾದಕರು :
ಅನ್ನದಾನಯ್ಯ ಪುರಾಣಿಕ, ಬಿ.ಕಾಮ್., ಎಲ್‌ಎಲ್.ಬಿ.



ಸಹಜೀವನ ಪ್ರಕಾಶನ
ಲಿಂಗಂಪಲ್ಲಿ, ಹೈದರಾಬಾದು-ದಕ್ಷಿಣ.

ಪುಸ್ತಕಗಳು ದೊರೆಯುವ ಸ್ಥಳ :

**ಪಂ. ಕಲ್ಲಿನಾಥಶಾಸ್ತ್ರೀ ಪುರಾಣಿಕ, ದ್ಯಾಂಪೂರ.**

ಪೋಸ್ಟ್–ಕುಕನೂರು. ಜಿಲ್ಲಾ–ರಾಯಚೂರು.

**ಕರ್ನಾಟಕ ಸಾಹಿತ್ಯ ಮಂದಿರ,** ಧಾರವಾಡ.

ಮೊದಲನೆಯ ಮುದ್ರಣ–೧೯೫೬



ಬೆಲೆ:

ಸಾದಾಪ್ರತಿ **ಮೂರು ರೂಪಾಯಿಗಳು**

ಕ್ಯಾಲಿಕೊ ಪ್ರತಿ **ನಾಲ್ಕು ರೂಪಾಯಿಗಳು**

ಮುದ್ರಕರು :

**ಶ್ರೀ ಭಾರತೀ ಪ್ರಿಂಟರಿ,** ಲಿಂಗಂಪಲ್ಲಿ, ಹೈದರಾಬಾದು–ದ. ೧.

ಶ್ರೀ ಮ. ನಿ. ಪ್ರ. ಮುರುಘೇಂದ್ರ ಮಹಾ ಶಿವಯೋಗಿಗಳು



ಗಚ್ಚಿನಮಠ, ಅಥಣಿ.

# ಸಮರ್ಪಣ

ಶ್ರೀ ಬಸವಾದಿ ಪ್ರಮಥರು
ನಡೆದು ತೋರಿಸಿದ ಷಟ್ಸ್ಥಲ ಮಾರ್ಗದಲ್ಲಿ ನಡೆದು
ನಡೆದಂತೆ ನುಡಿದು ಶಿವಯೋಗದ ಘನತೆಯನ್ನು
ಬೀರಿದ ಮಹಾತಪಸ್ವಿಗಳೂ ವೈರಾಗ್ಯಮೂರ್ತಿಗಳೂ
ಕಾರಣ ಪುರುಷರೂ ಆದ ಅಥಣಿ ಗಚ್ಚಿನಮಠದ

**ಶ್ರೀಮನ್ನಿರಂಜನ ಪ್ರಣವಸ್ವರೂಪಿ**

ಮುರುಘೇಂದ್ರ ಮಹಾಶಿವಯೋಗಿಗಳು

ಅವರ ಅಡಿದಾವರೆಗಳಿಗೆ ಈ ಗ್ರಂಥ ಪುಷ್ಪವನ್ನು
ಭಕ್ತಿಯ ಕಾಣಿಕೆಯಾಗಿ
**ಅರ್ಪಿಸಿದೆ.**

## ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳು
## ಮುರಘಾಮಠ ಧಾರವಾಡ ಅವರ

# ಶುಭ ಸಂದೇಶ

ಚರಶೇಷಸಂಭೂತರೂ, ಬಸವಣ್ಣನವರ ಕರಕುಂಜಸಂಜಾತರೂ, ಚಿಕ್ಕದಣ್ಣಾಯಕರೂ ಆದ ಚಿನ್ಮಯಮೂರ್ತಿ ಚೆನ್ನಬಸವಣ್ಣನವರು, ಶರಣ ತಿಂಥಿಣಿಯಲ್ಲಿ ಒಂದು ದಿವ್ಯ ಚೇತನ, ಒಂದು ಆದರ್ಶ ಜೀವನವಾಗಿದ್ದಾರೆ. ಅವರ ಅನುಭವದ ಭಾನು-ಪ್ರಭೆಯು, ಶರಣಸಾಹಿತ್ಯದ ವಿಶಾಲವಾದ ಆಕಾಶವನ್ನೇ ಆವರಿಸಿಬಿಟ್ಟಿದೆ. ಅವರು ನಿರೂಪಿಸಿದ ' ಕರಣ ಹಸುಗೆ ' ' ಮಿಶ್ರಾರ್ಪಣ ' ' ಘಟಚಕ್ರ ' ಎಂಬ ಮುಂತಾದ ಗ್ರಂಥಗಳು, ಸೃಷ್ಟಿಶಾಸ್ತ್ರ-ಮನಶ್ಶಾಸ್ತ್ರಗಳನ್ನು, ಷಟ್‌ಸ್ಥಲ ಸಿದ್ಧಾಂತದ ತಳಹದಿಯನ್ನು ತರ್ಕಬದ್ಧವಾಗಿ, ಅನುಭವ ಶುದ್ಧವಾಗಿ ಬೋಧಿಸುತ್ತಿವೆ. ಅವರು ತಮ್ಮ ವಚನ ವಾಙ್ಮಯದಲ್ಲಿ ವಿಶೇಷವಾಗಿ, ವ್ಯಕ್ತಿ ಜೀವನ ಮತ್ತು ಸಮಾಜ ಸಂಘಟನೆಯನ್ನು ಸಾಧಿಸುವ ಕುರಿತು, ಧರ್ಮ-ನೀತಿ-ತತ್ತ್ವಗಳ ತಿಳಿಯಾದ ಬೆಳಕನ್ನು ನೀಡಿದ್ದಾರೆ ; ಜೊತೆಯಲ್ಲಿ ದಾಂಭಿಕ ಜೀವನವನ್ನು ನಿರ್ದಯವಾಗಿ ಖಂಡಿಸಿದ್ದಾರೆ. ಅನುಭವ ಮಂಟಪದ ಆಚಾರ್ಯ ಪುರುಷರಾದ ಅವರು, ಅಧಿಕಾರ ವಾಣಿಯಿಂದ ಬಿತ್ತರಿಸಿದ ವಚನಗಳು, ಅವರ ತತ್ತ್ವ-ತಾತ್ತ್ವಿಕ ವಿವೇಚನೆಯ ಎತ್ತರವನ್ನು ವ್ಯಕ್ತಗೊಳಿಸುತ್ತಿವೆ. ಒಟ್ಟಿನಲ್ಲಿ ಅವರ ಜೀವನ ದೊಡ್ಡದು, ಅವರ ಸಾಹಿತ್ಯ ದೊಡ್ಡದು, ಅವರು ಮಾಡಿದ ಕಾರ್ಯ ಇನ್ನೂ ದೊಡ್ಡದು ; ಅವರು ವೀರಶೈವ ಸಿದ್ಧಾಂತದ ಆಧಾರಸ್ತಂಭ! ಆ ಮಹಾನುಭಾವಿಯ ಸಮಸ್ತ ಸಾಹಿತ್ಯವನ್ನು, ಶುಚಿಯಾಗಿ, ಸಮೀಚೀನವಾಗಿ ಪ್ರಕಟಿಸುವ ಕಾರ್ಯ ಮಹತ್ತರವಾದುದು, ಸರ್ವಥಾ ಸ್ತುತ್ಯವಾದುದು. ' ಚೆನ್ನಬಸವ ಸಾಹಿತ್ಯ ' ಆ ರೀತಿ ಪ್ರಕಟವಾಗಿ, ಬೇಗನೆ ಪ್ರಚಾರಕ್ಕೆ ಬರಲಿ ; ತನ್ಮೂಲಕ ಸಮಾಜದಲ್ಲಿ ಶುದ್ಧಿ-ಸಿದ್ಧಿ-ಸಮೃದ್ಧಿಗಳು ಬಲವಾಗಿ ಬೇರೂರಲಿ ; ಇದುವೇ ನಮ್ಮ ಹಾರೈಕೆ!

# ಅಖಿಲ ಭಾರತ ವೀರಶೈವ ಮಹಾಸಭಾಧ್ಯಕ್ಷರಾದ ಶ್ರೀ ಮ. ನಿ. ಪ್ರ. ಸುಕ್ಷೇತ್ರ ಬಂಥನಾಳ ಶಿವಯೋಗಿಗಳು ಆಶೀರ್ವದಿಸಿದ ಸಂದೇಶ

ಜೀವನದಲ್ಲಿ ಜ್ಞಾನದಷ್ಟು ಮಹತ್ವವಾದ, ಮುಖ್ಯವಾದ ಹಾಗೂ ಅವಶ್ಯವಾದ ವಸ್ತುವು ಬೇರೊಂದಿಲ್ಲ. ಆದುದರಿಂದಲೇ ಮಹಾತ್ಮರು ಜ್ಞಾನಜ್ಯೋತಿಯನ್ನು ಪಡೆಯಲು ಹಿಂದೆ ಅದೆಷ್ಟೋ ಪ್ರಯತ್ನ ಮಾಡಿದರು; ಇಂದು ಮಾಡುತ್ತಿದ್ದಾರೆ; ಮುಂದೆಯೂ ಮಾಡುವರು. ಜ್ಞಾನವೆಂದರೆ ಅರಿವು. ಜ್ಞಾನವನ್ನು ಮಾನವನು ಅರಿಯುವದು ಅವಶ್ಯ. ಏಕೆಂದರೆ ಜಗತ್ತಿನಲ್ಲಿ ಜೀವಿಯು ಸುಖಾನ್ವೇಷಣೆಗಾಗಿ ಹಗಲಿರುಳು ಹೋರಾಡುತ್ತಿರುತ್ತಾನೆ. ಆಗ ಆತನಿಗೆ ಜ್ಞಾನವು ಅತ್ಯಾವಶ್ಯಕವಾಗಿರುತ್ತದೆ. ತಾನು ಹಿಡಿದ ವಸ್ತುವಿನ ಬಗ್ಗೆ ಇದು ಕಷ್ಟ, ಇದು ಸುಖವೆಂದು ತಿಳಿಯುವದೇ ಜ್ಞಾನ. ಜ್ಞಾನಕ್ಕೆ ಆಧ್ಯಾತ್ಮದಲ್ಲಾಗಲಿ, ಭೌತಿಕದಲ್ಲಾಗಲಿ ಪ್ರಮುಖ ಸ್ಥಾನವುಂಟು.

ಗೀತೆಯಲ್ಲಿ ಶ್ರೀಕೃಷ್ಣನು " ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ " ಎಂದು ಹೇಳಿದ್ದಾನೆ. ಯಾವ ವ್ಯಕ್ತಿಯನ್ನು ತೆಗೆದುಕೊಂಡರೂ ಆತನು ಜ್ಞಾನಾಮೃತಕ್ಕಾಗಿಯೇ ಬಾಯೊಡ್ಡಿದ್ದಾನೆ. ಆಂಗ್ಲ ಕವಿ ಕಾರ್ಡಿನಲ್ ನ್ಯೂಮನ್ನನು, " ಕರುಣಾಳು ಬಾ ಬೆಳಕೆ " ಎಂದು ಹಾಡಿದನು, ಬೇಡಿದನು. ಜ್ಞಾನದ ಹಂಬಲವು ವಿಶೇಷವಾದಾಗಲೇ ಉಪನಿಷತ್ಕಾರರು " ತಮಸೋಮಾಂ ಜ್ಯೋತಿರ್ಗಮಯ " ಎಂದು ಹಾಡಿಕೊಂಡಿರುವರು. " ತೇಜಸ್ವಿನಾವ ಧೀತಮಸ್ತು " ಎಂದು ಜ್ಞಾನಸ್ವರೂಪವಾದ ಆ ಜ್ಯೋತಿಯನ್ನು ಕಾಣಲು ತಮ್ಮ ತಮ್ಮೊಳಗೆ ಸಂಘಟಿತರಾಗಿ " ಸಹನಾವವತು " ಎಂಬ ಮಾತನ್ನು ಹೇಳಿದರು. ಜ್ಞಾನಸೂತ್ರವಿಡಿದು ಸಾಧನೆ ಬೆಳೆಸಬೇಕಾದರೆ ಜೀವನು ಸಹಸ್ರಾರು ಸಂಕಷ್ಟದಿಂದ, ಸಾಹಸದಿಂದ ಅಹೋರಾತ್ರಿ ಹೋರಾಡಬೇಕಾಗುತ್ತದೆ. ಜ್ಞಾನಕ್ಕಾಗಿ ಸ್ವಾರ್ಥ ಪರಾರ್ಥಗಳೆಂಬೆರಡು ಮರಗಳು ಭೂಮಿಯ ಮೇಲೆ ಹುಟ್ಟಿದವು. ಅವುಗಳ ಹಿನ್ನೆಲೆಯಲ್ಲಿ ಸುಶಿಕ್ಷಿತ, ಸುಸಂಸ್ಕೃತ, ಅಶಿಕ್ಷಿತ,

ಅಸಂಸ್ಕೃತಗಳು ಹೋರಾಡಿದವು. ಜಾತಿ ಮತ್ಸರಗಳೆದ್ದು ಕೂಗಿದವು. ಜ್ಞಾನಸಾಧಕರು ತಮ್ಮ ಸ್ವಾರ್ಥಕ್ಕಾಗಿಯೋ ಬೇರೊಂದು ಕಾರಣದಿಂದಲೋ ಸಂಸ್ಕೃತವೆಂಬ ಒಂದೇ ಭಾಷೆಯನ್ನು ಬಳಸಿಕೊಂಡು ಬಂದರು. ಸಂಸ್ಕೃತವೇ ಸಾಧನ ಶಿಖರಕ್ಕೆ ಶೋಭೆಯಾಯಿತು.

ಇದರಿಂದ ಸಾಮಾನ್ಯರ ಜೀವನದಲ್ಲಿ ಜ್ಞಾನದ ಬೆಳಕು ಬೀಳಲಿಲ್ಲ; ಬಿದ್ದರೂ ಉಪಯೋಗವಾಗಲಿಲ್ಲ. ಇದನ್ನರಿತು ಪರಮಾತ್ಮನ ಸಾತ್ವಿಕ ಅಂಶಗಳು ಜಗತ್ತಿನಲ್ಲೆಲ್ಲ ಅವತರಿಸಿ ಸಾಮಾನ್ಯರ ಜ್ಞಾನಕ್ಕೆ ಸಾಧನೀಭೂತವಾದವು ಅಂಥವರಲ್ಲಿ ಕರ್ನಾಟಕದೊಳಗೆ ವೀರಶೈವ ಶರಣ ಸಂಪ್ರದಾಯವು ಮುಖ್ಯವಾಗಿದೆ. ನಾಡಿನ ಮೋಡಿ ಜನರ ಮಾಟಗಳನ್ನು ಬಯಲಿಗೆಳೆದು, ಮೂಢ ಜನರ ಮಂದತ್ವವನ್ನು ನಾಶ ಮಾಡಿ, ಅಜ್ಞಾನವನ್ನು ಹೊಡೆದೋಡಿಸಿ ಶರಣರು ಸುಜ್ಞಾನ ಪ್ರಭೆಯನ್ನು ಬೆಳಗಿದರು. ಅದು ಅವರ ಸ್ವಾರ್ಥಸಾಧನೆಯಾಗಲಿಲ್ಲ. "ಜಗತ್ತೇ ಜ್ಞಾನಪುಂಜದಲ್ಲಿ ಬೆಳಗಲಿ" ಎಂಬ ಹಿರಿಯಾಶೆಯಿಂದಲೇ 'ಶಿವಾನುಭವ ಮಂಟಪವು' ಸರ್ವರಿಗೂ ಬಾಗಿಲ ತೆರೆಯಿತು. ಪಾಮರರು ಪಾವನರಾದರು. ಪಾವನರು ಪರಮಾತ್ಮರಾದರು. ಶಿವಾನುಭವ ಮಂಟಪದಲ್ಲಿ ಶ್ರೇಷ್ಠಸ್ಥಾನ ಸಿಕ್ಕವರೊಳಗೆ ಚೆನ್ನಬಸವಣ್ಣನು ಅಗ್ರಗಣ್ಯನು. ಆತನು ಸಮ್ಯಜ್ಞಾನಿ, ದಿವ್ಯಜ್ಞಾನಿ. ಅನುಭವ ಮಂಟಪದ ಚರ್ಚಾ ಕೂಟದ ತೀರ್ಮಾನ ಕೊಡುವ ಅಧಿಕಾರವು ಪ್ರಭುವಿಗಿದ್ದರೂ ಚೆನ್ನಬಸವಣ್ಣನಿಗೆ ಕೊನೆಯ ಸಲಹೆ ಕೊಡುವ ಅಧಿಕಾರವಿದ್ದಿತು. ಏಕೆಂದರೆ ಚೆನ್ನಬಸವಣ್ಣನ ಜ್ಞಾನವು ಅಷ್ಟು ಅಮೋಘವಾದುದು. ಆತನು ಚಿಕ್ಕವನಾಗಿದ್ದರೂ ಆತನ ಅಂತರಂಗದ ಅರುಹಿನ ಹಿರಿಮೆ ಕಿರಿದಾಗಿರಲಿಲ್ಲ. ಅಂತೆಯೇ ಪ್ರಭುದೇವರು,

"ಕಿರಿಯರಾದಡೇನು? ಹಿರಿಯರಾದಡೇನು? ಅರಿವಿಂಗೆ ಹಿರಿಕಿರಿದುಂಟೆ? ಆದಿ ಅನಾದಿ ಇಲ್ಲದಂದು ಅಜಾಂಡ ಬ್ರಹ್ಮಾಂಡ ಕೋಟಿಗಳ ಉದಯವಾಗದಂದು ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೇ ಮಹಾಜ್ಞಾನಿಯೆಂಬುದು ಕಾಣಬಂದಿತ್ತು ಕಾಣಾ ಚೆನ್ನಬಸವಣ್ಣಾ" ಎಂದು ಚೆನ್ನಬಸವಣ್ಣನ ಬಗ್ಗೆ ತಮ್ಮ ನುಡಿಯಲ್ಲಿ ಗುರುತರ ಸ್ಥಾನವನ್ನು ಕಲ್ಪಿಸಿ

ಕೊಟ್ಟಿದ್ದಾರೆ. ವಿಶೇಷವಾಗಿ ನಾವು ಶೂನ್ಯ ಸಂಪಾದನೆಯಲ್ಲಿ ಚರ್ಚಿಸಲ್ಪಡುವ ವಿಷಯದ ಕೊನೆಯ ತೀರ್ಮಾನವು ಚೆನ್ನಬಸವಣ್ಣನ ವಚನವಿಲ್ಲದೆಯಿಲ್ಲ. ಇದು ಚೆನ್ನಬಸವಣ್ಣನ ಒಂದು ವೈಶಿಷ್ಟ್ಯ. ವೀರಶೈವ ತತ್ತ್ವಜ್ಞಾನದಲ್ಲಿ ಚೆನ್ನಬಸವಣ್ಣನ ವಚನಗಳಾಗಲಿ, ಆತನ ಇತರ ಸಾಹಿತ್ಯವಾಗಲಿ ಒಳ್ಳೆ ಶ್ರೇಷ್ಠತೆಯನ್ನು ಪಡೆದಿವೆ. ಮತ್ತು ಕನ್ನಡ ಸಾಹಿತ್ಯಕ್ಕೆ ವಿಶೇಷ ಕಳೆಯನ್ನು ತಂದುಕೊಟ್ಟಿವೆ. ಅಲ್ಲದೆ ಅವುಗಳ ಅನುಭವ ತಿರುಳುಗಳು ಮನೋಗಮ್ಯವಾಗಿವೆ. ಚೆನ್ನಬಸವಣ್ಣನವರು ಜ್ಞಾನಕ್ಕೆ ಅಮೋಘವಾದ ಸ್ಥಾನವಿತ್ತಿದ್ದಾರೆ. ಜ್ಞಾನದ ತಳಹದಿ, ಅದರ ಗೋಪುರಕ್ಕೆ ಇರುವ ಒಂದು ವಾಸ್ತವತೆ ಮತ್ತು ಅದನ್ನು ಸಾಧಿಸಿದವನ ಸ್ಥಿತಿಗಳನ್ನು ಕೆಳಗಿನ ವಚನದಲ್ಲಿ ನೋಡಿ.

"ಅರುಹಿಲ್ಲದ ಕಾರಣ ಭವಕ್ಕೆ ಬಂದರು. ಅರುಹಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಗುರುವಿಲ್ಲ. ಗುರುವಿಲ್ಲದವಂಗೆ ಲಿಂಗವಿಲ್ಲ. ಲಿಂಗವಿಲ್ಲದವಂಗೆ ಜಂಗಮವಿಲ್ಲ. ಜಂಗಮವಿಲ್ಲದವಂಗೆ ಪಾದತೀರ್ಥ ಪ್ರಸಾದವಿಲ್ಲ. ಪಾದತೀರ್ಥ ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ. ಅರಿವಿನ ಸಾಹಿತ್ಯ ಆಚಾರ. ಆಚಾರ ಸಾಹಿತ್ಯ ಗುರು. ಗುರು ಸಾಹಿತ್ಯ ಲಿಂಗ. ಲಿಂಗ ಸಾಹಿತ್ಯ ಜಂಗಮ. ಜಂಗಮ ಸಾಹಿತ್ಯ ಪ್ರಸಾದ. ಪ್ರಸಾದ ಸಾಹಿತ್ಯ ಗಣತ್ವ. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇವೆಲ್ಲ ಒಂದುಗೂಡಿದವರಲ್ಲಿ ಎಲ್ಲ ಸ್ಥಲವುಂಟು. ಆತ ನಿಷ್ಕಳ ಲಿಂಗೈಕ್ಯ. ಆತ ಅಪೂರ್ವ." ಆದ್ದರಿಂದ ಅರಿವು ಅರ್ಥಾತ್ ಜ್ಞಾನವು ಎಲ್ಲಕ್ಕೂ ಮುಖ್ಯ. ಜ್ಞಾನವೇ ಸಕಲ ತತ್ತ್ವಗಳ ತಳಹದಿಯಾಗಿದೆ. ಅದಿರದಿದ್ದರಿಂದಲೇ ಅವರು ಕಾರಣಭವಕ್ಕೆ ಬಂದರೆಂಬುದನ್ನು ತೋರಿಸುತ್ತಾರೆ.

ಇಂಥ ಆಧ್ಯಾತ್ಮಿಕ ತತ್ತ್ವಜ್ಞಾನಿಯು, ಷಟ್‌ಸ್ಥಲ ಚಕ್ರವರ್ತಿಯ ಸಾಹಿತ್ಯ ಸಂಪತ್ತನ್ನು ಕೂಡಿಹಾಕುವದು ಅಗತ್ಯವಾಗಿದೆ. ಇಂಥ ಸಾಹಿತ್ಯದ ಮೂಲಕ,ಉದಾರವಾದ ವೀರಶೈವ ಧರ್ಮಕ್ಕೆ ಉನ್ನತವಾದ ಸ್ಥಾನವಿದೆಯೆನ್ನಬಹುದು. ಆದರೆ ಅದರ ಬಗ್ಗೆ ಕುರುಹನ್ನೇನಾದರೂ ಹೇಳಬಲ್ಲಿರಾ? ಎಂದು ಯಾರಾದರೂ ಕೇಳಿದರೆ ವೀರಶೈವರು ಏನನ್ನು

ತೋರಿಸುವರು. ಇದಕ್ಕಾಗಿಯೇ ಧಾರ್ಮಿಕ ಸಾಹಿತ್ಯ ಸಂಕಲನವು ಅವಶ್ಯವಾಗಿದೆ. ವೀರಶೈವ ಸಾಹಿತ್ಯದಲ್ಲಿ ಚೆನ್ನಬಸವಣ್ಣನವರ ಸಾಹಿತ್ಯಕ್ಕೆ ಉನ್ನತವಾದ ಸ್ಥಾನವಿದೆ. ಕನ್ನಡ ಸಾಹಿತ್ಯದಲ್ಲಿ ಆಧ್ಯಾತ್ಮಿಕ ದೃಷ್ಟಿಯಿಂದ ಅದಕ್ಕೆ ಕಲಶ ಸ್ಥಾನವೂ ಇದೆ. ಈ ಸಂಕಲನದಲ್ಲಿ ಚೆನ್ನಬಸವಣ್ಣನವರ ಹಲವು ವಚನಗಳೊಂದಿಗೆ ಕರಣ ಹಸಿಗೆ, ಮಿಶ್ರಾರ್ಪಣ ಮಂತ್ರಗೋಪ್ಯ, ಘಟಚಕ್ರ, ಕುಂಡಲನಿ ಉದ್ಧರಣೆ ಹಾಗೂ ಅಕ್ಕಗಳ ಮತ್ತು ಪ್ರಭುದೇವರ ಸೃಷ್ಟಿಯ ವಚನಗಳನ್ನೂ, ಚೆನ್ನಬಸವಣ್ಣನವರ ಬಗ್ಗೆ ಕೆಲವು ಶರಣರ ಅಭಿಪ್ರಾಯಗಳನ್ನೂ ಕೊಡಲಾಗಿದೆ. ಚೆನ್ನಬಸವಣ್ಣನವರು ವರ್ಣನೆ ಮಾಡುವಲ್ಲಿ ಆಧ್ಯಾತ್ಮ ತತ್ತ್ವಗಳಿಂದಲೂ, ಭೌತಿಕ ವಸ್ತುಗಳಿಂದಲೂ ವರ್ಣನೆ ಮಾಡಿದ್ದುಂಟು. ಉದಾಹರಣೆಗಾಗಿ ಕಲ್ಯಾಣ ಪಟ್ಟಣದ ವರ್ಣನೆಯನ್ನವಲೋಕಿಸಬಹುದು. (ಪು. ೨೩೨) ಅಲ್ಲದೆ 'ಕರಣ ಹಸಿಗೆ', 'ಮಿಶ್ರಾರ್ಪಣ'ಗಳನ್ನವಲೋಕಿಸಿದಾಗ ಅವೆರಡೂ ವೀರಶೈವ ಸಾಹಿತ್ಯದ ವಿಶ್ವಕೋಶಗಳೆನ್ನಬಹುದು.

ಶ್ರೀ ಚೆನ್ನಬಸವಣ್ಣನವರು ಸೃಜಿಸಿದ ಸಾಹಿತ್ಯ ಸಂಪತ್ತನ್ನೆಲ್ಲ ತಮ್ಮ ಹಿರಿದಾದ ಪ್ರಯತ್ನದಿಂದ ಬೆಳೆಸಿ ಒಂದುಗೂಡಿಸಿ ಸಂಪಾದಕರಾದ ಶ್ರೀ ಅನ್ನದಾನಯ್ಯ ಪುರಾಣಿಕರು ಸಾಮಾನ್ಯ ಜನರಿಗೂ ಸರಳವಾಗುವಂತೆ ಇರಿಸಿದ್ದಾರೆ. ಇದನ್ನು ಚೆನ್ನಾಗಿ ಅಭ್ಯಾಸ ಮಾಡಿದವರಿಗೆ ಅರಿವು ಜಾಗೃತವಾಗುವದೆಂಬುದರಲ್ಲಿ ಸಂದೇಹವಿಲ್ಲ. ಈ ಸಂಕಲನ ಕಾರ್ಯವನ್ನು ಕೈಕೊಂಡ ಪಂ. ಕಲ್ಲಿನಾಥಶಾಸ್ತ್ರಿಗಳು ದ್ಯಾಂಪೂರ ಇವರು ಇಂಥ ಸಾಹಿತ್ಯ ರತ್ನಗಳನ್ನು ಪರಿಶೋಧಿಸಿ ಕನ್ನಡಿಗರಿಗೆ ಕೈಗನ್ನಡಿ ಕೈಪಿಡಿಯನ್ನಾಗಿ ಮಾಡಿದ್ದು ಅತ್ಯಂತ ಸ್ತುತ್ಯವಾದ ಕಾರ್ಯವಾಗಿದೆ. ಜಗದೀಶನು ಇವರಿಗೆ ಯಾವಾಗಲೂ ಆ ಸಾಹಿತ್ಯ ಸಮಯವನ್ನು ಒದಗಿಸಲೆಂದೂ ಕನ್ನಡಿಗರೆಲ್ಲರೂ ಈ ಸಾಹಿತ್ಯ ಗ್ರಂಥಕ್ಕೆ ಸಹಾಯವನ್ನು ನೀಡಬೇಕೆಂದೂ ಹಾರೈಸುತ್ತೇವೆ.

ಇತಿ ಶಿವಂ ಭೂಯಾತ್

## ಸರ್ವಧರ್ಮ ಪರಿಷತ್ತಿನ ಸಂಸ್ಥಾಪಕರಾದ ನವಿಲುಗುಂದ ಶ್ರೀ ಮ.ನಿ.ಪ್ರ. ಬಸವಲಿಂಗ ಮಹಾಸ್ವಾಮಿಗಳ ಸಂದೇಶ

ಕರ್ನಾಟಕಾಂಗ್ಲ ಪದವೀಧರರಾದ ಶ್ರೀ ಪುರಾಣಿಕ ಅನ್ನದಾನಯ್ಯನವರು, ಲಿಂಗಾಂಗಿ ಧರ್ಮದ ತತ್ತ್ವಜ್ಞಾನಕ್ಕೆ ತಳಹದಿಯಾಗಿರುವ ಜ್ಞಾನನಿಧಿ ಶ್ರೀ ಚೆನ್ನಬಸವಣ್ಣನವರ ಪ್ರಸಾದವಾಣಿಯಿಂದ ಬಂದ ಕರಣಹಸಿಗೆ, ಮಿಶ್ರಾರ್ಪಣ, ಮಂತ್ರಗೋಪ್ಯವೆಂಬ ಗ್ರಂಥ ಸಮುಚ್ಚಯಕ್ಕೆ ಒಂದು ಸಂದೇಶವನ್ನೀಯಲು ಕೇಳಿರುವರು.

ಶ್ರೀ ಚೆನ್ನಬಸವಣ್ಣನವರ ಕೇವಲ ಸಾಂಪ್ರದಾಯಿಕತೆಯನ್ನು ಮಾತ್ರ ಬಲಗೊಂಡು ನಾಲ್ಕು ಮಾತನ್ನು ಇಲ್ಲಿ ಬರೆಯಬೇಕಾಗಿದೆ. ವೀರಶೈವ ತತ್ತ್ವಶಾಸ್ತ್ರದಲ್ಲಿ ಅಥವಾ ಶಿವಶರಣರ ವಚನ ವಾಙ್ಮಯದಲ್ಲಿ, ಆದಿ ಅನಾದಿಯಿಂದತ್ತತ್ತ " ಸ್ಥಲ " ಒಂದೇ ಇದ್ದಿತ್ತಾಗಿಯೂ, ಅದೇ ಸ್ವಶಕ್ತಿ ಕ್ಷೋಭ ಮಾತ್ರದಿಂದ 'ಅಂಗ' 'ಲಿಂಗ'ವೆಂದೆರಡಾಗಿ ಪರಿಣಮಿಸಿತಾಗಿಯೂ, ಕೊನೆಗೆ ಪ್ರವೃತ್ತಿ ನಿವೃತ್ತಿಯಾಗಿ, ಅಂಗ ಲಿಂಗಗಳ ಸಮರಸತೆಯಿಂದ " ಸ್ಥಲ "ವೊಂದೇ ಉಳಿಯುವದಾಗಿಯೂ ಹೇಳಿರುವದು ಸರಿಯಷ್ಟೆ.

ಈ ಆಗುಹೋಗುಗಳ ಗಮ್ಯ ಗುರಿಗಳತ್ತ ಲಿಂಗಾಂಗಿಗಳ (ವೀರಶೈವರ) ಚಿತ್ತವನ್ನೆಳೆಯುವದೇ ಮೇಲ್ಕಂಡ ಗ್ರಂಥತ್ರಯದ ಮುಖ್ಯೋದ್ದೇಶವಾಗಿದೆಯೆನ್ನಬಹುದು.

ಮೂವತ್ತಾರು ತತ್ವಗಳ ಹಂಚಿಕೆ, ಸಂಸಾರ ಬೀಜವಾದ ಮನವು ಮಹಾಲಿಂಗವಾಗುವ ಬಗೆ, ಒಳಹೊರಗೆಲ್ಲ ಲಿಂಗಸಂಗವಾಗುವ ರೀತಿ ನೀತಿ, ಅರ್ಪಣ ಅನುಸಂಧಾನಗಳ ಸಕ್ರಮವಾದ ತಿಳಿವಳಿಕೆ - ಇವುಗಳೆಲ್ಲವನ್ನೂ ಈ ಗ್ರಂಥದಲ್ಲಿ ನಾವು ನಿಚ್ಚಳವಾಗಿ ನೋಡಬಹುದಾಗಿದೆ. ಉದಾಹರಣಾರ್ಥವಾಗಿ ಇದರಲ್ಲಿರುವ " ನೋಡ ನೋಡಲು ಲಿಂಗ । ದಾಕಾರ ತಾನಾಗಿ । ನಾದಬಿಂದುವಿನ ಕಳೆ ಶಿವಕಳೆಯೊಳು । ಕೂಡೆ ಬಲಿದಾಲಿಂಗ ತಾನಾದಲ್ಲಿ । ನಾದಬಿಂದುಕಳಾತೀತನಾದ "

" ಹೃದಯ ಪೀಠವ ಬಲಿದು ಸದಮಲ ಬೆಳಗಿನಿಂ । ಫಲಪದವ ನೊದೆದು ನಿಜದೊಳು ನಿಂದೆನು "

" ನೋಡಲಿಲ್ಲ ನುಡಿಯಲಿಲ್ಲ ಕೂಡಲಿಲ್ಲ ಅಪ್ರತಿಮಂಗೊಡಲಿಲ್ಲ "

ಈ ಮೊದಲಾದ ಅಮೃತ ವಾಕ್ಯಗಳು ವೀರಶೈವ ಮಾರ್ಗದ ಚರಮ ಗುರಿಯನ್ನು, ಅದರ ಮಹತಿಯನ್ನು ಸಾರಿಸಾರಿ ಹೇಳುತ್ತವೆ.

ಇಂತಹ ಅಸಾಧಾರಣ ಗೌರವಯುತವೆಂದ ಅತ್ಯುಪಯುಕ್ತವಾದ ಹೊತ್ತಿಗೆಯನ್ನು ಹೊರಡಿಸಿ ಶ್ರೀ ಅನ್ನದಾನಯ್ಯನವರು ವೀರಶೈವ ಸಮಾಜಕ್ಕಷ್ಟೇ ಅಲ್ಲ, ವೀರಶೈವ ತತ್ತ್ವಜಿಜ್ಞಾಸುಗಳಾದ ಇತರ ಸಮಾಜ ಬಂಧುಗಳಿಗೂ ಲಿಂಗಾಂಗಿ ಧರ್ಮದ ತಿರುಳನ್ನು ತೋರಿಸಿ ಕೊಡುವ ಮೂಲಕ ಮಹದುಪಕಾರ ಮಾಡಿದ್ದಾರೆ. ಇದರಿಂದಾಗಿ ಧನ್ಯತೆಯನ್ನು ಪಡೆದಿದ್ದಾರೆ ಶ್ರೀ ಅನ್ನದಾನಯ್ಯನವರು ಇನ್ನೂ ಹೆಚ್ಚು ಹೆಚ್ಚಾಗಿ ಜ್ಞಾನರೂಪವಾದ ಅನ್ನವನ್ನು ನೀಡಿ ನೀಡಿ ಅನ್ನದಾಸಿಗಳಾಗಿ ಬಾಳಲಿ. ಇದುವೇ ನಮ್ಮ ಹಿರಿಯಾಸೆ.

ಜಗದೀಶನು ಅದನ್ನು ಅನುಗ್ರಹಿಸಲಿ.



## ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪಂಡಿತರತ್ನಂ ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳವರ ಶುಭ ಹರಕೆ

ಸಹಜೀವನ ಸಾಹಿತ್ಯಮಾಲೆಯ ಪ್ರಕಟನೆಯಾದ " ಶ್ರೀ ಚೆನ್ನ ಬಸವ ಸಾಹಿತ್ಯ " ಎಂಬ ಪುಸ್ತಕವನ್ನು ನಾನು ಕುತೂಹಲದಿಂದ ಓದಿ ನೋಡಿದ್ದೇನೆ. ಇದರಲ್ಲಿ ಚೆನ್ನಬಸವಣ್ಣನವರ ಸಮಗ್ರ ಗ್ರಂಥಗಳನ್ನು ಒಂದೆಡೆ ಕೂಡಿಸಿ ಮುದ್ರಿಸಲು ಮಾಡಿದ ಸಂಕಲ್ಪ ನಿಜಕ್ಕೂ ಶ್ಲಾಘ್ಯವೆನಿಸಿದೆ. ಕನ್ನಡ ಕವಿಚರಿತ್ರೆಯಲ್ಲಿ, " ಚೆನ್ನಬಸವೇಶ್ವರನು ಷಟ್‌ಸ್ಥಳ ವಚನ, ಕರಣ ಹಸುಗೆ, ಮಿಶ್ರಾರ್ಪಣ, ಪದಮಂತ್ರಗೋಪ್ಯ, ಮಂತ್ರ ಗೋಪ್ಯ, ಕಾಲಜ್ಞಾನ, ಘಟಚಕ್ರದ ವಚನ, ರಾಜಯೋಗ ವಚನ ಮತ್ತು ರುದ್ರಭಾರತ ಸೃಷ್ಟಿ " ಎಂಬ ೯ ಗ್ರಂಥಗಳನ್ನು ಬರೆದಂತೆ ಹೇಳಿದೆ. ಪ್ರಕೃತ ಪ್ರಕಟನೆಯಲ್ಲಿ'ರುದ್ರಭಾರತ ಸೃಷ್ಟಿ'ಯೊಂದನ್ನು ಬಿಟ್ಟು ಉಳಿದೆಲ್ಲ ಗ್ರಂಥಗಳು ಸಂಗ್ರಹಿಸಿ ಪ್ರಕಟಿಸಲ್ಪಟ್ಟಿವೆಯಲ್ಲದೆ ಕುಂಡಲಿ ಉದ್ಧರಣೆ, ಪ್ರಭುದೇವರ ಸೃಷ್ಟಿವಚನ ಮತ್ತು ಅಕ್ಕಗಳ ಸೃಷ್ಟಿವಚನ ಎಂಬ ಮತ್ತೆ ಮೂರುಗ್ರಂಥಗಳನ್ನೂ ಸಂಗ್ರಹಿಸಿ ಕೊಡಲಾಗಿದೆ.

ವಿಮರ್ಶಾತ್ಮಕವಾಗಿ ಚೆನ್ನಬಸವೇಶ್ವರನ ಚರಿತ್ರೆ ಮತ್ತು ತತ್ತ್ವ ಜ್ಞಾನವನ್ನು ಅಭ್ಯಾಸ ಮಾಡುವವರಿಗೆ ಈ ಗ್ರಂಥವು ತುಂಬಾ ಸಹಾಯ ವೆನಿಸಿದೆ. ನಮಗೆ ತಿಳಿದಿರುವ ಮಟ್ಟಿಗೆ ಈ ಮುಂದೆ ಹೇಳಿರುವಂತೆ ಹಲ ವಾರು ಮಂದಿ ವೀರಶೈವ ಕವಿಗಳು ಕನ್ನಡ, ಸಂಸ್ಕೃತ, ತೆಲುಗು ಭಾಷೆ ಗಳಲ್ಲಿ ಚೆನ್ನಬಸವೇಶ್ವರನನ್ನು ಕುರಿತು ಕಾವ್ಯಗಳನ್ನು ಕಟ್ಟಿ ಹಾಡಿದ್ದಾರೆ.

ಕ್ರಿ ಶ. ೧೫೮೦ರಲ್ಲಿ ಹಂಪೆಯಲ್ಲಿದ್ದ ವಿರೂಪಾಕ್ಷ ಪಂಡಿತನು ಕನ್ನಡದಲ್ಲಿ ಚೆನ್ನಬಸವ ಪುರಾಣವೆಂಬ ಉದ್ದಾಮ ಗ್ರಂಥವನ್ನು ಬರೆದಿದ್ದಾನೆ. ಕ್ರಿ. ಶ. ೧೧೯೫ ರಲ್ಲಿ ಆಂಧ್ರದೇಶದಲ್ಲಿ ಪ್ರಖ್ಯಾತನಾಗಿದ್ದ ಪಾಲ್ಕುರಿಕೆ ಸೋಮನಾಥನು ಕನ್ನಡದಲ್ಲಿ "ಚೆನ್ನಬಸವ ಸ್ತೋತ್ರ ರಗಳೆ" ಎಂಬ ಗ್ರಂಥವನ್ನೂ, ಸಂಸ್ಕೃತದಲ್ಲಿ "ಶ್ರೀ ಚೆನ್ನಬಸವೋದಾಹರಣಂ" ಎಂಬ ಗ್ರಂಥವನ್ನೂ ಬರೆದಿದ್ದಾನೆ ಆಂಧ್ರದೇಶದಲ್ಲಿ ಕ್ರಿ. ಶ. ೧೭೫೧ ರಲ್ಲಿ ಜೀವಿಸಿದ್ದ ತಿತ್ತಲೂರಿ ಪಾಪಕವಿಯು "ಚೆನ್ನಬಸವ ಪುರಾಣಮು" ಎಂಬ ಚಂಪೂ ಗ್ರಂಥವನ್ನು ಬರೆದಿದ್ದಾನೆ. ಆಂಧ್ರದೇಶದಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯ ವಂಶೀಯನೆಂದು ಪ್ರಸಿದ್ಧನಾದ ಕವಿ ಕುಮಾರಸ್ವಾಮಿಯು ಸಂಸ್ಕೃತದಲ್ಲಿ "ಚೆನ್ನಬಸವ ಪುರಾಣಂ" ಎಂಬ ಕಾವ್ಯವನ್ನು ಬರೆದಿದ್ದಾನೆ. ಗೂಳೂರು ಸಿದ್ಧವೀರಣಾಚಾರ್ಯನ ಶೂನ್ಯಸಂಪಾದನೆಯಲ್ಲಿ "ಚೆನ್ನಬಸವೇಶ್ವರ ಸಂಪಾದನೆ" ಎಂಬ ಒಂದು ಪ್ರಕರಣವಿದೆ.

ವೀರಶೈವ ಪುರಾಣಗಳಲ್ಲಿ ಮಹಾಶರಣೆ ಅಕ್ಕನಾಗಮ್ಮ ಮತ್ತು ಶಿವಸ್ವಾಮಿ ಇವರ ಪುತ್ರನೆಂದೂ, ಶ್ರೀ ಬಸವೇಶ್ವರನ ಸೋದರಳಿಯನೆಂದೂ ಚೆನ್ನಬಸವೇಶ್ವರನು ಸುಪ್ರಸಿದ್ಧನಾಗಿದ್ದಾನೆ. ವಚನಶಾಸ್ತ್ರದಲ್ಲಿ ಚೆನ್ನಬಸವಣ್ಣನು, ಷಟ್‌ಸ್ಥಳ ಸಾರ್ವಭೌಮ, ಅನುಭವ ಮಂಟಪದ ವ್ಯವಸ್ಥಾಪಕ, ಶೂನ್ಯಸಿಂಹಾಸನದ ಎರಡನೆಯ ಅಧ್ಯಕ್ಷ ಎಂದು ಮೊದಲಾಗಿ ನಿರೂಪಿತವಾಗಿದೆ. ಇದನ್ನೆಲ್ಲ ನೋಡಿದಾಗ ಶ್ರೀ ಚೆನ್ನಬಸವೇಶ್ವರನು ವೀರಶೈವ ಧರ್ಮರಾಜ್ಯದಲ್ಲಿ ಮತ್ತು ಸಾಹಿತ್ಯ ಪ್ರಪಂಚದಲ್ಲಿ ಅತ್ಯಂತ ಪ್ರಖ್ಯಾತನಾದ ವಿಭೂತಿ ಎಂದು ಸ್ಪಷ್ಟವಾಗುತ್ತದೆ.

ಸಂಪಾದಕರೂ ಪ್ರಕಾಶಕರೂ ಆದ ಶ್ರೀ ಅ. ಕ. ಪುರಾಣಿಕರು ಚೆನ್ನಬಸವೇಶ್ವರ ಸಂಬಂಧವಾದ ಎಲ್ಲ ಗ್ರಂಥಗಳನ್ನೂ ಒಟ್ಟುಗೂಡಿಸಿ ಈ ರೀತಿಯಲ್ಲಿ ಕೆಲಸ ಮಾಡುವವರಿಗೆ ಮಾರ್ಗದರ್ಶಕರಾಗಿದ್ದಾರೆ. ಕಪ್ಪಡಿ ಸಂಗಮದಲ್ಲಿ ಹುಟ್ಟಿ, ಕಲ್ಯಾಣದಲ್ಲಿ ಪ್ರಬುದ್ಧನೆನಿಸಿ, ಅನುಭವ ಮಂಟಪದಲ್ಲಿ ಪ್ರಕಾಶಿಸಿ, ಕಾರವಾರ ಜಿಲ್ಲಾ ಉಳುವಿಯಲ್ಲಿ ಐಕ್ಯಗೊಂಡ ಮಹಾತ್ಮ ಚೆನ್ನಬಸವೇಶ್ವರನ ಈ ಸಮಗ್ರ ಸಾಹಿತ್ಯವನ್ನು ಕನ್ನಡ ಜನ ಓದಿ ಕೃತಾರ್ಥರಾಗಲಿ. ದ್ವಿತೀಯ ಮುದ್ರಣದಲ್ಲಿ ಈ ಗ್ರಂಥವು ಇನ್ನೂ ಹೆಚ್ಚು ಶುದ್ಧವಾಗಿ ಪ್ರಕಟವಾಗಲೆಂದು ನಾವು ಹಾರೈಸುತ್ತೇವೆ.

ಚೆನ್ನಬಸವೇಶ್ವರನ ವಿಚಾರವನ್ನು ತಿಳಿಯಬೇಕೆನ್ನುವವರಿಗೆ ಈ ಗ್ರಂಥ ಕೈದೀವಿಗೆಯಾಗಲಿ.

ಸಿರಿಗನ್ನಡಂ ಗೆಲ್ಗೆ!

ರಿಂದ ಶ್ರೀ ಚೆನ್ನಬಸವಣ್ಣನವರಿಗೆ ಷಟ್ಸ್ಥಲ ಚಕ್ರವರ್ತಿಯೆಂದು ಆಗಿನ ಶಿವಶರಣರು ಒಳ್ಳೆ ಅಭಿಮಾನದಿಂದ ಮತ್ತು ವಾತ್ಸಲ್ಯದಿಂದ ಕರೆದಿರುವರು; ಈಗಿನವರು ಅದನ್ನೇ ನಂಬಿರುವರು.

ಶೈವ ಶಾಸ್ತ್ರವು ಬಲು ವಿಸ್ತೃತವಾದುದು. ಅದರಲ್ಲಿ ಅನೇಕ ಅವಾಂತರ ಭೇದಗಳಿವೆ. ವೀರಶೈವವು ಶೈವಧರ್ಮದ ಒಂದು ವಿಶಿಷ್ಠ ಭೇದ. ವೀರಶೈವರ ತತ್ವಜ್ಞಾನದ ಬಗೆಗೆ ಪಂಡಿತರಲ್ಲಿ ಒಮ್ಮತವಿಲ್ಲ. ಕೆಲವು ಶರಣರ ವಚನಗಳಲ್ಲಿ ಅದ್ವೈತದ ಛಾಯೆ ಇದ್ದರೆ ಮತ್ತೆ ಕೆಲವರ ವಚನಗಳಲ್ಲಿ ದ್ವೈತ ಭಾವನೆಯು ಒಡಮೂಡಿದೆ. ಕೆಲವು ವೀರಶೈವ ಸಂಸ್ಕೃತ ಗ್ರಂಥಗಳಲ್ಲಿ ವಿಶಿಷ್ಟಾದ್ವೈತ ತತ್ವಗಳೂ ಕಂಡುಬರುವವು. ವೀರಶೈವರ ಭಾಷ್ಯವೆಂದು ಕರೆಯಲ್ಪಡುವ ಶ್ರೀ ಪತಿಪಂಡಿತರ ಶ್ರೀಕರ ಭಾಷ್ಯದಲ್ಲಿ ವೀರಶೈವ ತತ್ವಜ್ಞಾನವು ಶಕ್ತಿವಿಶಿಷ್ಟಾದ್ವೈತಪರವಾಗಿದೆಯೆಂದು ಪ್ರತಿಪಾದಿಸಲಾಗಿದೆ. ಶ್ರೀ ಮಗ್ಗೆಯ ಮಾಯಿದೇವರಂಥಹ ಜ್ಞಾನಿಗಳು ತಮ್ಮ ಅನುಭವಸೂತ್ರದಲ್ಲಿ ದಕ್ಷಿಣದ ಶಿವಾಚಾರ್ಯರ ಅದ್ವೈತ ಛಾಯೆಯನ್ನೊಳಗೊಂಡ ಶಿವಜೀವೈಕ್ಯ ಜ್ಞಾನವನ್ನು ಪ್ರತಿಪಾದಿಸುವರು. ಆದುದರಿಂದ ಈಗ ಯಾರಾದರೂ ಅನ್ಯಮತ ಪಂಡಿತರು ವೀರಶೈವ ತತ್ವಜ್ಞಾನದ ತಳಹದಿ ಯಾವುದೆಂದು ಕೇಳಿದರೆ ಸರಿಯಾಗಿ ಹೇಳುವುದು ಕಷ್ಟ. ಒಂದಿಲ್ಲೊಂದು ದಿನ ಇದನ್ನು ನಿರ್ಣಯಿಸಲೇಬೇಕಾಗುವದು.

ತತ್ವಜ್ಞಾನದ(Philosophy) ಎಲ್ಲ ಅಂಗಗಳನ್ನು ಒಳಕೊಂಡ ದರ್ಶನವು ತತ್ವಜ್ಞಾನ ಶಾಸ್ತ್ರದಲ್ಲಿ ಮನ್ನಣೆಯನ್ನು ಪಡೆಯುವದು. ಈ ತತ್ವ ಶ್ರೀ ಚೆನ್ನಬಸವಣ್ಣನವರಿಗೆ ತಿಳಿದಿತ್ತು. ಆದುದರಿಂದ ವೀರಶೈವ ಧರ್ಮದ ಎಲ್ಲ ಅಂಗಗಳನ್ನು ಸರಿಪಡಿಸಲು ಯತ್ನಿಸಿದ ಪ್ರಥಮ ಶ್ರೇಯಸ್ಸು ಅವರಿಗೆ ಸಲ್ಲುವದು. ಸಾಮಾನ್ಯರ ಮನವನ್ನು ಎಳೆಯುವ ಗೋಜಿಗೆ ಹೋಗದೆ ಗೂಢ ಮತ್ತು ಕ್ಲಿಷ್ಟವಾದ ತತ್ವಶಾಸ್ತ್ರವನ್ನು ವೀರಶೈವರಿಗನುಸರಿಸಿ ವಿವರಿಸುವ ಪ್ರಯತ್ನ ಅವರ ಕೃತಿಗಳಲ್ಲಿ ಒಡ

ಮೂಡಿರುವದು. ವೀರಶೈವರ ತತ್ವಜ್ಞಾನವನ್ನು ಸರಿಪಡಿಸಲು ಯತ್ನಿಸಿದ ಮಹಾತ್ಮರಲ್ಲಿ ಅವರು ಅಗ್ರಗಣ್ಯರು. ಅವರ ಕೃತಿಗಳಲ್ಲಿ ಕರಣಹಸಿಗೆ, ಮಿಶ್ರಾರ್ಪಣ,ಪದಮಂತ್ರಗೋಪ್ಯ, ಹಿರಿಯ ಮಂತ್ರಗೋಪ್ಯ, ಷಟಚಕ್ರ, ಷಟ್‌ಸ್ಥಲದ ವಚನಗಳು ಮುಖ್ಯವಾದವು. ಕರಣಹಸಿಗೆಯೆಂದರೆ ತತ್ವ ಸಂಗ್ರಹದ ವಿಭಾಗ. ಸಾಂಖ್ಯಶಾಸ್ತ್ರದಲ್ಲಿ ಅಥವಾ ಶೈವಸಿದ್ಧಾಂತಶಾಸ್ತ್ರದಲ್ಲಿ ತತ್ವಗಳ ವಿವರಣೆಯಿದ್ದಂತೆ ಕರಣ ಹಸಿಗೆಯಲ್ಲಿ ವೀರಶೈವರ ಪ್ರಕಾರ ತತ್ವಗಳ ವಿಭಾಗವಿದೆ. ಸಾಂಖ್ಯಕಾರಿಕಾ ಅಥವಾ ಭೋಜಕಾರಿಕಾ ಇವುಗಳನ್ನು ಕರಣಹಸಿಗೆ ಹೋಲುವದಿಲ್ಲ. ವಿಷಯ ನಿರೂಪಣೆಯಲ್ಲಿ ಬಹಳ ವ್ಯತ್ಯಾಸವಿದೆ. ಶ್ರೀ ಚೆನ್ನಬಸವಣ್ಣನವರು ಕರಣಹಸಿಗೆಯನ್ನು ವಿಜಯಭೈರವಿಯೆಂಬ ಆಗಮದಿಂದ ಸಂಗ್ರಹಿಸಿರುವರೆಂದು ಒಂದು ಪ್ರತಿಯಲ್ಲಿ ಹೇಳಲಾಗಿದೆ. ಶ್ರೀ ಚೆನ್ನಬಸವಣ್ಣನವರ ಸಮಗ್ರ ಕೃತಿಗಳ ಅಭ್ಯಾಸ ಒಂದು ಕಾಲದಲ್ಲಿ ಬಹಳವಾಗಿತ್ತು. ಪ್ರತಿಯೊಬ್ಬ ವೀರಶೈವ ಸ್ವಾಮಿಗಳು ಇವುಗಳನ್ನು ಅರಿತು ಮುಖೋದ್ಗತ ಮಾಡಿಕೊಳ್ಳಲೇ ಬೇಕಾಗಿತ್ತು. ಸ್ವಾಮಿಗಳಿಗೆ ಅಧಿಕಾರ ದೀಕ್ಷೆಯನ್ನು ಕೊಡುವಾಗ ಶ್ರೀ ಚೆನ್ನಬಸವಣ್ಣನವರ ಕೃತಿಗಳ ಹೊತ್ತಿಗೆಯನ್ನು ಕೊಡುತ್ತಿದ್ದರೆಂದು ಪ್ರತೀತಿ. ಇದೇ ಸ್ವಾಮಿಗಳ ಇಹಪರದ ಸೊತ್ತು. ಅಂದಮೇಲೆ ಇವುಗಳ ಮಹತ್ವ ಮತ್ತು ಪಾವಿತ್ರ್ಯ ಎಷ್ಟೆಂಬುದನ್ನು ಊಹಿಸಬಹುದು ಈಗಲೂ ಈ ಗ್ರಂಥಗಳಲ್ಲಿರುವ ಜ್ಞಾನವು ಪವಿತ್ರವಾದುದು ಮತ್ತು ಅತಿ ಶ್ರಮದಿಂದ ಸಂರಕ್ಷಿಸಲ್ಪಡತಕ್ಕದು ಎಂದು ಅನೇಕ ಸ್ವಾಮಿಗಳು ಭಾವಿಸುವರು.

ಇಂತಹ ಪವಿತ್ರವಾದ ಗ್ರಂಥಗಳನ್ನು ದ್ಯಾಂಪುರದ ಪಂ. ಕಲ್ಲಿನಾಥ ಶಾಸ್ತ್ರಿಗಳು ಪುರಾಣಿಕಮಠ ಇವರ ಮಕ್ಕಳಾದ ಶ್ರೀ ಅನ್ನದಾನಯ್ಯನವರು, ಬಿ.ಕಾಮ್.,ಎಲ್‌ಎಲ್.ಬಿ. ಇವರು ಪರಿಶ್ರಮಪಟ್ಟು ಸಂಪಾದಿಸಿ, ಪ್ರಕಟಿಸಿ ಜನತೆಯಮೇಲೆ ಮಹೋಪಕಾರ ಮಾಡಿರುವರು. ಈ ಚಿಕ್ಕ ಹೊತ್ತಿಗೆಯಲ್ಲಿ ಶ್ರೀ ಚೆನ್ನಬಸವಣ್ಣನವರ ಕೃತಿಗಳನ್ನಷ್ಟೇ ಅಲ್ಲದೆ "ಶ್ರೀ ಪ್ರಭುದೇವರ ಮತ್ತು ಅಕ್ಕಗಳ ಸೃಷ್ಟಿಯ ವಚನ"ಗಳನ್ನು ಸೇರಿಸಿ

ರುವರು. ಇದೂ ಯೋಗ್ಯವೇ. ಈ ಗ್ರಂಥಗಳನ್ನು ಅಲ್ಲಲ್ಲಿ ತಿದ್ದಿ ಅರ್ಥ ಸರಿಯಾಗುವಂತೆ ಶೋಧಿಸಿ ಮುದ್ರಿಸಿರುವರು. ಇದು ಸಾಮಾನ್ಯರ ದೃಷ್ಟಿಯಿಂದ ಒಳ್ಳೆಯದೇ. ಜಿಜ್ಞಾಸುಗಳು ಓದಿ ಅರ್ಥ ಮಾಡಿಕೊಳ್ಳಲು ಸುಲಭವಾಗಿದೆ.

ಈ ಗ್ರಂಥಕ್ಕೆ ಮುನ್ನುಡಿ ಬರೆಯಬೇಕೆಂದು ಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಬಸವಲಿಂಗ ಮಹಾಸ್ವಾಮಿಗಳು ಗವಿಮಠ ನವಿಲುಗುಂದ ಇವರು ಅಪ್ಪಣೆ ಕೊಡಿಸಿದರು. ಪೂಜ್ಯ ಗ್ರಂಥಗಳಿಗೆ ಪೂಜ್ಯರೆ ಆಶೀರ್ವದಿಸಿದ್ದರೆ ಹೆಚ್ಚು ಗೌರವ ಬರುತ್ತಿತ್ತು. ಇಂತಹ ಗ್ರಂಥಗಳಿಗೆ ಮುನ್ನುಡಿ ಬರೆಯುವವರು ಬಹಳ ಸಮರ್ಥರೂ, ಜಾಗರೂಕರೂ ಇರಬೇಕು. ಪೂಜ್ಯ ಮಹಾಸ್ವಾಮಿಗಳಂತಹವರಿಂದಲೇ ಈ ಕೆಲಸ ಸಾಧ್ಯ. ಆದರೂ ಪೂಜ್ಯರ ಆಜ್ಞೆ ಅನುಲ್ಲಂಘನೀಯವೆಂದು "ವಜ್ರ ಸಮುತ್ಕೀರ್ಣಮಣೌ || ಸೂತ್ರಸ್ಯೇವಾಸ್ತಿಮೇ ಗತಿಃ" ಎಂಬ ಕಾಳಿದಾಸನ ಉಕ್ತಿಯನ್ನು ಸ್ಮರಿಸಿ ಕೆಲವು ಶಬ್ದಗಳನ್ನು ಬರೆಯಲಿಕ್ಕೆ ಯತ್ನಿಸಿರುವೆ. ವೀರಶೈವ ಜಿಜ್ಞಾಸುಗಳು ಶ್ರೀ ಅನ್ನದಾನಯ್ಯನವರ ಪರಿಶ್ರಮದ ಫಲವನ್ನು ಪೂರ್ಣವಾಗಿ ಪಡೆಯಲೆಂದೂ, ಇಂತಹ ಅನೇಕ ಅಮೌಲ್ಯ ಗ್ರಂಥ ರತ್ನಗಳು ಅವರಿಂದ ಪ್ರಕಟವಾಗಲೆಂದೂ ಹಾರೈಕೆ.

ಬಸವೇಶ್ವರ ಕಾಲೇಜ,
ಬಾಗಿಲಕೋಟ.
ದಿ. ೨೫-೯-೫೬.

**ಡಾ. ಶಿ. ಚೆ. ನಂದೀಮಠ,**
ಎಮ್.ಎ., ಪಿ ಎಚ್.ಡಿ (ಲಂಡನ)
ಪ್ರಿನ್ಸಿಪಾಲ.

# ನಮ್ಮ ನುಡಿ

ಷಟ್‌ಸ್ಥಲ ಚಕ್ರವರ್ತಿ ಶ್ರೀ ಚೆನ್ನಬಸವಣ್ಣನವರ ಅಮರ ಕೃತಿಗಳ ಸಂಕಲನವನ್ನು ಸಹೃದಯ ಕನ್ನಡಿಗರ ಕೈಗೊಪ್ಪಿಸುವ ಸುಯೋಗವು ಪ್ರಾಪ್ತವಾದುದು ನಮ್ಮ ಸುಕೃತ. ಕೈಕೊಂಡ ಕಾರ್ಯವು ಬಹುಬೇಗ ಕೈಗೂಡುವಂತೆ ಕೃಪೆದೋರಿದ ಆ ಮಹಾಮಹಿಮನಿಗೆ 'ಮಾಲೆ'ಯು ಸರ್ವದಾ ಉಪಕೃತ.

ವೀರಶೈವ ಧಾರ್ಮಿಕ ಬಾನಿನಲ್ಲಿ ತೊಳಗಿ ಬೆಳಗುತ್ತಿರುವ ಜ್ಞಾನ ಭಾನು ಚೆನ್ನಬಸವಣ್ಣ. ಎಳವೆಯಲ್ಲಿಯೇ ಬ್ರಹ್ಮಜ್ಞಾನವನ್ನು ಪಡೆದು, 'ಷಟ್‌ಸ್ಥಲ ಬ್ರಹ್ಮ' ಎಂದೆನಿಸಿಕೊಂಡವ. ಅವನು ಬರೆದುದೆಲ್ಲ 'ಷಟ್‌ಸ್ಥಲ ಸಿದ್ಧಾಂತ; ಒರೆದುದೆಲ್ಲ ಶಿವಾನುಭವಶಾಸ್ತ್ರ. ಇಂತಹ ಶ್ರೇಷ್ಠ ಶರಣನ ಕೃತಿಗಳನ್ನು ಸಂಗ್ರಹಿಸಿ, ಸಂಪಾದಿಸಿ, ಪ್ರಕಟಗೊಳಿಸುವ ಕಾರ್ಯದತ್ತ ಯಾರ ಗಮನವೂ ಹರಿಯದ ಸಂಗತಿಯು ಈ ಕಾರ್ಯವನ್ನು ಕೈಕೊಳ್ಳುವಂತೆ ಪ್ರೇರೇಪಿಸಿತು. ನಮ್ಮ ಇತಿಮಿತಿಗಳನ್ನು ಅರಿತೂ, ಚೆನ್ನಬಸವಣ್ಣನಲ್ಲಿ ಅಚಲ ವಿಶ್ವಾಸವನ್ನಿಟ್ಟು ಈ ಕಾರ್ಯವನ್ನು ಕೈಕೊಂಡೆವು. ಕೆಲವರು ಪೂಜ್ಯ ಶ್ರೀಗಳವರೂ ಮತ್ತು ಸಹೃದಯ ಸ್ನೇಹಿತರೂ ನಮ್ಮನ್ನು ಹರಸಿ ಹುರಿದುಂಬಿಸಿದರು. ಕಾರ್ಯಾರಂಭವಾಯಿತು.

ಚೆನ್ನಬಸವಣ್ಣನ ಕೃತಿಗಳ ಸಂಗ್ರಹದ ಕಾರ್ಯವನ್ನು ನಮ್ಮ ಪೂಜ್ಯ ತಂದೆಯವರಾದ ಪಂಡಿತ ಕಲ್ಲಿನಾಥಶಾಸ್ತ್ರಿಗಳು ಪ್ರಾರಂಭಿಸಿ, ಹಲವು ಮಠಗಳನ್ನು ಸಂದರ್ಶಿಸಿ, ಕೆಲವು ತಾಳೆಯೋಲೆಗಳನ್ನು ಸಂಗ್ರಹಿಸಿದರು. ಸುಮಾರು ೬೦–೬೫ ವರ್ಷಗಳ ಹಿಂದೆ ಅಚ್ಚಾದ ಒಂದೆರಡು ಪ್ರತಿಗಳೂ ದೊರೆತವು. ಅವುಗಳನ್ನೆಲ್ಲ ಪರಿಶೀಲಿಸಿ, ಪರಿಶೋಧಿಸಿ, ಶುದ್ಧ ಪ್ರತಿಯೊಂದನ್ನು ಪೂಜ್ಯ ಶಾಸ್ತ್ರಿಗಳು ಸಿದ್ಧಗೊಳಿಸಿದರು. ಆ ಪ್ರತಿಯನ್ನೇ ಆಧಾರವಾಗಿರಿಸಿಕೊಂಡು ಸಂಪಾದನ ಮತ್ತು ಮುದ್ರಣ ಕೆಲಸವನ್ನು ಪ್ರಾರಂಭಿಸಿದೆವು.

ಸಂಪಾದನೆಯ ಕಾರ್ಯದಲ್ಲಿ ಅನುಸರಿಸಿದ ವಿಧಾನವನ್ನು ಕುರಿತು ಎರಡು ಮಾತುಗಳನ್ನು ಹೇಳುವುದು ಅವಶ್ಯ. ಅಭ್ಯಾಸಿಗಳಿಗೆ ಅನುಕೂಲವಾಗಲೆಂದು, ಅವರಲ್ಲಿ ಆಸಕ್ತಿ ಹೆಚ್ಚಲೆಂದು, ಗ್ರಂಥದ ಕ್ಲಿಷ್ಟತೆಯನ್ನು ಸರಳಗೊಳಿಸಲು, ಅಖಂಡವಾದ ವಚನಗಳಲ್ಲಿ ಅಡಗಿದ ವಿಷಯಗಳನ್ನು ಆಯ್ದು ವಿಂಗಡಿಸಿ, ಉಪಶೀರ್ಷಿಕದ ಕೆಳಗೆ ಜೋಡಿಸಿ, ಸಾಧ್ಯವಿದ್ದ ವಿವರಣೆ, ಭಾವಾರ್ಥಗಳೊಂದಿಗೆ ಮುದ್ರಿಸಲಾಗಿದೆ. ಚೆನ್ನಬಸವಣ್ಣನ ಕೆಲವು ಕೃತಿಗಳಿಗೆ ಶ್ರೀ ಚೆನ್ನಬಸವ ಸ್ವಾಮಿಗಳು (೧೫೧೦) ಮೊದಲಾದವರು ಬರೆದ ಟೀಕೆಗಳನ್ನು ಸಂದರ್ಭೋಚಿತವಾಗಿ, ಸಂಕ್ಷೇಪವಾಗಿ ಬಳಸಿಕೊಳ್ಳಲಾಗಿದೆ. ಮೂಲ ಕೃತಿಗೆ ಧಕ್ಕೆ ತಗಲದಂತೆ ಶಕ್ಯವಿದ್ದ ಎಲ್ಲ ಜಾಗ್ರತೆಗಳನ್ನೂ ಕೈಕೊಳ್ಳಲಾಗಿದೆ. ಹೀಗೆ ಮಾಡಿದ್ದು ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸುವುದೆಂದು ನಮ್ಮ ಭಾವನೆ. ಅದನ್ನು ವಾಚಕರೇ ನಿರ್ಧರಿಸಬೇಕು.

ಎರಡನೆಯದಾಗಿ ಕೃತಿಗಳ ಜೋಡಣೆಯ ವಿಷಯ. ಕರಣಹಸಿ(ಸು)ಗೆ, ಮಿಶ್ರಾರ್ಪಣ, ಪದ ಮಂತ್ರಗೋಪ್ಯ, ಹಿರಿಯ ಮಂತ್ರಗೋಪ್ಯ, ಘಟಚಕ್ರ–ಈ ಕ್ರಮದಲ್ಲಿ ಕೃತಿಗಳನ್ನು ಜೋಡಿಸಿ ಅಚ್ಚುಮಾಡಿಸಲಾಗಿದೆ. ಇವುಗಳಲ್ಲಿ ಯಾವ ಕೃತಿಯು ಮೊದಲು ರಚಿತವಾದುದು ಎಂಬುದನ್ನು ನಿರ್ಧರಿಸಲು ಹೆಚ್ಚು ಆಧಾರಗಳಿಲ್ಲದಿದ್ದರೂ ಇದೇ ಕ್ರಮವು ಸೂಕ್ತವಾದುದು, ಶಾಸ್ತ್ರೀಯವಾದುದು ಎಂದು ನಮ್ಮ ಗ್ರಹಿಕೆ. ಘಟಚಕ್ರದ ನಂತರ ಶ್ರೀ ಪ್ರಭುದೇವರ ಮತ್ತು ಅಕ್ಕನವರ ವೃತ್ತವಚನಗಳನ್ನು ಮುದ್ರಿಸಲಾಗಿದೆ. ಇದರ ಔಚಿತ್ಯವೇನೆಂಬುದು ಓದುಗರಿಗೆ ಹೊಳೆಯದೆ ಇರಲಾರದು. ವಿಷಯಗಳಲ್ಲಿ ಹೆಚ್ಚು ಸಾಮೀಪ್ಯ, ಸಾರೂಪ್ಯವಿರುವುದರಿಂದ ಈ ವಚನಗಳನ್ನು ಸೇರಿಸುವುದು ಸಮಂಜಸವೆಂದು ಭಾವಿಸಿದೆವು. ಕುಂಡಲಿಯ ಉದ್ಧರಣೆಯು ಶ್ರೀ ಚೆನ್ನಬಸವಣ್ಣನವರು ಉದ್ಧರಿಸಿದುದು ಎಂದು ಒಂದು ಪ್ರತಿಯಲ್ಲಿ ಹೇಳಲಾಗಿದೆ. ಬೇರೆ ಪ್ರತಿಗಳಲ್ಲಿ ಇದರ ಉಲ್ಲೇಖವಿಲ್ಲ. ಈ ವಿಷಯದಲ್ಲಿ ಸಂಶೋಧನೆ ಅತ್ಯಗತ್ಯ.

ಇನ್ನು ವಚನಗಳ ಆಯ್ಕೆಯಲ್ಲಿ ಒಂದು ಕ್ರಮವನ್ನು ಅನುಸರಿಸ ಲಾಗಿದೆ. ಚೆನ್ನಬಸವಣ್ಣನ ಎಲ್ಲ ವಚನಗಳನ್ನು ಈ ಸಂಕಲನದಲ್ಲಿ ಎರಡು ಕಾರಣಗಳಿಂದ ಸೇರಿಸಲಾಗಿಲ್ಲ. ಮೊದಲನೆಯದಾಗಿ ಗ್ರಂಥ ವಿಸ್ತಾರದ ಭಯ. ಉಪಲಬ್ಧವಿರುವ ಎಲ್ಲ ವಚನಗಳನ್ನೂ ಸೇರಿಸಿದ್ದರೆ ಪ್ರಸ್ತುತ ಗ್ರಂಥದ ಗಾತ್ರವು ಇಮ್ಮಡಿಯಾಗುತ್ತಿದ್ದಿತು. ಅಲ್ಲದೆ ಲಭ್ಯವಿರುವ ಎಲ್ಲ ವಚನಗಳನ್ನು ಪ್ರತ್ಯೇಕವಾಗಿ ಪ್ರಕಟಿಸಬೇಕೆಂಬ ವಿಚಾರವನ್ನೂ ಇರಿಸಿ ಕೊಂಡಿದ್ದೇವೆ. ಮುಖ್ಯವಾದ ವಚನಗಳನ್ನು ಆಯ್ದು ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ, ಸಪ್ತಾಚಾರಗಳಿಗನುಗುಣವಾಗಿ ಜೋಡಿಸಿ ಪ್ರಕಟಿಸಿದ್ದಾಗಿದೆ. ಷಟ್‌ಸ್ಥಲ ಮುಂತಾದ ಗಹನ ವಿಷಯಗಳನ್ನು ತಿಳಿ ದುಕೊಳ್ಳಲು ಈ ವಚನಗಳು ಸಹಕಾರಿಯಾಗಬಲ್ಲುವು. ಬೇರೆ ಕೆಲವು ಮಹತ್ವದ ವಚನಗಳನ್ನು ಆರಿಸಿ 'ಕಲ್ಯಾಣ ಪಟ್ಟಣದ ವರ್ಣನೆ' 'ಶಿವಾ ನುಭಾವಿಗಳ ಸಂಕೀರ್ತನ' ಎಂಬ ಭಾಗಗಳಲ್ಲಿ ಪ್ರಕಟಿಸಲಾಗಿದೆ. ಬಸ ವನ ಕಾಲದ ಕಲ್ಯಾಣ ಪಟ್ಟಣದ ವಿಸ್ತೀರ್ಣ, ಹಿರಿಮೆಗಳ ಹೃದಯಂಗಮ ವಾದ ಚಿತ್ರವನ್ನು 'ಕಲ್ಯಾಣ ಪಟ್ಟಣದ ವರ್ಣನೆ'ಯಲ್ಲಿ ಕಾಣಬಹುದು. 'ಶಿವಾನುಭಾವಿಗಳ ಸಂಕೀರ್ತನ'ದಲ್ಲಿ ಚೆನ್ನಬಸವಣ್ಣನ ಸಮಕಾಲೀ ನರೂ, ದಿವ್ಯ ವಿಭೂತಿಗಳೂ ಆದ ಮರುಳಶಂಕರದೇವರು, ಮಡಿವಾಳ ಮಾಚಯ್ಯ, ಸಿದ್ಧರಾಮ, ಅಕ್ಕಮಹಾದೇವಿ, ಬಸವಣ್ಣ ಮತ್ತು ಪ್ರಭು ದೇವರ ಪರಿಚಯವನ್ನು ಚೆನ್ನಬಸವಣ್ಣನ ವಚನಗಳ ಮೂಲಕ ಮಾಡಿ ಕೊಡಲು ಯತ್ನಿಸಲಾಗಿದೆ. ಈ ಮಹಾನುಭಾವರು ವೀರಶೈವ ಧರ್ಮೋ ದ್ಧಾರಕರು. ವೀರಶೈವ ತತ್ತ್ವಜ್ಞಾನದ ಸಜೀವ ಮೂರ್ತಿಗಳು. ಚೆನ್ನ ಬಸವಣ್ಣನಂಥ ಮಹಾ ಶರಣನ ಮುಖದಿಂದ ಅವರ ಹಿರಿಮೆಯನ್ನರಿತು ಕೊಳ್ಳುವುದು ಅತ್ಯಂತ ಉಪಯುಕ್ತ; ಉಪಕಾರಿ. 'ಚೆನ್ನಬಸವಣ್ಣನ ಗುಣಗಾನ'ದಲ್ಲಿ ಚೆನ್ನಬಸವಣ್ಣನವರ ಸಮಕಾಲೀನರಾದ ಶಿವಾನು ಭಾವಿಗಳಿಂದ ಅವನ ಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಿದೆ. ಚೆನ್ನಬಸವಣ್ಣನಂಥ 'ಯುಗ ಜಗವ ಮೀರಿದ' ಶರಣನ ಪರಿಚಯವನ್ನು ಮಾಡಿಕೊಡಲು ಅಂಥವರೇ ಸಮರ್ಥರು. ಈ ಪರಿಚಯಾತ್ಮಕ ವಚನ

ಗಳಲ್ಲಿ ವೀರಶೈವ ತತ್ವಜ್ಞಾನದ ಹೊಳಪು ಕಂಗೊಳಿಸದೆ ಇರಲಾರದು.

ಚೆನ್ನಬಸವಣ್ಣನ ಕಾಲಜ್ಞಾನ ವಚನವು ನಮಗೆ ಕೊನೆಯ ಗಳಿಗೆಯಲ್ಲಿ ಸಿಕ್ಕಿದುದರಿಂದ ಅದನ್ನು ಗ್ರಂಥದಕೊನೆಯಲ್ಲಿ ಸೇರಿಸಬೇಕಾಯಿತು. ಚೆನ್ನಬಸವಣ್ಣನ ಕೃತಿಯೆಂದು ಪ್ರತೀತಿ ಇರುವ ' ರುದ್ರ ಭಾರತ ಸೃಷ್ಟಿ ' ಎಂಬ ಪುಟ್ಟ ಗದ್ಯ ಗ್ರಂಥವು ನಮಗೆಲ್ಲಿಯೂ ದೊರೆಯಲಿಲ್ಲ. ಅದರ ಕರ್ತೃ ಯಾರೆಂಬುದು ನಿರ್ಧಾರವಾಗಬೇಕಾಗಿದೆ. ಉಪಲಬ್ಧವಿರುವ ಚೆನ್ನಬಸವ ಸಾಹಿತ್ಯವೆಲ್ಲ (ಕೆಲವು ವಚನಗಳನ್ನುಳಿದು) ಈ ಸಂಗ್ರಹದಲ್ಲಿ ಸೇರಿಕೊಂಡಿದೆ. ದೊರೆತ ಅತ್ಯಲ್ಪ ಅವಧಿಯಲ್ಲಿ ಈ ಗ್ರಂಥವನ್ನು ಶಕ್ಯವಿದ್ದಷ್ಟು ಶುದ್ಧವಾಗಿ ಸಂಪಾದಿಸಲು ಪ್ರಯತ್ನಿಸಿದ್ದೇವೆ. ಅವಸರದಲ್ಲಿ ಕೆಲವು ನ್ಯೂನತೆಗಳು ಉಳಿಯುವುದು ಅನಿವಾರ್ಯ. ಪುನರ್ಮುದ್ರಣದಲ್ಲಿ ಅವುಗಳನ್ನು ಸರಿಪಡಿಸಿಕೊಳ್ಳುತ್ತೇವೆ.

ನಮ್ಮೀ ಕಾರ್ಯದಲ್ಲಿ ಹಲವರು ಹಲವಾರು ರೀತಿಯಿಂದ ನೆರವಾಗಿದ್ದಾರೆ. ಈ ಕಾರ್ಯವನ್ನು ಮನವಾರೆ ಮೆಚ್ಚಿ ಹಾಲಕೆರೆಯ ಶ್ರೀ ಮ. ನಿ. ಪ್ರ. ಅನ್ನದಾನೀಶ್ವರ ಮಹಾಸ್ವಾಮಿಗಳವರೂ, ಮುಂಡರಗಿಯ ಶ್ರೀ ಮ. ನಿ. ಪ್ರ. ಅನ್ನದಾನೀಶ್ವರ ಮಹಾಸ್ವಾಮಿಗಳವರೂ, ಮುರಗೋಡದ ಶ್ರೀ ಮ. ನಿ. ಪ್ರ. ಮಹಂತ ಶಿವಯೋಗಿಗಳವರೂ, ಕುದರಿಮೋತಿಯ ಶ್ರೀ ಮ. ನಿ. ಪ್ರ. ಮಹಂತ ಸ್ವಾಮಿಗಳವರೂ ಮತ್ತು ನಿಡಸೋಸಿ ಪಟ್ಟದ ಕಂಥೆ ಹಿರೇಮಠದ ಪೂಜ್ಯ ಕರಿಬಸವ ಪಟ್ಟದ ಸ್ವಾಮಿಗಳವರೂ ತಮ್ಮ ಶುಭಾಶೀರ್ವಾದವನ್ನು ಅನುಗ್ರಹಿಸಿ ಕಾರ್ಯಚಾಲಕರೆನಿಸಿಕೊಂಡಿದ್ದಾರೆ. ಕೊಪ್ಪಳದ ಶ್ರೀ ಮ. ನಿ. ಪ್ರ. ಮರಿಶಾಂತವೀರ ಮಹಾಸ್ವಾಮಿಗಳವರು, ಧಾರವಾಡದ ಶ್ರೀ ಮ. ನಿ. ಪ್ರ. ಮೃತ್ಯುಂಜಯ ಮಹಾಸ್ವಾಮಿಗಳವರು ಮತ್ತು ನವಿಲುಗುಂದದ ಶ್ರೀ ಮ. ನಿ. ಪ್ರ. ಬಸವಲಿಂಗ ಮಹಾಸ್ವಾಮಿಗಳವರು ನಾನಾ ವಿಧವಾಗಿ ಪ್ರೋತ್ಸಾಹಿಸಿ, ಶುಭಾಶೀರ್ವಾದವನ್ನು ಅನುಗ್ರಹಿಸಿ, ತಮ್ಮ ದಿವ್ಯ ಸಂದೇಶವನ್ನಿತ್ತು ಹರಸಿದ್ದಾರೆ. ವೀರಶೈವ ಮಹಾಸಭಾಧ್ಯಕ್ಷರಾದ ಬಂಥನಾಳ ಶ್ರೀ ಮ. ನಿ. ಪ್ರ. ಸಂಗನ

ಬಸವ ಶಿವಯೋಗಿಗಳವರು ಅಮೂಲ್ಯ ಸಂದೇಶದ ತಿಲಕವನ್ನಿತ್ತು ಗ್ರಂಥದ ಮಹತಿಯನ್ನು ಬೆಳಗಿಸಿದ್ದಾರೆ. ಈ ಎಲ್ಲ ಪೂಜ್ಯ ಶ್ರೀಗಳವರ ಪಾದಾರವಿಂದಗಳಲ್ಲಿ ಭಕ್ತಿಭರಿತ ಪ್ರಣಾಮಗಳನ್ನರ್ಪಿಸುತ್ತೇವೆ. ಲಿಂ. ಶ್ರೀ ಗುರುಬಸಯ್ಯನವರು ನಾಗರಾಳಮಠ ಇವರ ಹೆಸರಿನಲ್ಲಿ ಹೈದರಾಬಾದಿನ ಶ್ರೀ ದಿವಾನ ಸಂಗಯ್ಯನವರು ವಕೀಲರೂ, ಶ್ರೀ ಬಸಪ್ಪ ಅಡಿವೆಪ್ಪ ಕಡಹಳ್ಳಿ ಸಾ|| ಬೆಟಗೇರಿ ಮತ್ತು ಶ್ರೀ ಚೆನ್ನಪ್ಪಗೌಡರು ಧನಸಹಾಯವನ್ನಿತ್ತುದಕ್ಕಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ಪ್ರಸ್ತುತ ಗ್ರಂಥಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಒದಗಿಸಿದವರೆಲ್ಲರ ಉಪಕಾರವನ್ನು ಸ್ಮರಿಸುತ್ತೇವೆ. ಬೆಲೆಯುಳ್ಳ ಮುನ್ನುಡಿಯನ್ನು ಅತ್ಯಲ್ಪ ಅವಧಿಯಲ್ಲಿ ಬರೆದು ಕಳಿಸಿ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಿದ ಸುಪ್ರಸಿದ್ಧ ಸಾಹಿತಿಗಳಾದ ಡಾ. ನಂದೀಮಠರಿಗೆ ನಾವು ತುಂಬ ಉಪಕೃತರು. ಪ್ರಭುದೇವರ ಪಡಿಯಚ್ಚನ್ನು ಒದಗಿಸಿ ನಮ್ಮನ್ನು ಹರಸಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಕರ್ನಾಟಕ ವಿಭೂಷಣ ಪಂ. ಬ. ಶಿವಮೂರ್ತಿಶಾಸ್ತ್ರಿಗಳಿಗೆ ನಾವು ಕೃತಜ್ಞರು. ಪುತ್ರವಾತ್ಸಲ್ಯದಿಂದ ಈ ಕಾರ್ಯದಲ್ಲಿ ದಣಿವರಿಯದೆ ದುಡಿದ ನಮ್ಮ ಪೂಜ್ಯ ತಂದೆಯವರಾದ ಪಂ. ಕಲ್ಲಿನಾಥಶಾಸ್ತ್ರಿಗಳವರಿಗೆ ಈ ಗ್ರಂಥದ ಸರ್ವ ಶ್ರೇಯಸ್ಸು ಮೀಸಲು. ಗ್ರಂಥ ಸಂಪಾದನ ಕಾರ್ಯದಲ್ಲಿ ಮಾರ್ಗದರ್ಶನ ಮಾಡಿದ ಅಣ್ಣಂದಿರಾದ ಶ್ರೀ ಸಿದ್ಧಯ್ಯ ಪುರಾಣಿಕರು, ಹಿರಿಯರಾದ ಶ್ರೀ ಮಾನ್ವಿಯವರು ಮತ್ತು ಪ್ರೊ. ಎಂಠದರ ಉಪಕಾರ ಹಿರಿಯದು. ಗೆ. ಹಕಾರಿ, ತಮ್ಮ ಚಿ|| ಬಸವರಾಜ, ಬಿ.ಇ (ಅಂತಿಮ) ಮತ್ತು ಗೆ. ಮೂರ್ತಿ ಇವರ ನೆರವನ್ನಿಲ್ಲಿ ನೆನೆಯದಿರಲಾರೆವು.

ಶ್ರೀ ಚೆನ್ನಬಸವಣ್ಣನು ಈ ನಾಡು ಶುದ್ಧಿ-ಸಿದ್ಧಿ-ಸಮೃದ್ಧಿಗಳ ಬೀಡಾಗುವಂತೆ ಅನುಗ್ರಹಿಸಲೆಂದು ಪ್ರಾರ್ಥಿಸುವೆವು.

ನವಕರ್ನಾಟಕ ರಾಜ್ಯೋದಯ
ನವೆಂಬರ್ ೧, ೧೯೫೬.

**ಅನ್ನದಾನಯ್ಯ ಪುರಾಣಿಕ,**
ಸಂಪಾದಕ.

# ಪರಿವಿಡಿ

## ೧. ಕರಣ ಹಸುಗೆ



## ೨. ಮಿಶ್ರಾರ್ಪಣ

## ೬. ಅನುಬಂಧ



## ೭. ಷಟ್‌ಸ್ಥಲಗಳು



## ೮. ಅಷ್ಟಾವರಣಗಳು–ಪಂಚಾಚಾರಗಳು



## ೯. ಕಲ್ಯಾಣ ಪಟ್ಟಣದ ವರ್ಣನೆ.



## ೧೦. ಶಿವಾನುಭಾವಿಗಳ ಸಂಕೀರ್ತನ



## ೧೧. ಚೆನ್ನಬಸವಣ್ಣನ ಗುಣಗಾನ



## ೧೨. ಚೆನ್ನಬಸವಣ್ಣನ ಕಾಲಜ್ಞಾನ ವಚನ



## ಒಪ್ಪೋಲೆ

# ಪ್ರಸ್ತಾವನೆ

## ಕರಣ ಹಸಿಗೆಯ ಅರ್ಥ

ಕರಣ ಹಸಿಗೆ ಎಂಬ ಪ್ರಕರಣವು. ಈ ಶಾಸ್ತ್ರಕ್ಕೆ ತತ್ತ್ವಂಗಳ ಸಂಗ್ರಹದ ವಿಭಾಗದ ವಿವರಣೆ ಏನು ಕಾರಣ ಬಂದಿತೆಲೆ ಸ್ವಾಮಿಯೆಂದು ಬೆಸಗೊಂಡೊಡೆ– ಕರಣವೆಂದೊಡೆ ತತ್ತ್ವಗಳು, ಹಸಿಗೆ ಎಂದೊಡೆ ವಿಭಾಗವು. ಅದು ಹೇಗೆಂದೊಡೆ ಒಬ್ಬಾನೊಬ್ಬ ಒಕ್ಕಲಿಗನು ಮಳೆಯ ಹದದಿ ಭೂಮಿಯ ಬೆಳೆಯನರಿದು ಹರಗಿ ಹಸನುಮಾಡಿ ಹದಿನೆಂಟು ಧಾನ್ಯಗಳನ್ನು ಬಿತ್ತಿ, ಸುರಕ್ಷಿತವಾಗಿ ಸಲಹಿ, ಫಲಪೂರಿತವಾದ ಬಳಿಕ ಕೊಯ್ದು, ಕಟ್ಟಿ ಬಣವೆಯೊಟ್ಟಿ, ಕಣಮಾಡಿ ಒಕ್ಕಿ, ರಾಶಿಯಂ ಮಾಡಿದ ಬಳಿಕ— ಇಷ್ಟು ಗೋದಿ, ಇಷ್ಟು ಜೋಳ, ಸಜ್ಜೆ, ಇಷ್ಟು ತೊಗರಿ, ಅವರಿ, ಹೆಸರು ಇಷ್ಟಿಷ್ಟಾದವೆಂದು ಅಳೆದಳೆದು ಬೇರೆ ಮಾಡುವ ಹಾಗೆ ಈ ಬ್ರಹ್ಮಾಂಡವೆಂಬ ಕ್ಷೇತ್ರಕ್ಕಧಿಪತಿಯಪ್ಪ ಪರಶಿವನೆಂಬ ಹಲಾಯುಧನು (ಒಕ್ಕಲಿಗನು) ಅನಾದಿಯಲ್ಲಿ ತನ್ನ ಪಂಚಮುಖಗಳಿಂದ ಪಂಚಭೂತಗಳಂ ಹುಟ್ಟಿಸಿ, ಆ ಪಂಚಭೂತ ತಾರತಮ್ಯದಿಂದ ಇಪ್ಪತ್ತೈದು ತತ್ತ್ವಗಳನ್ನು ಹುಟ್ಟಿಸಿ, ಆ ಇಪ್ಪತ್ತೈದು ತತ್ತ್ವಯುಕ್ತವಾದ ಶರೀರವನ್ನೂ ತನ್ನ ಗೋಪ್ಯ ಮುಖದಲ್ಲಿ ಆತ್ಮನನ್ನೂ ಹುಟ್ಟಿಸಿ, ಆ ಆತ್ಮನಿಗೆ ಸಂಬಂಧವಂ ಮಾಡಿಕೊಳ್ಳಲು ಆತ್ಮನು ಅದೇ ಅಹಂಭಾವದ ಮರವೆಯಿಂದ ತನ್ನ ನಿಜವಂ ಮರೆದು ಅಜ್ಞಾನಿಯಾಗಿ ಅನೇಕ ಜನ್ಮಂಗಳಲ್ಲಿ ಹುಟ್ಟಿ ಹುಟ್ಟಿ

ಬರುವಲ್ಲಿ ಪುಣ್ಯದಿಂದ ದೇವತಾ ಜನ್ಮ, ಪಾಪದಿಂದ ಸ್ಥಾವರ ಜನ್ಮ, ಪುಣ್ಯ ಪಾಪಗಳ ಸಮಾನತ್ವದಿಂದ ಮನುಷ್ಯ ಜನ್ಮ ಪಡೆದು, ಅಂತಪ್ಪ ಮನುಷ್ಯ ಜನ್ಮಸಂಬಂಧಿಯಾದಾತ್ಮನ ಸ್ಥೂಲವಲ್ಲದ, ಸೂಕ್ಷ್ಮವಲ್ಲದ ಪ್ರಮಾಣವಾದ ದೇಹದಲ್ಲಿರುವ ಸಕಲ ತತ್ತ್ವಂಗಳಂ ಬೇರೆ ಬೇರೆ ಹಸಿಗೆಯಂ ಮಾಡಿ ವಿಸ್ತರಿಸಿ ಹೇಳುತ್ತಿಹುದಾದ ಕಾರಣ ಈ ಶಾಸ್ತ್ರಕ್ಕೆ ತತ್ವ ವಿಭಾಗವೆಂಬಭಿದಾನವು ಪ್ರಸಿದ್ಧವಾಯಿತ್ತೆಂಬುದೀ **ಕರಣ ಹಸಿಗೆ**ಯೆಂಬ ಶಬ್ದಕ್ಕರ್ಥವು.

ಓಂ

# ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ

# ಕ ರ ಣ ಹ ಸಿ ಗೆ

## ಓಂಕಾರೋತ್ಪತ್ತಿ

ಓಂಕಾರವೆಂಬ ಪ್ರಣವದಲ್ಲಿ ಅಕಾರ, ಉಕಾರ, ಮಕಾರ ಈ ಮೂರು ಬೀಜಾಕ್ಷರ. ಅಕಾರವೇ ನಾದ, ಉಕಾರವೇ ಬಿಂದು, ಮಕಾರವೇ ಕಳೆ. ಮತ್ತಂ ಅಕಾರವೇ ರುದ್ರ, ಉಕಾರವೇ ಈಶ್ವರ, ಮಕಾರವೇ ಸದಾಶಿವ. ಇಂತೀ ಅಕಾರ ಉಕಾರ ಮಕಾರಕ್ಕೆ ನಾದಬಿಂದು, ಕಳೆಯೇ ಆಧಾರ. ಆ ನಾದ ಬಿಂದು ಕಳೆಗೆ ಪ್ರಕೃತಿಯೇ ಆಧಾರ. ಆ ಪ್ರಕೃತಿಗೆ ಪ್ರಾಣವೇ ಆಧಾರ. ಆ ಪ್ರಾಣಕ್ಕೆ ಲಿಂಗವೇ ಆಧಾರ.

**ಅ** ಎಂದಡೆ ಅನಾಹತ, **ಉ** ಎಂದಡೆ ನಾದ ಉಳಿಯಿತ್ತು, **ಮ** ಎಂಬಲ್ಲಿ ಬಿಂದು ಕೂಡಲು ಶಿವಶಕ್ತಿಯಾಗುತ್ತ ಇಹಂತಹ **ಓಂಕಾರ** ವಾಯಿತ್ತು.

### ಅಕಾರವೆಂಬ ಪ್ರಣವದಲ್ಲಿ

ಅಗ್ನಿಶ್ಚ ಋಗ್ವೇದಸ್ತಥಾ ರುದ್ರೋಧಿದೇವತಾ ।
ಅಕಾರ ಚಯಂಯಾತಿ ಪ್ರಥಮೋ ಪ್ರಣವಾಂಶಿಕೆ ॥

### ಉಕಾರವೆಂಬ ಪ್ರಣವದಲ್ಲಿ

ಅಂತರಿಕ್ಷೇ ಯಜುರ್ವೇದೋಭವೇತ್ ಓಂ ಈಶ್ವರೋದೇವತಾ।
ಉಕಾರೇಚ ಲಯಂಯಾತಿ ದ್ವಿತೀಯಂ ಪ್ರಣವಾಂಶಿಕೆ ॥

### ಮಕಾರವೆಂಬ ಪ್ರಣವದಲ್ಲಿ

ವಿದ್ಯೇಷು ಸಾಮವೇದೋಭವೇತ್ ಓಂ ಸದಶಿವೋ ದೇವತಾ।
ಮಕಾರೇಚ ಲಯಂಯಾತಿ ತೃತೀಯೋ ಪ್ರಣವಾಂಶಿಕೆ ॥

**ಅಕಾರೇಚ ಉಕಾರೇಚ ಮಕಾರೇಚ ತೃತೀಯಕೆ।**
**ಇದಮೇಕಂ ಸಮುತ್ಪನ್ನಂ ಓಂ ಇತಿಜ್ಯೋತಿಃ ರೂಪಕಂ॥**

ಓಂಕಾರಾತ್ಪ್ರಭವಾವೇದಂ। ಓಂಕಾರಾತ್ಪ್ರಭವಾಸ್ವರಂ
ಓಂಕಾರಾತ್ಪ್ರಭವಾ ಸರ್ವಂ। ತ್ರೈಲೋಕ್ಯಂ ಸಚರಾಚರಂ
ಸರ್ವವ್ಯಾಪಕವೋಂಕಾರಂ ಮಂತ್ರೋಽನ್ಯತ್ರ ನಶೋಭತೆ।
ಪ್ರಣವೋಹಿ ಪರಬ್ರಹ್ಮ ಪ್ರಣವಂ ಪರಮಂ ಪದಂ।
ಓಂಕಾರಂ ನಾದರೂಪಂಚ ಓಂಕಾರಂ ಬಿಂದುರೂಪಕಂ।
ಓಂಕಾರಂ ವ್ಯಾಪಿ ಸರ್ವತ್ರಂ ಓಂಕಾರ ಗೋಪ್ಯಮಾನಸಂ।
ಎಂದಿದು ಪ್ರಣವದುತ್ಪತ್ತಿ.

ಮೇಲಿನ ಅಕಾರ ಉಕಾರ ಮಕಾರ ಪ್ರಣವದ ಮೂರು ಶ್ಲೋಕಗಳ ಅರ್ಥವು—

ಅಕಾರವೆಂದು ಹೇಳಿಸಿಕೊಳ್ಳುವ ಪ್ರಣವದ ಅಕ್ಷರದೊಳಗೆ ಅಗ್ನಿಃ ತೇಜವೆಂಬುದೊಂದು ತತ್ತ್ವವು, ಋಗ್ವೇದವೆಂಬ ವೇದವು,ರುದ್ರಮೂರ್ತಿಯೆಂಬುದೊಂದು ಅಧಿದೇವತೆಯು, ಇಂದ್ರಾದಿ ನಿರ್ಜರರೆಂಬ ದೇವತೆಗಳು ಉತ್ಪತ್ತಿಯಾದರು. ಉತ್ಪತ್ತಿಯಾಗಿ ಪರಶಿವನ ಸಗುಣಾನಂದ ಸೃಷ್ಟಿಯ ಲೀಲಾವಿಲಾಸ ಉಂಟಾಗಿರುವ ಪರಿಯಂತರ ಉಂಟಾಗಿರ್ದು ಲೀಲೆ ಸಾಕಾದ ಬಳಿಕ ಓಂಕಾರ ಪ್ರಣವದ ಒಂದನೇ ಅಂಶವಾದ ಅಕಾರ ಪ್ರಣವದಲ್ಲಿಯೇ ವಿಶ್ರಾಂತಿಯನ್ನು ಐದುತ್ತಿಹವು. ಇದು ಮೇಲಿನ ಅಕಾರ ಪ್ರಣವ ಶ್ಲೋಕದ ಅರ್ಥವು.

ಉಕಾರ ಪ್ರಣವದಲ್ಲಿ ವರ್ಣದೊಳಗಂತರಿಕ್ಷ, ಆಕಾಶ ತತ್ತ್ವ, ಯಜುರ್ವೇದ, ಈಶ್ವರನೆಂಬ ಅಧಿದೇವತೆ, ಇಂದ್ರಾದಿ ಅಪ್ಸರರೆಂಬ ದೇವತೆಗಳು ಉತ್ಪತ್ತಿಯಾದರು. ಲೀಲೆ ಸಾಕಾದ ಬಳಿಕ ಪ್ರಣವದ ಎರಡನೇ ಅಂಶವಾದ ಉಕಾರದಲ್ಲಿ ವಿಶ್ರಾಂತಿಯನ್ನು ಐದುತ್ತಿಹವು. ಇದು ಉಕಾರ ಪ್ರಣವದ ಶ್ಲೋಕಾರ್ಥವು.

ಮಕಾರ ಪ್ರಣವದಲ್ಲಿ ಸುಜ್ಞಾನ ಕಲಾತ್ಮ ತತ್ತ್ವ, ಚತುಷ್ಷಷ್ಠಿ

ಕಳಾ ವಿದ್ಯೆಗಳು, ಸಾಮವೇದವು, ಸದಾಶಿವನೆಂಬ ಅಧಿದೇವತೆಯು ಇಂದ್ರಾದಿ ಅಷ್ಟ ದಿಕ್ಪಾಲಕರು ಉದಯವಾದರು. ಲೀಲೆ ಸಾಕಾದ ಬಳಿಕ ಪ್ರಣವದ ತೃತೀಯಾಂಶವಾದ ಮಕಾರ ಪ್ರಣವದಲ್ಲಿ ವಿಶ್ರಾಂತಿಯನ್ನು ಐದುತ್ತಿಹವು.

## ಓಂಕಾರದ ಅರ್ಥ

ಇನ್ನು ಓಂಕಾರ ಪ್ರಣವದಿಂದ ನಾಲ್ಕು ವೇದಗಳು, ನಾಲ್ಕು ಉಪ ವೇದಗಳು, ಆಗಮಗಳು, ಶಾಸ್ತ್ರ ಪುರಾಣಗಳು, ಷಡಧ್ವ ಷಡ್ಗುಣ ವಸ್ತು, ತತ್ತ್ವಪಂಚಕವು, ಸಪ್ತ ಭುವನಂಗಳು ಹುಟ್ಟಿದವು.

## ಪಂಚಭೂತಗಳುತ್ಪತ್ತಿ ಕ್ರಮ

ಸದ್ಯೋಜಾತಸ್ತಥಾಭೂಮಿರ್ವಾಮದೇವೋದ್ಭವಂಜಲಂ
ಅಘೋರಾದ್ವಹ್ನಿರುತ್ಪತ್ತಿಸ್ತತ್ಪುರುಷಂ ವಾಯುರುಚ್ಯತೇ ।
**ಈಶಾನಾದ್ಗಗನಾಕಾರಂ ಪಂಚಬ್ರಹ್ಮಮಯಂ ಜಗತ್॥**

**ಟೀಕೆ:**— ಸದ್ಯೋಜಾತ ಮುಖದಲ್ಲಿ ಪೃಥ್ವಿ, ವಾಮದೇವ ಮುಖದಲ್ಲಿ ಅಪ್ಪು, ತತ್ಪುರುಷ ಮುಖದಲ್ಲಿ ವಾಯು, ಈಶಾನ್ಯ ಮುಖದಲ್ಲಿ ಆಕಾಶ ಹುಟ್ಟಿದವು. ಇಂತೀ ಪಂಚ ಬ್ರಹ್ಮದಿಂದ ಪಂಚ ಮಹಾಭೂತಗಳು ಹುಟ್ಟಿದವು.

## ಮಹಾ ಪಂಚಭೂತಗಳು

### (ಗುಣ, ಧರ್ಮ, ಕರ್ಮ, ವರ್ಣ, ಅಧಿದೇವತೆಗಳು)

**ಗುಣಗಳು—** ಭೂಮಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧವೆಂಬ ಐದು ಗುಣಗಳು. ನೀರಿಗೆ ಗಂಧವನ್ನು ಬಿಟ್ಟು ನಾಲ್ಕು ಗುಣಗಳು. ಶಬ್ದ-ಸ್ಪರ್ಶ-ರೂಪ ಈ ಮೂರು ಅಗ್ನಿಯ ಗುಣಗಳು. ಶಬ್ದ-ಸ್ಪರ್ಶ ಇವೆರಡು ವಾಯುವಿನ ಗುಣಗಳು. ಶಬ್ದವೊಂದೇ ಆಕಾಶದ ಗುಣವು.

**ಧರ್ಮಗಳು**— ಪೃಥ್ವಿಗೆ ಕಠಿನ ಧರ್ಮ, ಜಲಕ್ಕೆ ದ್ರವ ಧರ್ಮ, ಅಗ್ನಿಗೆ ಉಷ್ಣ ಧರ್ಮ, ವಾಯುವಿಗೆ ಚಲನ ಧರ್ಮ, ಆಕಾಶಕ್ಕೆ ಬಯಲು ಧರ್ಮ.

**ಕರ್ಮಗಳು**—ಪೃಥ್ವಿಗೆ ಧಾರಣ, ಜಲಕ್ಕೆ ಪಿಂಡೀಕರಣ, ಅಗ್ನಿಗೆ ಪಚನ, ವಾಯುವಿಗೆ ವೋಹನ, ಆಕಾಶಕ್ಕೆ ಸರ್ವಾಶ್ರಯ.

**ವರ್ಣಗಳು**—ಪೃಥ್ವಿಗೆ ಪೀತವರ್ಣ, (ಹಳದಿ ಬಣ್ಣ), ನೀರಿಗೆ ಶ್ವೇತ ವರ್ಣ (ಬಿಳಿಯ ಬಣ್ಣ), ಬೆಂಕಿಗೆ ರಕ್ತವರ್ಣ (ಕೆಂಪು ಬಣ್ಣ), ವಾಯುವಿಗೆ ಹರಿತವರ್ಣ (ಹಸಿರು ಬಣ್ಣ), ಆಕಾಶಕ್ಕೆ ಕೃಷ್ಣ ವರ್ಣ (ಕಪ್ಪುಬಣ್ಣ).

**ಅಧಿದೇವತೆಗಳು**—ಪೃಥ್ವಿಗೆ ಬ್ರಹ್ಮನು, ಜಲಕ್ಕೆ ವಿಷ್ಣುವು, ಅಗ್ನಿಗೆ ರುದ್ರನು, ವಾಯುವಿಗೆ ಈಶ್ವರನು, ಆಕಾಶಕ್ಕೆ ಸದಾಶಿವನು– ಇದು ಪಂಚಭೂತಗಳ ಉತ್ಪತ್ತಿ. ನಂತರ–

## ಜಗದುತ್ಪತ್ತಿ

ಭೂಜಲಾಗ್ನಿ ಮರುದ್ವ್ಯೋಮ ಭಾಸ್ಕರಶ್ಶಿ ಚೇತನಃ ।
ದಿವಾಪ್ರಕಾಶತೇ ಸೂರ್ಯಃ । ರಾತ್ರೌ ಚಂದ್ರಃ ಪ್ರಕಾಶತೇ ।
ಸರ್ವ ಚೇತನ ಮಾತ್ಮಾಚ । ಶಿವಾಂಶೋಽಪ್ಯಷ್ಟಮೂರ್ತಯಃ ॥

**ಟೀಕೆ**—ಪೃಥ್ವಿ ಅಪ್ಪು ತೇಜ ವಾಯು ಆಕಾಶ ಸೂರ್ಯ ಚಂದ್ರ ಆತ್ಮಾ ಎಂಬಿವು ಶಿವನ ಅಷ್ಟ ತನುಗಳೇ ಜಗತ್ತಾಗಿಹವು. ಅವಾವುವೆಂದಡೆ ಚತರ್ದಶ ಭುವನಗಳು, ಸಪ್ತ ಸಮುದ್ರಗಳು, ಸಪ್ತ ದ್ವೀಪಂಗಳು, ಸಪ್ತ ಸಮುದ್ರಗಳು, ಸಪ್ತ ಕುಲ ಪರ್ವತಗಳು, ಸಮಸ್ತಗ್ರಹಂಗಳು, ರಾಶಿ ತಾರಾಪಥಂಗಳು ಗರ್ಭೀಕರಿಸಿಕೊಂಡು ಬ್ರಹ್ಮಾಂಡವೆನಿಸಿತ್ತು-ಎಂದಿದು ಜಗದುತ್ಪತ್ತಿ.

## ಪಿಂಡಸಂಗ್ರಹ

"ಪಿಂಡ ಬ್ರಹ್ಮಾಂಡಯೋರೈಕ್ಯಂ" ಎಂದುದಾಗಿ ಸ್ಥೂಲ ಬ್ರಹ್ಮಾಂಡದೊಳಗುಳ್ಳ ಗುಣಂಗಳು ಪಿಂಡಾಂಡದಲ್ಲಿ ಸೂಕ್ಷ್ಮರೂಪಿಂದೆ ಸಂಗ್ರಹವಾಗಿ

ತೋರ್ಪವು. ಅದೆಂತೆಂದೊಡೆ : "ಭೂತಪಂಚಕ ದೇಹಾನಾಂ", ಎಂದುದಾಗಿ. ಆ ಪಂಚಮಹಾಭೂತಂಗಳ ಪಂಚಾಂಶಿಕವುಂ ಪಂಚೀಕೃತಿಯುನೈದುತ್ತಿರಲು ದೇಹವಾಯಿತ್ತು. ಆ ಪಂಚಭೂತಗಳಾವವೆಂದಡೆ : ಪೃಥ್ವಿ ಅಪ್ಪು ತೇಜ ವಾಯು ಆಕಾಶ–ಇಂತಿವು ಪಂಚ ಮಹಾಭೂತಂಗಳು. ಇವರಂಶಿಕವಾವವೆಂದೊಡೆ :

( ಗ್ರಂಥ )

ಶ್ಲೋ । ಅಸ್ಥಿಮಾಂಸ ತ್ವಚೋ ನಾಡೀ ರೋಮಶ್ಚೈವತು ಪಂಚಕಂ ।
ಕ್ಷಿತೇಃ ಪಂಚಗುಣಾಃ ಪ್ರೋಕ್ತಾಸ್ತಂದಂಶಾಃ ಪರಿಕೀರ್ತಿತಾಃ ॥

ಎಂದು ಅಸ್ಥಿ ಮಾಂಸ ಚರ್ಮ ನರ ರೋಮ–ಇವು ಐದು ಪೃಥ್ವಿಯಿಂದಾದುವು.

ಶ್ಲೋ । ಲಾಲಾಮೂತ್ರಂತ್ವಥಸ್ವೇದಃ ಶುಕ್ಲಶೋಣಿತಮೇವಚ ॥
ಅಪಾಂ ಚೈವಂ ವಿಧಂ ಪ್ರೋಕ್ತಂಜ್ಞಾತವ್ಯಂಚ ಪ್ರಯತ್ನತಃ ॥

ಎಂದು ಶ್ಲೇಷ್ಮ ಮೂತ್ರ ಪಿತ್ತ ಶುಕ್ಲ ರಕ್ತ – ಈ ಐದು ಅಪ್ಪುವಿನಿಂದಾದವು.

ಶ್ಲೋ । ಕ್ಷುಧಾತೃಷ್ಣಾತಥಾ ನಿದ್ರಾಲಸ್ಯಂಸಂಗಂವಿಶೇಷತಃ ।
ಅಗ್ನೇಃ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ ॥

ಎಂದು ಕ್ಷುಧಾ ತೃಷೆ ನಿದ್ರೆ ಆಲಸ್ಯ ಸಂಗ-ಈ ಐದು ಅಗ್ನಿಯಿಂದಾದವು.

ಶ್ಲೋ । ಧಾವನಂ ವಲ್ಗನಂ ಚೈವ ಕುಂಚನಂಚ ಪ್ರಚಾರಣಂ । ವಿಯೋಗಶ್ಚೇತಿವಿಜ್ಞೇಯೋ ವಾಯೋಃ ಪಂಚಗುಣಾಃ ಸ್ಮೃತಾಃ ॥

ಎಂದು ಪರಿವ ಪಾರುವ ಸುಳಿವ ಹುಬ್ಬುವ ಅಗಲುವ – ಈ ಐದು ವಾಯುವಿನಿಂದಾದವು.

ಶ್ಲೋ । ರಾಗ ದ್ವೇಷ ಭಯಂಲಜ್ಜಾ ಮೋಹಶ್ಚೈವ ಯಥಾತಥಾ
ನಭಸ್ಯ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ॥

ಎಂದು ರಾಗ ದ್ವೇಷ ಭಯ ಲಜ್ಜೆ ಮೋಹ ಈ ೫ ಆಕಾಶದಿಂದಾದವು. ಇಂತೀ ಪಂಚಮಹಾ ಭೂತಗಳಿಂದೆ ಪಂಚವಿಂಶತಿ ಗುಣಂಗಳಾದವು. ಇವಕ್ಕೆ ವಿಭೇದಗುಣಗಳುಂಟು. ಅವಾವೆಂದಡೆ: ಪೃಥ್ವಿಗೆ ೨೫ ಗುಣ, ಅಪ್ಪುವಿಂಗೆ ೨೦ ಗುಣ, ಅಗ್ನಿಗೆ ೧೫ ಗುಣ, ವಾಯುವಿಗೆ ೧೦ ಗುಣ, ಆಕಾಶಕ್ಕೆ ೫ ಗುಣ, ಇಂತೀ ವಿಭೇದ ಗುಣಂಗಳು ಕೂಡಲಾಗಿ ೭೫ ಗುಣಂಗಳಾದವು.

## ಪೃಥ್ವೀ ತತ್ತ್ವದ ೨೫ ಗುಣ ವಿವರ

ಪೃಥ್ವಿಯ ಶಬ್ದಗುಣದಲ್ಲಿ ಆಕಾಶ ತತ್ತ್ವದ ರಾಗಾದಿ ೫ ಗುಣಗಳು
ಪೃಥ್ವಿಯ ಸ್ಪರ್ಶಗುಣದಲ್ಲಿ ವಾಯು ತತ್ತ್ವದ ಧಾವನಾದಿ ೫ ಗುಣಗಳು
ಪೃಥ್ವಿಯ ರೂಪಗುಣದಲ್ಲಿ ಅಗ್ನಿ ತತ್ತ್ವದ ಕ್ಷುಧಾದಿ ೫ ಗುಣಗಳು
ಪೃಥ್ವಿಯ ರಸ ಗುಣದಲ್ಲಿ ಅಪ್ಪು ತತ್ತ್ವದ ಶ್ಲೇಷ್ಮಾದಿ ೫ ಗುಣಗಳು
ಪೃಥ್ವಿಯ ಗಂಧಗುಣದಲ್ಲಿ ಪೃಥ್ವೀ ತತ್ತ್ವದ ಅಸ್ಥಿ ಮೊದಲಾದ ೫ ಗುಣಗಳು.

ಇವೇ ಪೃಥ್ವೀ ತತ್ತ್ವದ ೨೫ ಗುಣಗಳೆಂದು ಪ್ರಸಿದ್ಧ.

## ಅಪ್ಪು ತತ್ತ್ವದ ೨೦ ಗುಣ ವಿವರ

ಅಪ್ಪುವಿನ ಶಬ್ದಗುಣದಲ್ಲಿ ಆಕಾಶ ತತ್ತ್ವದ ರಾಗಾದಿ ೫ ಗುಣಗಳು
ಅಪ್ಪುವಿನ ಸ್ಪರ್ಶಗುಣದಲ್ಲಿ ವಾಯು ತತ್ತ್ವದ ಧಾವನಾದಿ ೫ ಗುಣಗಳು
ಅಪ್ಪುವಿನ ರೂಪಗುಣದಲ್ಲಿ ಅಗ್ನಿ ತತ್ತ್ವದ ಕ್ಷುಧಾದಿ ೫ ಗುಣಗಳು
ಅಪ್ಪುವಿನ ರಸ ಗುಣದಲ್ಲಿ ಜಲ ತತ್ತ್ವದ ಶ್ಲೇಷ್ಮಾದಿ ೫ ಗುಣಗಳು

ಇವೇ ಅಪ್ಪು ತತ್ತ್ವದ ೨೦ ಗುಣಗಳೆಂದು ಪ್ರಸಿದ್ಧ.

## ಅಗ್ನಿ ತತ್ತ್ವದ ೧೫ ಗುಣ ವಿವರ

ಅಗ್ನಿಯ ಶಬ್ದ ಗುಣದಲ್ಲಿ ಆಕಾಶ ತತ್ತ್ವದ ರಾಗಾದಿ ೫ ಗುಣಗಳು
ಅಗ್ನಿಯ ಸ್ಪರ್ಶ ಗುಣದಲ್ಲಿ ವಾಯು ತತ್ತ್ವದ ಧಾವನಾದಿ ೫ ಗುಣಗಳು

ಅಗ್ನಿಯ ರೂಪ ಗುಣದಲ್ಲಿ ಅಗ್ನಿ ತತ್ತ್ವದ ಕ್ಷುಧಾದಿ ೫ ಗುಣಗಳು
ಇವೇ ಅಗ್ನಿ ತತ್ತ್ವದ ೧೫ ಗುಣಗಳೆಂದು ಪ್ರಸಿದ್ಧ.

## ವಾಯು ತತ್ತ್ವದ ೧೦ ಗುಣ ವಿವರ

ವಾಯುವಿನ ಶಬ್ದ ಗುಣದಲ್ಲಿ ಆಕಾಶ ತತ್ತ್ವದ ರಾಗಾದಿ ೫ ಗುಣಗಳು.
ವಾಯುವಿನ ಸ್ಪರ್ಶಗುಣದಲ್ಲಿ ವಾಯುತತ್ತ್ವದ ಧಾವನಾದಿ ೫ಗುಣಗಳು
ಇವೇ ವಾಯು ತತ್ತ್ವದ ೧೦ ಗುಣಗಳು.

## ಆಕಾಶ ತತ್ತ್ವದ ೫ ಗುಣ ವಿವರ

ಆಕಾಶದ ಶಬ್ದಗುಣದಲ್ಲಿ ಆಕಾಶ ತತ್ತ್ವದ ರಾಗಾದಿ ೫ ಗುಣಗಳು.

ಈ ಪ್ರಕಾರ ಹೇಳಲ್ಪಟ್ಟ ವಿಭೇದಗುಣಂಗಳು ಹೆಚ್ಚು ಕಡಿಮೆಯಾಗಿ ತಾರತಮ್ಯವಾಗಿರುವ ಗುಣಂಗಳು ತತ್ತ್ವಗಳು ಕೂಡಲಾಗಿ ೭೫ ಗುಣಂಗಳಾದವು. ಹೀಗೆಂದು ಹೇಳುವಂಥ ಇದು ತಾನೇ ಪಿಂಡಸಂಗ್ರಹಭೇದವು. ಚತುರ್ದಶ ಭುವನಂಗಳೊಡನೆ ಕೂಡಿದ ಬ್ರಹ್ಮಾಂಡದಲ್ಲಿ ಪಿಂಡಗಳ ಸಮೂಹವು ಉಂಟಾದಂಥ ವಿಚಾರವು.

## ಮಹಾಭೂತಗಳ ಪಂಚೀಕೃತಿಯು

ಎಂತೆಂದೊಡೆ :–

(ವಿಜಯ ಭೈರವ ಗ್ರಂಥದಲ್ಲಿ)

### ಪೃಥ್ವಿಯ ಪಂಚೀಕೃತಿ

ಶ್ಲೋ|| ಚಿತ್ತಂಚ ಪ್ರಾಣವಾಯುಶ್ಚ ನಾಶಿಕಂ ಗಂಧಏವಚ |
ವಾಯುಃ ಪಂಚವಿಧಂ ಪ್ರೋಕ್ತಮಿತ್ಯೇತದ್ಭೂಮಿ ಪಂಚಕಂ ||

**ಟೀಕೆ**—ಪೃಥ್ವಿಯಲ್ಲಿಯ ಪೃಥ್ವಿ ವಾಯುವಿಂದ್ರಿಯ, ಪೃಥ್ವಿಯಲ್ಲಿಯ ಅಪ್ಪು ಗಂಧ, ಪೃಥ್ವಿಯಲ್ಲಿಯ ಅಗ್ನಿ ಘ್ರಾಣೇಂದ್ರಿಯ, ಪೃಥ್ವಿಯಲ್ಲಿಯ

ವಾಯು ಪ್ರಾಣ ವಾಯು, ಪೃಥ್ವಿಯಲ್ಲಿಯ ಆಕಾಶ ಅಹಂಕಾರ-ಈ ಐದು ಪೃಥ್ವಿಯ ಪಂಚೀಕೃತಿ.

## ಉದಕ ಪಂಚೀಕೃತಿ

ಶ್ಲೋ॥ ಬುದ್ಧಿಶ್ಚಪಾನವಾಯುಶ್ಚ ಜಿಹ್ವಾಚರಸ ಏವಚ ।
ಗುಹ್ಯಂ ಪಂಚವಿಧಂ ಪ್ರೋಕ್ತಂ ಏತತ್ ಸ್ಥಲ ಪಂಚಕಂ ॥

**ಟೀಕೆ**— ಜಲದಲ್ಲಿಯ ಪೃಥ್ವಿ ಗುಹ್ಯೇಂದ್ರಿಯ, ಜಲದಲ್ಲಿಯ ಅಪ್ಪುರಸ, ಜಲದಲ್ಲಿಯ ಅಗ್ನಿ ಜಿಹ್ವಾ, ಜಲದಲ್ಲಿಯ ವಾಯು ಅಪಾನ ವಾಯು, ಜಲದಲ್ಲಿಯ ಆಕಾಶಬುದ್ಧಿ–ಇವು ಐದು ಉದಕ ಪಂಚೀಕೃತಿ.

## ಅಗ್ನಿ ಪಂಚೀಕೃತಿ

ಶ್ಲೋ॥ ಅಹಂಕಾರೋ ವ್ಯಾನವಾಯುರ್ನೇತ್ರಂ ರೂಪಂ ತಥೈವಚ ।
ಪದಃ ಪಂಚವಿಧಂ ಪ್ರೋಕ್ತಂ ಇತ್ಯೇತದಗ್ನಿ ಪಂಚಕಂ ॥

**ಟೀಕೆ**— ಅಗ್ನಿಯಲ್ಲಿಯ ಪೃಥ್ವಿ ಪಾದೇಂದ್ರಿಯ, ಅಗ್ನಿಯಲ್ಲಿಯ ಅಪ್ಪು ರೂಪು, ಅಗ್ನಿಯಲ್ಲಿಯ ಅಗ್ನಿ ನೇತ್ರ, ಅಗ್ನಿಯಲ್ಲಿಯ ವಾಯು ಉದಾನ ವಾಯು, ಅಗ್ನಿಯಲ್ಲಿಯ ಆಕಾಶ ಬುದ್ಧಿ - ಈ ಐದು ಅಗ್ನಿ ಪಂಚೀಕೃತಿ.

## ವಾಯು ಪಂಚೀಕೃತಿ

ಶ್ಲೋ॥ ಮನಸೋವ್ಯಾನವಾಯುಶ್ಚ ಶ್ರೋತ್ರಂ ಶಬ್ದಂ ತಥೈವಚ ।
ಪಾಣಿ ಪಂಚವಿಧಂ ಪ್ರೋಕ್ತಂ ಇತ್ಯೇತದ್ವಾಯು ಪಂಚಕಂ ॥

**ಟೀಕೆ**— ವಾಯುವಿನಲ್ಲಿಯ ಪ್ರುಥ್ವಿ ಪಾಣಿ, ವಾಯುವಿನಲ್ಲಿಯ ಅಪ್ಪು ಸ್ಪರ್ಶನ, ವಾಯುವಿನಲ್ಲಿಯ ಅಗ್ನಿ ಚರ್ಮ, ವಾಯುವಿನಲ್ಲಿಯ ವಾಯು ವ್ಯಾನವಾಯು, ವಾಯುವಿನಲ್ಲಿಯ ಆಕಾಶ ಮನಸ್ಸು - ಈ ಐದು ವಾಯುವಿನ ಪಂಚೀಕೃತಿ.

## ಆಕಾಶ ಪಂಚೀಕೃತಿ

ಶ್ಲೋ॥ ಜ್ಞಾನಂ ಸಮಾನವಾಯುಶ್ಚ ಶ್ರೋತ್ರಂ ಶಬ್ದಸ್ತಥೈವಚ ।
ವಾಕ್ಯಂ ಪಂಚವಿಧಂ ಪ್ರೋಕ್ತಂ ಇತ್ಯೇತದ್ವ್ಯೋಮ ಪಂಚಕಃ ॥

**ಟೀಕೆ—** ಆಕಾಶದಲ್ಲಿಯ ಪೃಥ್ವಿ ವಾಗಿಂದ್ರಿಯು, ಆಕಾಶದಲ್ಲಿಯ ಅಪ್ಪು ಶಬ್ದ, ಆಕಾಶದಲ್ಲಿಯ ಅಗ್ನಿ ಕಿವಿ, ಆಕಾಶದಲ್ಲಿಯ ವಾಯು ಸಮಾನ ವಾಯು, ಆಕಾಶದಲ್ಲಿಯ ಆಕಾಶ ಜ್ಞಾತೃ–ಈ ಐದು ಆಕಾಶದ ಪಂಚೀಕೃತಿ.

## ಬುದ್ಧೀಂದ್ರಿಯಗಳು

**ಶ್ಲೋ ||** ಶ್ರೋತ್ರಂತ್ವಙ್ನೇತ್ರ ಜಿಹ್ವಾಚ ಘ್ರಾಣಂ ಪಂಚೇಂದ್ರಿಯಾಣಿಚ|
ಆಕಾಶ ವಾಯುರಗ್ನಿಶ್ಚಪಯಃ ಪೃಥ್ವೀಕಮೇವಚ ||

ನೇತ್ರ, ಶ್ರೋತ್ರ, ಜಿಹ್ವಾ, ಪ್ರಾಣ, ತ್ವಕ್ಕು - ಈ ಐದು ಜ್ಞಾನೇಂದ್ರಿಯಗಳು. ವಿವರ:-

೧. ಶ್ರೋತ್ರೇಂದ್ರಿಯಕ್ಕೆ ಆಕಾಶವೆಂಬ ಮಹಾ ಭೂತ, ದಶದಿಕ್ಕಧಿದೇವತೆ. ಶಬ್ದ ವಿಷಯ ಅಕ್ಷರ ಅನಕ್ಷರಾತ್ಮಕ ಈ ಐದು ಶಬ್ದ ಭೇದ.

೨. ತ್ವಗಿಂದ್ರಿಯಕ್ಕೆ ವಾಯುವೆಂಬ ಮಹಾ ಭೂತ,ಚಂದ್ರನಧಿದೇವತೆ. ಅಲ್ಲಿ ಸ್ಪರ್ಶನ ವಿಷಯು. ಶೀತ, ಉಷ್ಣ ಮೃದು ಕಠಿಣ ಈ ನಾಲ್ಕು ಸ್ಪರ್ಶನಭೇದ.

೩. ನೇತ್ರಕ್ಕೆ ಅಗ್ನಿ ಮಹಾ ಭೂತ, ಸೂರ್ಯನಧಿದೇವತೆ. ಅಲ್ಲಿ ರೂಪು ವಿಷಯು.ಶ್ವೇತ ಪೀತ ಹರಿತ ಕಪೋತ ಕೃಷ್ಣ ಮಾಂಜಿಷ್ಟ ಈ ಆರು ರೂಪ ಭೇದ.

೪. ಜಿಹ್ವೆಗೆ ಅಪ್ಪು ಮಹಾ ಭೂತ, ಅರುಣನಧಿದೇವತೆ. ಅಲ್ಲಿರಸ ವಿಷಯ. ಮಧುರ ಆಮ್ಲ (ಹುಳಿ) ತಿಕ್ತ (ಕಾರ) ಕಟು (ವಿಷ) ಕಷಾಯ ಲವಣ ಈ ಆರು ರಸಭೇದ.

೫. ಘ್ರಾಣಕ್ಕೆ ಪೃಥ್ವಿ ಮಹಾಭೂತ, ಅಶ್ವಿನಿ ಅಧಿದೇವತೆ. ಅಲ್ಲಿ ಗಂಧ ವಿಷಯ. ಸುಗಂಧ ದುರ್ಗಂಧ ಎರಡು ಭೇದ.

## ವಿಚಾರ

ಈ ಐದು ಜ್ಞಾನೇಂದ್ರಿಯಂಗಳು ಅರಿವು ಸ್ವರೂಪ ಮಾದ ಹೃಷೀಕಂಗಳೆಂಬ ಅಭಿದಾನಗಳು. ಇವು ತಮ್ಮತಮ್ಮ ಸಂಬಂಧವಾದವಿಷಯಂಗಳನು ತಿಳುವಳಿಕೆ ಮಾತ್ರದಿಂದಲೇ ಗ್ರಹಿಸುವ ವಾದಕಾರಣ ಇವಕ್ಕೆ ಜ್ಞಾನೇಂದ್ರಿಯಂಗಳೆಂಬ ನಾಮ ಪ್ರಸಿದ್ಧವಾಯಿತ್ತು. ಈ ಪಂಚ ಹೃಷೀಕಂಗಳ ಹಸಿಗೆಯ ವಿಚಾರವನ್ನು ತತ್ತ್ವಜ್ಞಾನಿಗಳು ತಿಳಿದುಕೊಂಬುವುದು.

## ಕರ್ಮೇಂದ್ರಿಯಂಗಳು

ಇನ್ನು ವಾಕ್, ಪಾದ, ಪಾಣಿ, ಪಾಯು, ಗುಹ್ಯ - ಇವು ಐದು ಕರ್ಮೇಂದ್ರಿಯಂಗಳು. ಇವಕ್ಕೆ ವಿವರ:-

೧. **ವಾಗೀಂದ್ರಿಯಕ್ಕೆ** ನಾಗವಾಯು, ಸರಸ್ವತಿ ಅಧಿದೇವತೆ. ಅಲ್ಲಿ ಸುವಾಕ್ಯ ದುರ್ವಾಕ್ಯ ವಿಷಯ.

೨. **ಪಾಣೀಂದ್ರಿಯಕ್ಕೆ** ಕೂರ್ಮವಾಯು, ಇಂದ್ರನಧಿದೇವತೆ. ಅಲ್ಲಿ ಆದಾನ ವಿದಾನ ವಿಷಯ.

೩. **ಪಾದಕ್ಕೆ** ಕ್ರುಕರವಾಯು, ವಿಷ್ಣುವಧಿದೇವತೆ. ಅಲ್ಲಿ ಗಮನಾಗಮನ ವಿಷಯ.

೪. **ಪಾಯ್ವೀಂದ್ರಿಯಕ್ಕೆ** ಧನಂಜಯ ವಾಯು, ಬ್ರಹ್ಮನಧಿದೇವತೆ. ಅಲ್ಲಿ ಆನಂದ ಅನಾನಂದ ವಿಷಯ.

೫. **ಗುಹ್ಯಕ್ಕೆ** ದೇವದತ್ತ ವಾಯು, ಮೃತ್ಯುವಧಿದೇವತೆ. ಅಲ್ಲಿ ಸರ್ಜನ ವಿಸರ್ಜನ ವಿಷಯ.

**ವಿಚಾರ**— ಈ ಕರ್ಮೇಂದ್ರಿಯಂಗಳು ಕ್ರಿಯಾರೂಪವಾದ ಪಂಚ ಹೃಷೀಕಂಗಳೆನಿಸುವುವು. ಇವು ಒಬ್ಬ ಆತ್ಮಾಧೀನದಿಂದಲ್ಲದ ಸ್ವಯಾಧೀನದಿಂದ ಚೇಷ್ಟಿಸಲರಿಯವು. ಇವು ತಮ್ಮ ತಮ್ಮ ಸಂಬಂಧವಾದ ವಿಷಯಂಗಳನ್ನು ಮನಸಾಧೀನದೊಡನೆ ಕೂಡಿಕೊಂಡು ವಾಯುವಿನ ಚೈತನ್ಯ ಬಲದಿಂದಲೇ ಗ್ರಹಿಸುತ್ತಿಹುವಾದಕಾರಣ ಕ್ರಿಯಾ

ರೂಪವಾದ ಪಂಚ ಹೃಷೀಕಂಗಳೆಂಬ ನಾಮವು ಪ್ರಸಿದ್ಧವಾಯಿತು. ಈ ಪ್ರಕಾರದಿಂದ ಕ್ರಿಯಾರೂಪವಾದ ಪಂಚ ಹೃಷೀಕಂಗಳ ಹಸಿಗೆ (ಭಾಗದ) ವಿಚಾರವನ್ನು ತತ್ತ್ವಜ್ಞಾನಿಗಳು ತಿಳಿದುಕೊಳ್ಳುವುದು.

## ದಶ ವಾಯುಗಳು

ಇನ್ನು ದಶವಾಯುಗಳ ಸ್ಥಾನ, ಧರ್ಮ, ಕರ್ಮ, ವರ್ಣಗಳೆಂತೆಂದೊಡೆ—

ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯ ಇಂತಿವು ದಶವಾಯುಗಳು.

೧. **ಪ್ರಾಣವಾಯು—** ಇಂದ್ರ ನೀಲವರ್ಣ, ಹೃದಯಸ್ಥಾನದಲ್ಲಿದ್ದು, ಅಂಗುಷ್ಠ ತೊಡಗಿ ನಾಸಾಗ್ರ ಪರಿಯಂತರ ಸಪ್ರಮಾಣಿಸಿಕೊಂಡು ಉಶ್ವಾಸ - ನಿಶ್ವಾಸನಗಳನ್ನು ಮಾಡಿ ಅನ್ನಜೀರ್ಣಕರಣವಂ ಮಾಡುತ್ತಿಹುದು.

೨. **ಅಪಾನವಾಯು—** ಹರಿತವರ್ಣ, ಗುದಸ್ಥಾನದಲ್ಲಿದ್ದು, ಮಲಮೂತ್ರ ವಿಸರ್ಜನೆಗೈಸಿ ಅಧೋದ್ವಾರವಂ ಬಲಿದು ಅನ್ನರಸವಂ ವ್ಯಾಪ್ತಿಯಂ ಮಾಡಿಸುವುದು.

೩. **ವ್ಯಾನವಾಯು—** ಗೋಕ್ಷೀರ ವರ್ಣ, ಸರ್ವಸಂಧಿಯಲ್ಲಿದ್ದು, ನಿಜಸ್ಥಿತಿಗೊಂಡು, ನೀಡಿಕೊಂಡು ಇಹುದನು ಮುದುಡಿಕೊಂಡಿಹುದು· ಅನ್ನಪಾನವಂ ತುಂಬಿಸುತ್ತಿಹುದು.

೪. **ಉದಾನವಾಯು—** ಎಳೆಯ ಮಿಂಚಿನ ವರ್ಣ, ಕಂಠಸ್ಥಾನದಲ್ಲಿದ್ದು, ಸೀನುವ, ಕೆಮ್ಮುವ, ಕನಸು ಕಾಣಿಸುವ, ಏಳಿಸುವ, ತರ್ಜಿಸಿ ರೋದನಂಗಳಂ ಮಾಡಿಸಿ ಅನ್ನರಸ ಆಹಾರ ಸ್ಥಾಪನಂಗೈಯ್ಯುತ್ತಿರುವುದು.

೫. **ಸಮಾನವಾಯು—**ನೀಲವರ್ಣ, ನಾಭಿ ಸ್ಥಾನದಲ್ಲಿದ್ದು, ಆಪಾದಮಸ್ತಕ ಸಪ್ರಮಾಣಿಸಿಕೊಂಡು ಅನ್ನರಸವಂ ಎಲ್ಲ ರೋಮನಾಳಂಗಳಿಗೆ ಹಂಚಿಕ್ಕುತಿಹುದು.

**ವಿಚಾರ:—** ಈ ಐದು ಪ್ರಾಣಗಳು ಆತ್ಮನು ಘಟವಿಡಿದು ಹುಟ್ಟುವಾಗ ಆತ್ಮನೊಡನೆ ಹುಟ್ಟಿ, ಆತ್ಮನು ಘಟದಲ್ಲಿ ಜೀವಿಸಿಕೊಂಡಿರುವ ಪರ್ಯಂತವು ಆತ್ಮನ ಸಕಲ ವ್ಯವಹಾರಂಗಳಿಗೆ ತಾವೇ ಸಹಾಯಗಳಾಗಿ ಆತ್ಮನು ಘಟವ ಬಿಟ್ಟು ಹೋಗುವಾಗ ಸೂರ್ಯನ ಕಿರಣಗಳು ಸೂರ್ಯನೊಡನೈದುವ ಹಾಗೆ ಅತ್ಮನೊಡನೆ ಐದುತ್ತಿಹವಾದ ಕಾರಣ ಇವಕ್ಕೆ ಪ್ರಾಣಪಂಚಕವೆಂಬ ಹೆಸರು ಪ್ರಸಿದ್ಧವಾಯಿತು. ಇನ್ನು

೧. **ನಾಗವಾಯು—** ಪೀತವರ್ಣ, ರೋಮನಾಳಂಗಳಲ್ಲಿದ್ದು ಚಲನೆಯಿಲ್ಲದೆ ಆಡಿಸುತ್ತಿಹುದು.

೨. **ಕೂರ್ಮ ವಾಯು—** ಶ್ವೇತವರ್ಣ, ಉದರ ಲಲಾಟದಲ್ಲಿದ್ದು ಶರೀರ ಮುಂತಾಗಿ ದೇಹಪುಷ್ಟಿಯಂ ಮಾಡಿಕೊಂಡು ಬಾಯಿ ಮುಚ್ಚುತ್ತ, ತೆರೆಯುತ್ತ ನೇತ್ರದಲ್ಲಿ ಉನ್ಮೀಲನಮಂ ಮಾಡಿಸುತ್ತಿಹುದು.

೩. **ಕ್ರಕರವಾಯು—** ಅಂಜನವರ್ಣ, ನಾಸಿಕಾಗ್ರದಲ್ಲಿರ್ದು ಕ್ಷುಧಾದಿ ಧರ್ಮಂಗಳಂ ನೆಗಳಿಸಿ ಗಮನಾಗಮನಂಗಳಂ ಮಾಡಿಸುತ್ತಿಹುದು.

೪. **ದೇವದತ್ತವಾಯು—** ಸ್ಫಟಿಕವರ್ಣ, ಗುಹ್ಯ ಕಟಿಸ್ಥಾನದಲ್ಲಿರ್ದು ಕುಳ್ಳಿರ್ದಲ್ಲಿ ಮಲಗಿಸಿ, ಮಲಗಿರ್ದಲ್ಲಿ ಏಳಿಸಿ, ನಿಲ್ಲಿಸಿ, ಚೀತರಿಸಿ, ಒರಲಿಸಿ ಮಾತನಾಡಿಸುತ್ತಿಹುದು.

೫ **ಧನಂಜಯ ವಾಯು—** ನೀಲವರ್ಣ, ಬ್ರಹ್ಮರಂಧ್ರ ಸ್ಥಾನದಲ್ಲಿರ್ದು ಸಮುದ್ರ ಘೋಷಮಂ ಘೋಷಿಸಿ ಮರಣ ಕಾಲಕ್ಕೆ ನಿರ್ಘೋಷಮಪ್ಪುದು.

**ವಿಚಾರ:—** ಇಂತಿವು ೧೦ ವಾಯುಗಳು. ಮೊದಲು ಹೇಳಿದ ಪ್ರಾಣಾದಿ ಐದು ವಾಯುಗಳು ಹೋದರೂ ನಾಗಾದಿ ಐದು ವಾಯುಗಳು ಹೋಗದೆ ನಾಗವಾಯು ಆತ್ಮನು ಘಟವ ಬಿಟ್ಟುಹೋದ ಒಂದನೇ ಗಳಿಗೆಗೆ ಹೋಗುವುದು. ಕೂರ್ಮವಾಯು ಎರಡನೇ ಗಳಿಗೆಗೆ, ಕ್ರಕರ ವಾಯು ಮೂರನೇ ಗಳಿಗೆಗೆ, ದೇವದತ್ತವಾಯು ನಾಲ್ಕನೇ ಗಳಿಗೆಗೆ

ಹೋಗುವವು. ಧನಂಜಯ ವಾಯುವು ಮಾತ್ರ ಹುಗಿದ ದೇಹವನ್ನು ಉಕ್ಕಿಸಿ, ಬಾಯಿಸಿ, ಊದಿಸಿ, ಒಡಿಸಿ ಭೌತಿಕಾಗ್ನಿಯ ಕೂಡಿ ಹೋಗುವದು. ಅಥವಾ ಸುಡಲಿಟ್ಟ ದೇಹವು ಎಲ್ಲ ಸುಟ್ಟ ಬಳಿಕ ತಲೆಯನ್ನು ಘಟ್ಟಿಂದು ಒಡಿಸಿ ಮಹಾವಾಯುವ ಕೂಡಿ ಹೋಗುವುದು. ಈ ದಶ ವಾಯುಗಳ ಹಸಿಗೆ (ಭಾಗ)ಯನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಕರಣ ಚತುಷ್ಟಯಗಳು

ಇನ್ನು ಕರಣ ಚತುಷ್ಟಯಂಗಳುತ್ಪತ್ತಿಯು. ಆತ್ಮನು ಆಕಾಶವೆಂಬ ಮಹಾ ಭೂತವಮಂ ಬೆರಿಸಿದೊಡೆ ಜ್ಞಾನ ಪುಟ್ಟಿತ್ತು. ಆತ್ಮನು ವಾಯುವೆಂಬ ಮಹಾ ಭೂತವಮಂ ಬೆರಿಸಿದೊಡೆ ಮನಸ್ಸು ಪುಟ್ಟಿತ್ತು. ಆತ್ಮನು ಅಗ್ನಿಯೆಂಬ ಮಹಾಭೂತವಮಂ ಬೆರಿಸಿದೊಡೆ ಅಹಂಕಾರ ಪುಟ್ಟಿತ್ತು. ಆತ್ಮನು ಅಪ್ಪುವೆಂಬ ಮಹಾಭೂತವಮಂ ಬೆರಿಸಿದೊಡೆ ಬುದ್ಧಿ ಪುಟ್ಟಿತ್ತು. ಆತ್ಮನು ಪೃಥ್ವಿಯೆಂಬ ಮಹಾಭೂತವಂ ಬೆರಿಸಿದೊಡೆ ಚಿತ್ತು ಪುಟ್ಟಿತ್ತು. ಇಂತಿವು ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ **ಅಂತಃಕರಣ ಚತುಷ್ಟಯಗಳು.**

**ವಿಚಾರ:**— ಇವು ತಮ್ಮ ತಮ್ಮ ಸಂಬಂಧವಾದ ವಿಷಯಗಳನ್ನು ಆತ್ಮನೊಳಗಿದ್ದುಕೊಂಡೇ ಗ್ರಹಿಸುತ್ತವಾದಕಾರಣ ಇವಕ್ಕೆ ಅಂತಃಕರಣವೆಂಬ ನಾಮ ಪ್ರಸಿದ್ಧವಾಯಿತ್ತು. ಇನ್ನು ಈ

## ಕರಣ ಚತುಷ್ಟಯಂಗಳ ವಿವರ

**ಮನಸ್ಸಿಗೆ** – ವಾಯುವೆಂಬವು ಮೂಲ ಚೈತನ್ಯವು, ಚಂದ್ರನಧಿದೇವತೆ. ಅಲ್ಲಿ ಸಂಕಲ್ಪ ವಿಕಲ್ಪವಂ ಮಾಡಿಸುತ್ತಿಹುದು. ಮತ್ತು ಅರಿವು ಮರವೆಯೆಂಬುಡನ್ನೇ ಅನುಗ್ರಹಿಸುವದು.

**ಅಹಂಕಾರಕ್ಕೆ**– ಅಗ್ನಿಯೆಂಬ ಮಹಾಭೂತ, ರುದ್ರನಧಿದೇವತೆ. ಅಲ್ಲಿ ಅಹಂಭಾವದಿಂದ ಅಹಂಕರಿಸುತ್ತಿರುವುದು.

**ಬುದ್ಧಿಗೆ**– ಅಪ್ಪುವೆಂಬ ಮಹಾಭೂತ, ವಿಷ್ಣುವಧಿದೇವತೆ. ಅಲ್ಲಿ ಬುದ್ಧಿ ನಿಶ್ಚಯಿಸುತ್ತಿಹುದು.

**ಚಿತ್ತಕ್ಕೆ**– ಪೃಥ್ವಿಯೆಂಬ ಮಹಾಭೂತ, ಬ್ರಹ್ಮನಧಿದೇವತೆ. ಅಲ್ಲಿ ಅಸತ್ಯವಾದ ಸಕಲ ಸಂಸಾರಾದಿ ಪ್ರಪಂಚವು ನಿತ್ಯವೆಂಬ ಭಾವನೆ ಯಿಂದವಧರಿಸಿ ಆನಂದಿಸುತ್ತಿಹವು. ಇಂತಿವು **ಕರಣ ಚತುಷ್ಟಯಂ ಗಳು.**

## ಪಂಚವಿಂಶತಿ ತತ್ತ್ವಗಳು

ಇನ್ನು ಭೂತಪಂಚಕ ವಾಯುಪಂಚಕ ಕರ್ಮೇಂದ್ರಿಯ ಪಂಚಕ ಜ್ಞಾನೇಂದ್ರಿಯಪಂಚಕ ಕರಣಚತುಷ್ಟಯಂಗಳೆನಿಪ ಚತುರ್ವಿಂಶತಿ (೨೪) ತತ್ತ್ವವಾಹಂತಹದೀಗ. ದೇಹ ಪಂಚವಿಂಶತಿ (೨೫) ತತ್ತ್ವ ವಾಹಂತಹ ಆತ್ಮನೇ ದೇಹಿ. ಆ ಆತ್ಮಂಗೆ ಜ್ಞಾನೇಂದ್ರಿಯವೆ ಚಿತ್ಸ್ವರೂಪ, ಪರಶಿವನಧಿದೇವತೆ. ಸರ್ವಾತ್ಮರುಗಳಲ್ಲಿ ಚೈತನ್ಯರೂಪ ನಾಗಿ ತೊಳಗಿ ಬೆಳಗುತ್ತಿಹನು. ಇನ್ನು

ಮಾನಸಾದಕರಣಂಗಳು ಪರಾಶಕ್ತಿಯ ಸ್ವರೂಪು,ಪ್ರಾಣಾದಿವಾಯು ಗಳು ಆದಿಶಕ್ತಿಯ ಸ್ವರೂಪು, ಭೂತಾದಿ ಪಂಚಕಂಗಳು ಇಚ್ಛಾಶಕ್ತಿ ಯ ರೂಪು,ಶ್ರೋತ್ರಾದಿ ಜ್ಞಾನೇಂದ್ರಿಯಂಗಳು ಜ್ಞಾನಶಕ್ತಿಯ ಸ್ವರೂಪು, ವಾಗಾದಿ ಕರ್ಮೇಂದ್ರಿಯಂಗಳು ಕ್ರಿಯಾ ಶಕ್ತಿಯ ಸ್ವರೂಪು – ಇಂತಿವು ಪಂಚಶಕ್ತಿ ಸ್ವರೂಪು ಪಂಚವಿಂಶತಿ ತತ್ತ್ವಂಗಳು.

## ದಶನಾಡಿಗಳು

ಇನ್ನು ದಶನಾಡಿಗಳ ಭೇದವಂ ಪೇಳ್ವೆ-

> ಈಡಾಚ ಪಿಂಗಳಶ್ಚೈವ ಸುಷುಮ್ನಾಚತೃತೀಯಕಂ। ಗಾಂಧಾರೀ ಹಸ್ತಿ ಜಿಂಹ್ವಾಚ ಪೂಷಶ್ಚೈವ ಪಯಸ್ವಿನೀ ಅಲುಂಬುಲಕು ಲಶ್ಚೈವ ಶಂಕಿನೀದಶನಾಡಿಕಾಃ ॥ ಎಂದು.

**ಈಡಾ ಚಂದ್ರನಾಳ (ವಾಮನಾಸಾಪುಟ) ಪಿಂಗಳ ಸೂರ್ಯನಾಳ (ದಕ್ಷಿಣನಾಸಾಪುಟ) ಸುಷುಮ್ನ ಮಧ್ಯನಾಳ (ಮಧ್ಯನಾಸಾಪುಟ) ಗಾಂಧಾರೀ ಬಲದ ನೇತ್ರಂ ಹಸ್ತಿ ಜಿಂಹ್ವಾ ಎಡದ ನೇತ್ರ,ಪೂಷಾ ಬಲದ**

ಕರ್ಣ, ಪಯಸ್ವಿನೀ ಎಡದ ಕರ್ಣ, ಲಕುಹ ಗುದನಾಳ, ಅಲಂಬು ಮೇಢ್ರನಾಳ(ಶಿಶ್ನ)ಶಂಕಿನಿ ನಾಭಿನಾಳ-ಇಂತಿವು ದಶನಾಡಿಗಳು. ಇವಕ್ಕೆ

## ಅಧಿದೇವತೆಗಳು

ಈಡೆಗೆ ಹರಿಯು, ಪಿಂಗಳೆಗೆ ಬ್ರಹ್ಮನು, ಸುಷುಮ್ನೆಗೆ ರುದ್ರನು, ಗಾಂಧಾರಿಗೆ ಇಂದ್ರನು, ಹಸ್ತಿಜಿಹ್ವೆಗೆ ವರುಣನು, ಪೂಷೆಗೆ ದಿಗ್ದೇವತೆಗಳು ಪಯಸ್ವಿನಿಗೆ ಪದ್ಮೋದ್ಭವ,ಲಕುಹಕ್ಕೆ ಭೂಮಿ, ಅಲಂಬುವಿಗೆ ಸೂರ್ಯನು, ಶಂಕಿನಿಗೆ ಚಂದ್ರನು – ಇಂತಿವು ದಶನಾಡಿಗಳ ಅಧಿದೇವತೆಗಳು.

## ದಶನಾಡಿಗಳ ಕಾರ್ಯಗಳ ವಿಚಾರ

೧. **ಈಡಾ** ೧೬ ಅಂಗುಲ ಪ್ರಮಾಣ ವಾಯುವನ್ನು ಹೊರಕ್ಕೆ ರೇಚಿಸುವುದು.

೨. **ಪಿಂಗಳ**–೧೨ ಅಂಗುಲ ಪ್ರಮಾಣ ವಾಯುವಿನೊಳಗೆ ನಾಲ್ಕು ಅಂಗುಲ ಪ್ರಮಾಣ ವಾಯುವನ್ನು ಕತ್ತರಿಸಿ ೧೨ ಅಂಗುಲ ಪ್ರಮಾಣ ವಾಯುವನ್ನು ಒಳಕ್ಕೆ ಪೂರಿಸುವದು.

೩. **ಸುಷುಮ್ನೆ**– ೧೨ ಅಂಗುಲ ಪ್ರಮಾಣದೊಳಗೆ ೨ ಅಂಗುಲ ಪ್ರಮಾಣವನುಳಿದು ದಶಾಂಗುಲ ಪ್ರಮಾಣ ವಾಯುವನ್ನು ಪೂರ್ಣ ಕುಂಭಕದಂತೆ ತಡೆದು ನಿಲ್ಲಿಸುವದು.

೪. **ಗಾಂಧಾರಿ**–ಚಿತ್ರವಿಚಿತ್ರ ರೂಪಗಳ ನೋಡುವ ಕೃತ್ಯವನ್ನು ನಡಿಸುವದು.

೫. **ಹಸ್ತಿಜಿಹ್ವೆ**– ಮಲಗುವಂತಹ ನಿದ್ರಾವ್ಯಸನದ ಕೃತ್ಯ ನಡಿಸುವದು.

೬. **ಪೂಷಾ**–ನಾದಾದಿ ಶಬ್ದಂಗಳ ಕೇಳುವಿಕೆಯನ್ನು ನಡಿಸುವದು.

೭. **ಪಯಸ್ವಿನಿ**–ಪಂಚವಾದ್ಯಗಳ ಕೇಳುವ ಇಚ್ಛಾಕೃತ್ಯವನ್ನು ನಡಿಸುವದು

೮. **ಲಕುಹ**–ದೇಹದ ಧಾರಣೆಯನ್ನೆಲ್ಲ ವಹಿಸಿಕೊಂಡು ನಡಿಸುವದು.

೯. **ಅಲಂಬು**–ಆತ್ಮಗೆ ಕ್ಷುಧಾದಿ ಧರ್ಮಂಗಳ ಮಾಡಿ ನಡಿಸುವದು.

೧೦. **ಶಂಕಿನಿ**–ನಾಡಿಗಳಿಗೆಲ್ಲ ಮೂಲವಾಗಿ ಕ್ಷುಧಾದಿ ಧರ್ಮಂಗಳ ಶಾಂತಿಯನ್ನುಂಟುಮಾಡುವದು.

ಈ ಹತ್ತು ಪ್ರಕಾರದ ನಾಳಂಗಳ ಅಧಿದೇವತೆ ಮತ್ತು ಕಾರ್ಯಗಳ ಹಸಿಗೆ (ಭೇದ) ವಿಚಾರವನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಅಷ್ಟಾತ್ಮಗಳು

೧. **ಜೀವಾತ್ಮ**–ದೇಹಭಾವದ ವ್ಯವಹಾರದಿಂದ ತನ್ನತಾನೆ ಮರೆಯುವನು ಜೀವಾತ್ಮ.

೨. **ಅಂತರಾತ್ಮ**–ದೇಹದ ಜಡತ್ವವಂ ಕಂಡು, ತಾನಾರೋ ಎಂದು ಶಂಕಿಸುವಾತ್ಮನು.

೩. **ಪರಮಾತ್ಮ**–ತನ್ನ ತತ್ತ್ವವನರಿದು ಪರ ತತ್ತ್ವದಲ್ಲಿ ಪರಾಕಾಷ್ಠೆಯನ್ನೈದುವಾತನು.

೪. **ನಿರ್ಮಲಾತ್ಮ**– ಆಣವಾದಿ ಮಲತ್ರಯ ದೂರಸ್ಥನು.

೫. **ಶುದ್ಧಾತ್ಮ**– ಅಂತಶ್ಶುಚಿ ಬಹಿಶ್ಶುಚಿಯಾದಾತನು.

೬. **ಜ್ಞಾನಾತ್ಮ**– ನಿತ್ಯಾನಿತ್ಯ ವಿವೇಕಪರನು.

೭. **ಮಹಾತ್ಮ**– ಮಹಿಮಾಸ್ಪದನಾಗಿ ಮೆರೆವಾತ್ಮನು.

೮. **ಭೂತಾತ್ಮ**– ಪ್ರಾಣಿಗಳ ಚೈತನ್ಯ ಸ್ವರೂಪನಾಗಿರುವಾತನು.

ಈ ಏಂಟು ಪ್ರಕಾರದ ಆತ್ಮರುಗಳ ಹಸಿಗೆಯ ವಿಚಾರವನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಅಷ್ಟತನುಗಳ ವಿಚಾರ

೧. **ಸ್ಥೂಲ ತನು**– ಪೃಥ್ವಿ ಅಪ್ಪು ತತ್ತ್ವಗಳಿಂದಾದದ್ದು.

೨. **ಸೂಕ್ಷ್ಮ ತನು**– ಅಗ್ನಿ ವಾಯು ತತ್ತ್ವಗಳಿಂದಾದದ್ದು.

೩. **ಕಾರಣ ತನು**— ಆಕಾಶ ಅಹಂಕಾರ ತತ್ತ್ವಗಳಿಂದಾದದ್ದು.
೪. **ನಿರ್ಮಲ ತನು**— ಪಂಚ ಕರ್ಮೇಂದ್ರಿಯಂಗಳಿಂದಾದದ್ದು.
೫. **ಆನಂದತನು**— ಪಂಚ ವಿಷಯುಗಳಿಂದಾದದ್ದು.
೬. **ಚಿನ್ಮಯ ತನು**— ಪಂಚ ಜ್ಞಾನೇಂದ್ರಿಯಂಗಳಿಂದಾದದ್ದು.
೭. **ಚಿದ್ರೂಪ ತನು**— ಪಂಚ ಪ್ರಾಣವಾಯುಗಳಿಂದಾದದ್ದು.
೮. **ಶುದ್ಧ ತನು**— ಪಂಚ ಕರಣಂಗಳಿಂದಾದದ್ದು.

ಇಂತಪ್ಪ ೮ ಪ್ರಕಾರವಾದ ಅಂಗಗಳ ಹಸಿಗೆಯನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಅಂತರಂಗದ ಅಷ್ಟಮದಗಳು

೧. **ಸಂಸ್ಥಿತ**—ದೇಹೋಹಂ ಎಂಬ ಮೂಲಾಹಂಕಾರವು ಲೇಸಾಗಿ ಇರುವಂಥಾದ್ದು
೨. **ತೃಣೀಕೃತ**—ಅಹಂಕಾರದಿಂದ ಎಲ್ಲರನ್ನೂ ತೃಣೀಕರಿಸಿ ನುಡಿಯುವದು.
೩. **ವರ್ತಿನಿ**—ಪರಧನ ಪರಸತಿ ಪರದೈವ ಪರನಿಂದೆ ಪರಹಿಂಸೆ ಎಂಬ ಪಂಚ ಮಹಾ ಪಾತಕಂಗಳೊಡನೆ ಚರಿಸುವದು.
೪. **ಕ್ರೋಧಿನಿ**—ಸತ್ಪುರುಷರು ನಡವಳಿಯ ಹೇಳಿದರೆ ಅವರ ಮೇಲೆ ಉರಿದೇಳುವದು.
೫. **ಮೋಹಿನಿ**—ಸತಿ ಸುತಾದಿಗಳ ಮಮಕಾರವೇ ಮುಂದುಗೊಂಡಿರುವದು.
೬. **ಅತಿಚಾರಿಣಿ**—ಅಂತರಂಗದಲ್ಲಿ ವಿಷಯೋದ್ರೇಕ ಬೆಳೆದು ಸರ್ವದರಲ್ಲಿಯೂ ಮುಖದಪ್ಪಿ ನಡೆವ ವರ್ತನವು.
೭. **ಗಂಧಚಾರಿಣಿ**—ಸದಾ ಆಣವಾದಿ ಮಲತ್ರಯ ದುರ್ವಾಸನೆಯ ಸ್ವೀಕಾರದೊಡನೆ ಕೂಡಿ ವರ್ತಿಸುವದು.

೮. **ವಾಸಿನಿ**— ಶಿವಾನುಭವವನ್ನು ಕೇಳಿಯೂ ಮತ್ತೂ ಮಲತ್ರಯಂಗಳ ಸುಖವನುಭವಿಸುವ ನೆನಹು ಹಿಂಗದಿರುವದು.

ಈ ಎಂಟು ಪ್ರಕಾರದ ಅಂತರಂಗಮದಗಳ ಹಸಿಗೆಯ ವಿಚಾರವನ್ನು ಬಲ್ಲವರು ತಿಳಿಯುವದು.

## ಬಹಿರಂಗವ ಅಷ್ಟಮದಗಳು

ಕುಲಂ ಛಲಂ ಧನಂ ಚೈವ । ರೂಪು ಯೌವ್ವನ ಮೇವಚ ।
ವಿದ್ಯಾ ರಾಜ್ಯಂ ತಪಶ್ಚೈವ ಏತೇಚಾಷ್ಟಮದಾಸ್ಸ್ಮೃತಾಃ ॥

ಎಂದು ಕುಲ, ಛಲ, ಧನ, ರೂಪು, ಯೌವನ ವಿದ್ಯೆ, ರಾಜ್ಯ, ತಪ ಇಂತಿವು ಬಹಿರಂಗದ ಅಷ್ಟಮದಗಳು. ಇವು ವಾಗ್ರೂಪಮದಗಳು.

೧. **ಕುಲಮದ**—ನಾವು ಮಹಾ ಕುಲೋತ್ತಮರು ವಿಶ್ವವರೊಳಗಾರೂ ನಮಗೆ ಸರಿಬಾರರೆಂಬ ಮದವು

೨. **ಛಲಮದ**— ಯಾವ ಛಲದವನೂ ನನಗೆ ಸರಿಬಾರನೆಂಬದು

೩. **ಧನಮದ**—ನಮ್ಮ ಸಂಪತ್ತಿಗೆ ಯಾರೂ ಸರಿಬರಲಾರರೆಂಬದು

೪. **ರೂಪುಮದ**—ನನ್ನ ಸೌಂದರ್ಯಲಾವಣ್ಯಕ್ಕೆ ಆರೂ ಸಮಾನ ಬರಲರಿಯರೆಂಬದು.

೫. **ಯೌವನಮದ**—ಎಳೆಜವ್ವನ ಮೊಳೆಜವ್ವನ ತುಂಬುಜವ್ವನ ಸೊಕ್ಕುಜವ್ವನವುಳ್ಳವರಾರೂ ನನ್ನ ಯೌವನಕ್ಕೆ ಸರಿಬಾರರೆಂಬದು.

೬. **ವಿದ್ಯಾಮದ**—ನಾವು ಮಹಾ ವಿದ್ವಾಂಸರು ನಮ್ಮ ವಿದ್ವತ್ತಿಗೆ ಆರೂ ಸಮಾನಂ ಬರಲರಿಯರೆಂಬದು.

೭. **ರಾಜ್ಯಮದ**—ನಮ್ಮ ರಾಜ್ಯಾಧಿಪತಿತ್ವಕ್ಕೆ ಯಾರೂ ಸರಿಯಿಲ್ಲವೆಂಬುದು.

೮. **ತಪಮದ**—ನಮ್ಮ ತಪಸ್ಸಿಗೆ ಯಾರೂ ಸರಿಯಿಲ್ಲವೆಂಬದು.

ಸಕಲಾತ್ಮರೂ ಮನದಲ್ಲಿ ತೋರಿದ ಮದಗುಣಗಳನ್ನೇ ಬಹಿರಂಗ ದಲ್ಲಿ ಹೇಳುವ ಹಸಿಗೆಯ ವಿಚಾರವನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಅಷ್ಟಮೂರ್ತಿ ಮದಗಳು

೧. **ಪೃಥ್ವಿ**–ಮದವೆತ್ತಿದಲ್ಲಿ ತನುಗುಣ ಭರಿತನಾಗಿ ವಸ್ತ್ರಾಭರಣ ಅನುಲೇಪನ ತಾಂಬೂಲವಂ ಬಯಸುತ್ತಿಹನು.

೨. **ಜಲ**–ಮದವೆತ್ತಿದಲ್ಲಿ ಸಂಸಾರ ಭರಿತನಾಗಿ ನನಗೆ ಬೇಕು, ಮನೆಗೆ ಬೇಕು, ಮಕ್ಕಳಿಗೆ ಬೇಕೆನ್ನುವನು.

೩. **ಅಗ್ನಿ**–ಮದವೆತ್ತಿದಲ್ಲಿ ಕಾವ್ಯ ರಸಭರಿತನಾಗಿ ಕರಿಸಬೇಕು ನೋಡಬೇಕು ನುಡಿಸಬೇಕು ಆಲಿಂಗಿಸಬೇಕು ಎನ್ನುವನು.

೪. **ವಾಯು**–ಮದವೆತ್ತಿದಲ್ಲಿ ಹೋಹೆ, ಬಂದಿಹೆ, ಕೊಟ್ಟಿಹೆ, ಕೊಂಡಿಹೆನೆನ್ನುವನು.

೫. **ಆಕಾಶ**–ಮದವೆತ್ತಿದಲ್ಲಿ ವಾಹನಭರಿತನಾಗಿ ಆನೆ, ಕುದುರೆ, ಅಂದಣ, ಸೇನೆ, ದಳ, ತಂತ್ರ, ಛತ್ರ ಚಾಮರಂಗಳನು ಬಯಸುವನು.

೬. **ರವಿ**–ಮದವೆತ್ತಿದಲ್ಲಿ ಕೋಪಾಗ್ನಿ ಭರಿತನಾಗಿ ಸಾಧಿಸಿಹೆ, ಭೇದಿಸಿಹೆ, ಕೊಂದಿಹೆ, ತಿಂದಿಹೆನೆನ್ನುವನು.

೭. **ಶಶಿ**–ಮದವೆತ್ತಿದಲ್ಲಿ ಚಿಂತಾಭರಿತನಾಗಿ ಆದೀತೋ ಆಗದೋ ಇದ್ದೀತೋ ಇಲ್ಲವೋ ಏನೋ ಎಂತೋ ಎಂದು ಚಿಂತಿಸುವನು.

೮. **ಆತ್ಮ**–ಮದವೆತ್ತಿದಲ್ಲಿ ಅಹಂಕಾರಭರಿತನಾಗಿ ಎನ್ನಿಂದ ಬಲ್ಲಿದರಿಲ್ಲ, ಎನಗಿನ್ನಾರು ಇದಿರಿಲ್ಲವೆಂಬುವನು.

ಈ ಅಷ್ಟ ಮೂರ್ತಿ ಮದಗಳ ವಿಚಾರವನ್ನು ಬಲ್ಲವರು ಗ್ರಹಿಸುವುದು.

## ಸಪ್ತ ಧಾತುಗಳುತ್ಪತ್ತಿ

**ರಸೋ ರುಧಿರ ಮಾಂಸಂಚ । ಮೇದಮಜ್ಜಾಸ್ಥಿರೇತಸಃ ।**
**ಧಾತವಃ ಸಪ್ತಧಾಪ್ರೋಕ್ತಾ ಸರ್ವದೇಹ ಸಮಾಶ್ರಿತಾಃ ॥**

ಎಂದು ರಸ, ರುಧಿರ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ಲ - ಇಂತಿವು ಸಪ್ತ ಧಾತುಗಳು. ಇವುಗಳ ವಿವರ :-

ಉಂಡನ್ನ ಏಳು ದಿನಕ್ಕೆ ರಸವಹುದು. ಆ ರಸವು ಏಳು ದಿನಕ್ಕೆ ರುಧಿರವು. ಆ ರುಧಿರವು ಏಳು ದಿನಕ್ಕೆ ಮಾಂಸವು. ಆ ಮಾಂಸವು ಏಳು ದಿನಕ್ಕೆ ಮೇದಸ್ಸು. ಆ ಮೇದಸ್ಸು ಏಳು ದಿನಕ್ಕೆ ಅಸ್ಥಿ. ಆ ಅಸ್ಥಿ ಏಳು ದಿನಕ್ಕೆ ಮಜ್ಜೆ. ಆ ಮಜ್ಜೆ ಏಳು ದಿನಕ್ಕೆ ಶುಕ್ಲವಹದು.

ಇಂತಿವರ **ತನುಚೇಷ್ಟೆ**ಗಳೆಂತೆಂದೊಡೆ:

**ರಸಕ್ಕೆ**– ಕಪಿಲ ವರ್ಣದ ಧಾತು ಪೃಥ್ವಿಅಂಶಿಕ ದೇಹವನ್ನು ಅಳುಕಿಸುವದು.

**ರುಧಿರಕ್ಕೆ**– ನೀಲವರ್ಣಧಾತು ಅಪ್ಪುವಿನಂಶಿಕ ಶರೀರವನ್ನು ನಡುಗಿಸುವದು.

**ಮಾಂಸಕ್ಕೆ** - ರಕ್ತವರ್ಣಧಾತು ಅಗ್ನಿಅಂಶಿಕ ಶರೀರವನ್ನು ಹಳವಳಿಸುವದು.

**ಮೇಧಸ್ಸಿಗೆ**– ಮಾಂಜಿಷ್ಟ ವರ್ಣ ಧಾತು ಮಾರುತನಂಶಿಕ ಶರೀರವನ್ನು ಬೆದರಿಸುವದು.

**ಅಸ್ಥಿಗೆ**– ಕೃಷ್ಣ ವರ್ಣಧಾತು ಆಕಾಶದಂಶಿಕ ಶರೀರಮುಂ ಎತ್ತರ ತತ್ತರ ಮಾಡುವದು.

**ಮಜ್ಜೆಗೆ** ತಾಮ್ರ ವರ್ಣಧಾತು ಸೂರ್ಯನಂಶಿಕ ಶರೀರವನ್ನು ಒತ್ತರಿಸಿ ಕಳವಳಿಸಿ ನುಡಿಸುತ್ತಿಹುದು.

**ಶುಕ್ಲಕ್ಕೆ**– ಶ್ವೇತವರ್ಣ ಚಂದ್ರನಂಶಿಕ ಶರೀರವನ್ನು ಕಂಪಿಸಿ ಕಳವಳಿಸುತಿಹುದು.

ಇಂತಿವು ಸಪ್ತ ಧಾತುಗಳ ಭೇದ.

## ಸಪ್ತ ವ್ಯಸನಗಳು

**ತನುವ್ಯಸನ ಮನವ್ಯಸನ ಧನವ್ಯಸನ ರಾಜ್ಯವ್ಯಸನ ವಿಶ್ವವ್ಯಸನ ಉತ್ಸಾಹವ್ಯಸನ ಸೇವಕವ್ಯಸನ - ಈ ಸಪ್ತವ್ಯಸನಗಳ ವಿವರ:-**

೧. **ತನುವ್ಯಸನವೆತ್ತಿದಲ್ಲಿ** ದೇಹ ಬಡವಾಯಿತೆನುತಿಹನು.

೨. **ಮನವ್ಯಸನವೆತ್ತಿದಲ್ಲಿ** ಹುಸಿ ಕಳವು ಪರದಾರಮಂ ಬಯಸುವನು.

೩. **ಧನವ್ಯಸನವೆತ್ತಿದಲ್ಲಿ** ಅರ್ಥಮಂ ಬಯಸುವನು.

೪. **ರಾಜವ್ಯಸನವೆತ್ತಿದಲ್ಲಿ** ವಾಹನ ವಸ್ತ್ರಾಭರಣ ಅನುಲೇಪ ತಾಂಬೂಲಗಳಂ ಬಯಸುವನು.

೫. **ವಿಶ್ವವ್ಯಸನವೆತ್ತಿದಲ್ಲಿ** ಗೃಹಕ್ಷೇತ್ರ ಸೀಮೆಯಂ ಬಯಸುವನು.

೬. **ಉತ್ಸಾಹವ್ಯಸನವೆತ್ತಿದಲ್ಲಿ** ಪುತ್ರಮಿತ್ರ ಕಳತ್ರಾದಿಗಳಂ ಬಯಸುವನು.

೭. **ಸೇವಕವ್ಯಸನವೆತ್ತಿದಲ್ಲಿ** ಹೋದಿಹೆ ಕೊಂಡಿಹೆ ಕೊಟ್ಟಿಹೆನೆನ್ನುವನು.

## ಷಡೂರ್ಮಿಗಳು

ಶ್ಲೋ|| ಬುಭುಕ್ಷಾಚ ಪಿಪಾಸಾಚ ಪ್ರಾಣಸ್ಯ ಮನಸಸ್ಸ್ಮೃತಾಃ |
ಶೋಕ ಮೋಹ ಶರೀರಸ್ಯ ಜನ್ಮಮುಖ್ಯ ಷಡೂರ್ಮಯಃ ||

ಎಂದು ಕ್ಷುತ್ತು ಪಿಪಾಸೆ ಶೋಕ ಮೋಹ ಜನನ ಮರಣ - ಈ ಆರು ಷಡೂರ್ಮಿಗಳು.

ಕ್ಷುತ್ ಪಿಪಾಸೆ ಎರಡು ಪ್ರಾಣಧರ್ಮ
ಶೋಕ ಮೋಹ ಎರಡು ಮನಧರ್ಮ
ಜನನ ಮರಣ ಎರಡು ದೇಹಧರ್ಮ

**ಕ್ಷುತ್**– ಅನ್ನ ಪಾನ ಅನುಭವಿಸಬೇಕೆಂಬ ಉದರಾಗ್ನಿ.

**ಪಿಪಾಸೆ**– ಪಾನ್ಯ ದ್ರವ್ಯಗಳನ್ನು ಕುಡಿಯಬೇಕೆಂಬ ನೀರಡಿಕೆ.

**ಶೋಕ**– ತನ್ನ ಇಷ್ಟ ವಸ್ತು ಅಗಲಿಹೋದಲ್ಲಿ ನೆನೆನೆನೆದು ದುಃಖಿಸುವುದೇ ಶೋಕವು.

**ಮೋಹ**– ಹೋದ ವಸ್ತು ಮರಳಿ ದೊರೆದಲ್ಲಿ ನೋಡಿ ಮಮಕರಿಸುವುದು ಮೋಹವು.

**ಜನನ**– ಸ್ಥೂಲ ದೇಹವು ಹುಟ್ಟಿ ಬರುವುದು ಜನನ.

**ಮರಣ**–ಆ ದೇಹವೇ ರುಜೆಗಳಿಂದ ಸಂಣಿಸಿ ನಾಶವಾಗುವುದೇ ಮರಣ.

## ಅರಿಷಡ್ವರ್ಗಗಳು

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ-ಇವು ಅರಿಷಡ್ ವರ್ಗಗಳು. ವಿವರ:–

**ಕಾಮ**– ಗುರುದಾರ ಪರದಾರ ಅಪೇಕ್ಷೆ ಕಾಮ.

**ಕ್ರೋಧ**– ಒಡಲೊಡವೆಯ ನಾಶಮಾಡಿ ಬಿಡುವದು ಕೋಪ.

**ಲೋಭ**– ಇಹ ಪರ ಸಿದ್ಧಿಯ ಕೆಡಿಸಿ ಭವಕ್ಕೆ ತರುವದು ಲೋಭ.

**ಮೋಹ**– ನಿತ್ಯಾನಿತ್ಯ ವಿವೇಕವ ಕೆಡಿಸಿ ಅನಿತ್ಯ ವಸ್ತುಗಳ ನಂಬುವದು ಮೋಹ.

**ಮದ**– ಅನೀತಿ ಮಾರ್ಗವೇ ಮದ.

**ಮತ್ಸರ**– ಪರಗುಣ ನಿರಾಕರಣೆಯೇ ಮತ್ಸರ.

## ಷಡ್ಭ್ರಮೆಗಳು

ಜಾತಿ ವರ್ಣ ಆಶ್ರಮ ಕುಲಗೋತ್ರ ನಾಮಂಗಳು ಇವು ಷಡ್ ಭ್ರಮೆಗಳು.

ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರ ಈ ನಾಲ್ಕು ಜಾತಿ ಭ್ರಮೆ.
ಹದಿನೆಂಟು ವರ್ಣಗಳಲ್ಲಿ ತಾವೇ ಶ್ರೇಷ್ಠರೆಂಬುದು ವರ್ಣಭ್ರಮೆ.
ಗ್ರಹಸ್ಥ ವಾನಪ್ರಸ್ಥ ಕುಟೀಚಕ ಸನ್ಯಾಸ ಇವು ಆಶ್ರಮ ಭ್ರಮೆ.
ಕನ್ನಡಿಗ ವಾಣಿಜ ಕಮ್ಮೆ ತಿಗಳ ಈ ನಾಲ್ಕು ಕುಲ ಭ್ರಮೆ.
ಕಶ್ಯಪ ಭಾರದ್ವಾಜ ಮುಂತಾದ ಗೋತ್ರಗಳ ಭ್ರಮೆಯೇ ಗೋತ್ರಭ್ರಮೆ.

ನಾರಾಯಣ ಬ್ರಹ್ಮ ಮೊದಲಾದವು ನಾಮಭ್ರಮೆ.

ಈ ಭ್ರಾಂತಿ ಗುಣಗಳ ಹಸಿಗೆಯನ್ನು ತತ್ತ್ವಜ್ಞಾನಿಗಳು ತಿಳಿಯುವದು.

## ಷಡ್ಭಾವ ವಿಕಾರಗಳು

ಅಸ್ತಿತೆ ಜಾಯತೆ ವಿಪರಿಣತೆ ವಿವರ್ಧತೆ ಅಪಕ್ಷತೆ ವಿನಶ್ಯತೆ - ಇವು ಷಡ್ಭಾವ ವಿಕಾರಗಳು.

**ಅಸ್ತಿತೆ**– ಗರ್ಭ ಉಂಟಿನಿಸುವದು.
**ಜಾಯತೆ**– ತಾಯಿಯ ಜಠರದಿಂದ ಪೊರಮಡುವದು.
**ವಿಪರಿಣತೆ**–ತಂದೆ ತಾಯಿಗಳು ಮುದ್ದಿಡುವ ಸುಖ ಅನುಭವಿಸುವದು.
**ವಿವರ್ಧತೆ**– ಬೆಳೆಯುವದು.
**ಅಪಕ್ಷತೆ**– ಮುಪ್ಪಿನಿಂದ ಕುಸಿಯುವದು.
**ವಿನಶ್ಯತೆ**– ಕೆಡುವದು.

## ಪಂಚ ಕೋಶಗಳು

**ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಆನಂದಮಯ** - ಇವು ಪಂಚಕೋಶಗಳು.

### ವಿವರ :

ಸ್ಥೂಲ ದೇಹವೇ **ಅನ್ನಮಯಕೋಶ.** ಅದರೊಳಗೆ ಜ್ಞಾನ ಕರ್ಮೇಂದ್ರಿಯ ವ್ಯಾಪಾರವೇ **ಪ್ರಾಣಮಯಕೋಶ.** ಅದರೊಳಗಣ ಚಿತ್ತ-ಬುದ್ಧಿ ಅಹಂಕಾರಗಳ ವ್ಯಾಪಾರವೇ **ಮನೋಮಯಕೋಶ.** ಅದರೊಳಗಣ ಬುದ್ಧಿಶಕ್ತಿಯೇ **ವಿಜ್ಞಾನಮಯಕೋಶ.** ಆ ಬುದ್ಧಿ ವೃತ್ತಿಯಳಿದು ಬಾಹ್ಯವೇನೂ ತೋರದೆ ಆತ್ಮಸುಖವೆಗ್ಗಳಿಸಲು **ಆನಂದಮಯಕೋಶ.** ಇನ್ನು

## ಪಂಚ ಕ್ಲೇಶಗಳು

**ಮಾಯಾ ಸಂಬಂಧವಾದ ಹೊನ್ನು, ಹೆಣ್ಣು, ಮಣ್ಣು, ಪುತ್ರ ಮಿತ್ರ ಕಳತ್ರಾದಿ ಸಂಸಾರಗಳು ಹುಟ್ಟುವದಕ್ಕೆ ಪಂಚ ಕ್ಲೇಶವೇ ಮೂಲ. ಅವಾವುವೆಂದೊಡೆ–ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ. ಇವುಗಳ ವಿವರ :**

**ಅವಿದ್ಯೆ** - ನಿಜದೊಳ್ ಮೋಸಮಾಡುವದು.
**ಅಸ್ಮಿತೆ** - ದೇಹಾತ್ಮ ಅಧ್ಯಾಸವೇ ಅಸ್ಮಿತೆ.
**ರಾಗ** - ವಿಷಯ ರತಿಯೆ ರಾಗ
**ದ್ವೇಷ** - ವಿಷಯರತಿ ಕೆಡಲು ಹುಟ್ಟುವ ಕೋಪವೇ ದ್ವೇಷ.
**ಅಭಿನಿವೇಶ** - ಕೂಡಿದ ವಿಷಯಗಳನ್ನು ಬಿಡದಿಹುದು.

## ಅಂಗ ಚತುಷ್ಟಯಗಳು

ಇನ್ನು ಅಂಗ, ಪ್ರತ್ಯಂಗ, ಸಾಂಗಾಂಗ, ಉಪಾಂಗ-ಇಂತಿವು ಅಂಗ ಚತುಷ್ಟಯ. ಇವಕ್ಕೆ ವಿವರ:-

ಆತ್ಮನು ಹುಟ್ಟುವಲ್ಲಿ ಬೆಳೆವಲ್ಲಿ ಆಯುವಾದ ಅಂಗಗಳೆಂದರೆ ಶಿರಸ್ಸು ಉರದ್ವಯು, ಭುಜದ್ವಯ ಇವು ಅಂಗಗಳು. ವದನ, ಅನ: ನಾಶಿಕ, ಕರ್ಣ, ಕಂಗಳು, ಅಂಗಲಿಗಳು - ಇವು ಪ್ರತ್ಯಂಗಗಳು. ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಕರಣಗಳು ಸಾಂಗಾಂಗಗಳು. ಆತ್ಮನೊಡನೆ ಹುಟ್ಟಿ ಆತ್ಮನೊಡನೆ ಹೋಗುತ್ತಿಹವು ಉಪಾಂಗಗಳು ಇವು ಅಂಗ ಚತುಷ್ಟಯಗಳು. ಇನ್ನು

## ಗುಣತ್ರಯಗಳು

**ಸತ್ವ, ರಜ, ತಮ** – ಇವು ಗುಣತ್ರಯಗಳು. ಇವಕ್ಕೆ ವಿವರ ಸತ್ವಕೆ ಶ್ವೇತವರ್ಣ, ರಜಕ್ಕೆ ರಕ್ತ ವರ್ಣ, ತಾಮಸಕ್ಕೆ ಕಪ್ಪು ವರ್ಣ.

ಶ್ಲೋ॥ ಸತ್ಯಂ ಜ್ಞಾನಂ ತಪೋಮೌನಂ ತೋಷಶ್ಯಾಂತಿರ್ವಿವೇಕತಾ ।
ಉತ್ಸಾಹೋ ನಿಶ್ಚಯಂ ಧೈರ್ಯಂ ಸಾತ್ವಿಕಸ್ಯಚಲಕ್ಷಣಾಂ ॥

ಸತ್ಯ, ಜ್ಞಾನ, ತಪ, ಮೌನ, ಹರುಷ, ಶಾಂತಿ, ವಿವೇಕ ಉತ್ಸಾಹ, ಸಿಶ್ಚಯ, ಧೈರ್ಯ - ಈ ಹತ್ತು **ಸಾತ್ವಿಕ ಗುಣಗಳು.**

ಶ್ಲೋ॥ ಗರ್ವ ಕ್ರೋಧೋತ್ಯಹಂಕಾರೋ ಸ್ತ್ರೀಸಂಗ ಪ್ರಳಾಪನಂ ।
ಅಕ್ರಮ್ಯ ಡಂಭಮಾತ್ಸರ್ಯೋ ರಾಜಸಸ್ಯಚಲಕ್ಷಣಾಂ ॥

ಗರ್ವ, ಕ್ರೋಧ, ಅಹಂಕಾರ, ವಿಷಯ, ವಾದ, ಅಕ್ರಮ್ಯತೆ, ಡಾಂಭಿಕತೆ, ಮತ್ಸರ - ಇವು ಎಂಟು **ರಾಜಸ ಗುಣಗಳು.**

ಶ್ಲೋ॥ ಅಜ್ಞಾನಂ ಮೋಹ ನಿದ್ರಾಚ ಚಾಪಲ್ಯಂ ಬುದ್ಧಿಹೀನತಾ ।
ಪಾಪಿಷ್ಠ ಪರಬಾಧತ್ವಂ ತಾಮಸಸ್ಯಚಲಕ್ಷಣಂ ॥

ಅಜ್ಞಾನ, ಮೋಹ, ನಿದ್ರಾ, ಚಾಪಲ್ಯ, ಹೀನ ವೃತ್ತಿ, ಪರನಿಂದೆ, ಹಿಂಸೆ, ಪಾಪಿಷ್ಠತ್ವ - ಇವು ಎಂಟು **ತಾಮಸ ಗುಣಗಳು.**

## ಅಹಂಕಾರತ್ರಯಗಳು

ಅಹಂಕಾರವು ಸಾತ್ವಿಕ, ರಾಜಸ, ತಾಮಸ, ಎಂದು ಮೂರು ವಿಧ. ಇವಕ್ಕೆ ವಿವರ :

**ಸಾತ್ವಿಕಾಹಂಕಾರ** ದಿಂದ ಸೂರ್ಯಾದಿ ದೇವತೆಗಳೂ,
**ರಾಜಸಾಹಂಕಾರ** ದಿಂದ ಪಂಚ ವಿಷಯಗಳೂ,
**ತಾಮಸಾಹಂಕಾರ** ದಿಂದ ಪೃಥಿವ್ಯಾದಿ ಪಂಚಭೂತಗಳೂ ಹುಟ್ಟಿದವು.
ಇಂತಿವು ಅಹಂಕಾರತ್ರಯಗಳು.

## ತ್ರಿದೋಷಗಳು

ಇನ್ನು ವಾತ ಪಿತ್ತ ಶ್ಲೇಷ್ಮ - ಇವು ತ್ರಿದೋಷಗಳು. ವ್ಯಾಧಿರೂಪ ಮಾದ ತ್ರಿದೋಷಂಗಳು ಕೂಡಿ ಒಂದು ಶರೀರಾಕೃತಿಯಾಗಿಹುದು. ಈ ತ್ರಿದೋಷಂಗಳು ಕಾಲತ್ರಯದಲ್ಲಿ ಪೀಡಿಸುತ್ತಿಹವು.

**ವಾತ** ರೋಗಿಯು ಮೂಢನಾಗುವನು.
**ಪಿತ್ತ** ರೋಗಿಯು ಕೋಪಿಯಾಗುವನು.
**ಶ್ಲೇಷ್ಮ** ರೋಗಿಯು ಶಾಂತನಾಗುವನು.

**ಈ ವಾತ ಪಿತ್ಥ** ಕಫರೋಗಗಳು ಕ್ರಮವಾಗಿ ಮುಪ್ಪು ಯೌವನ ಬಾಲ್ಯಗಳಲ್ಲಿ ಪೀಡಿಸುವವು.

## ದೇಹ ದೇಹಿಕಂಗಳುತ್ಪತ್ತಿ

ಶರೀರಾತ್ಮರುಗಳ ಜನನವು. ಪಂಚ ಭೂತ ಪಂಪಪ್ರಾಣ ಪಂಚ ಜ್ಞಾನೇಂದ್ರಿಯ ಪಂಚಕರ್ಮೇಂದ್ರಿಯ ನಾಲ್ಕು ಕರಣ ಈ ೨೪ ತತ್ತ್ವಗಳಿಂದ ಆದದ್ದು ಈ ವಿಧ ಜಡದೇಹವು ಅನಾತ್ಮ. ೨೫ನೆಯ ತತ್ತ್ವವಾದ ಆತ್ಮನು ತಾನೇ ದೇಹಿ ; ಜಡ ದೇಹಕ್ಕೆ ಚೈತನ್ಯಾತ್ಮಕನು. ಈ ಚೇತನಾತ್ಮನಿಗೆ ಜ್ಞಾನೇಂದ್ರಿಯವೇ ಚಿತ್–ಸ್ವರೂಪು ಆಗಿಪ್ಪುವೆಂಬಲ್ಲಿ ಇದು ಸುಖ, ಇದು ದುಃಖ, ಇದು ಒಳಿತು, ಇದು ಕೆಡಕು, ಇದು ಪುಣ್ಯ, ಇದು ಪಾಪ, ಎಂಬ ಅರಿವುಂಟಾಗುವದು. ಸಕಲ ಪ್ರಾಣಿಗಳ ಅಂತರಂಗದಲ್ಲಿಯೂ ಪರಶಿವನಧಿದೇವತೆಯಾಗಿ ಬೆಳಗುತಿಹನು.

## ಪಂಚಾಗ್ನಿಗಳ ಉತ್ಪತ್ತಿ

ಇನ್ನು ಉದರಾಗ್ನಿ, ಮಂದಾಗ್ನಿ, ಕಾಮಾಗ್ನಿ, ಶೋಕಾಗ್ನಿ, ಬಡಬಾಗ್ನಿ – ಇವು ಪಂಚಾಗ್ನಿಗಳು.

ಇವಕ್ಕೆ ವಿವರ :

ಉಂಡ ಅನ್ನ ಪಾನಾದಿಗಳನ್ನು ಜೀರ್ಣಿಸುವದೇ **ಉದರಾಗ್ನಿ**.
ಶರೀರಕ್ಕೆ ಶೈತ್ಯವಾವರಿಸಿ ಹಸಿವು ತೃಷೆ ಕಡಿಮೆಯಾದುದೇ **ಮಂದಾಗ್ನಿ**.
ವಿಷಯ ವಿಕಾರದ ವಿನಹ ಸಂತಾಪವೇ **ಕಾಮಾಗ್ನಿ**.
ದುಃಖಾಗ್ನಿಯಲ್ಲಿ ಜೀವನ ತಾಪವೇ **ಶೋಕಾಗ್ನಿ**.
ಜ್ವರಾದಿ ತಾಪವೇ **ಬಡಬಾಗ್ನಿ**.
ಇವು ತಾವೇ ಪಂಚಾಗ್ನಿಗಳ ಭೇದವು. ಇನ್ನು

## ಸತ್–ಚಿತ್–ಆನಂದ

**ಸತ್ತೆಂದರೆ** ಶಕ್ತಿ; **ಚಿತ್ತೆಂದರೆ** ಶಿವನು; ಈ ಎರಡರ ಸಂಗವೇ **ಆನಂದವು**. ಸತ್ತೇ ಭಕ್ತಿಯು, ಚಿತ್ತೇ ಜ್ಞಾನವು, ಈ ಎರಡರ ಸಂಗವೇ

ಮುಕ್ತಿಯು. ಸತ್ತೇ ಬಿಂದು ರೂಪು, ಚಿತ್ತೇ ನಾದರೂಪು, ಆನಂದವೇ ಕಳಾ ರೂಪು. ಸತ್ತು ಸ್ಥೂಲ, ಚಿತ್ತು ಸೂಕ್ಷ್ಮ, ಆನಂದವು ಕಾರಣವಾಗಿ ಹವು. ಈ ಆನಂದವು ಉತ್ತರ ಮಾರ್ಗದಲ್ಲಿ ಆನಂದರೂಪವಾಗಿಹುದು. ಸ್ಥೂಲಮಾರ್ಗದಲ್ಲಿ ಸೃಷ್ಟಿ ರೂಪವಾಗಿಹುದು. ಇನ್ನು

## ಸದ್ಭಾವತ್ರಯ

ಪ್ರಕಾಶನ, ಪ್ರವರ್ತನ, ಮೋಹನ, ಇಂತಿವು ಸದ್ಭಾವತ್ರಯಗಳು.
ಅರಿವು ಮರವೆಗಳಿಲ್ಲದೆ ಸದಾ ಬೆಳಗುವ ಸುಜ್ಞಾನ ಪ್ರಕಾಶವೇ **ಪ್ರಕಾಶನ.**

ಸತ್ಯ ಸದಾಚಾರ ಸನ್ಮಾರ್ಗವಿಡಿದು ನಡೆವುದೇ **ಪ್ರವರ್ತನ.**
ನಿರಿಚ್ಛೆಯಿಂದ ಪರಮಾತ್ಮನಲ್ಲಿ ಮೋಹಪಿಡಿವುದೇ **ಮೋಹನ**.

## ದುರ್ಭಾವತ್ರಯಗಳು

ಸದ್ಭಾವತ್ರಯಂಗಳೆಲ್ಲವನು ವಿಕರಿಸಿ ಕೆಟ್ಟ ಅಜ್ಞಾನಕ್ಕೊಳಗಾದುದೇ **ಜ್ಞಾನವಿಕೃತಿಭಾವ**.

ಸದಾಚಾರ ಸನ್ಮಾರ್ಗಗಳು ವಿಕರಿಸಿ ಕೆಟ್ಟ ದುರಾಚಾರ ದುರ್ಮಾರ್ಗ ದುರ್ವರ್ತನೆಗೊಳಗಾದುದೇ **ವರ್ತನವಿಕೃತಿಭಾವ.**

ತಮ್ಮ ಕುಲಗುರು ಇಷ್ಟ ದೈವದ ಮೇಲಣ ಮಮಕರವೆಲ್ಲ ವಿಕರಿಸಿ, ಕೆಟ್ಟು ದುರ್ಮಾರ್ಗದೊಳಗಾದುದೇ **ಮೋಹನ ವಿಕೃತಿಭಾವ**.
ಇವೇ ದುರ್ಭಾವತ್ರಯಂಗಳು.

## ತ್ರಿಕರಣಗಳು

ಮಾನಸ ವಾಚಕ ಕಾಯಕ ಇವು ತ್ರಿಕರಣಗಳು.
**ಮಾನಸ**ವೆಂದಡೆ ಮನದಲ್ಲಿ ನೆನೆವುದು.
**ವಾಚಕ**ವೆಂದಡೆ ನುಡಿವುದು.
**ಕಾಯಕ**ವೆಂದಡೆ ಕೈ ಮುಟ್ಟಿ ಮಾಡುವದು.
ಇವು ತ್ರಿಕರಣಗಳು.

**ಈ** ತ್ರಿಕರಣಂಗಳು ಪರಶಿವನಿಂದುಂಟಾದ ಇಚ್ಛಾ ಜ್ಞಾನ ಕ್ರಿಯಾ ಶಕ್ತಿಗಳೇ ಲೋಕದ ಸಕಲಾತ್ಮರುಗಳಲ್ಲಿ ಮಾನಸ ವಾಚಕ ಕಾಯಕ ವೆಂಬ ತ್ರಿಕರಣಂಗಳಾಗಿರುವವು.

## ಷಟ್ಚಕ್ರಗಳು

ಇವು ಒಟ್ಟು ಒಂಭತ್ತು ಇವೆ. ಮಿದುಳಿನಲ್ಲಿ ಮೂರು. ಉಳಿದ ಶರೀರ ಭಾಗದಲ್ಲಿ ಆರು.

ಗುದದಲ್ಲಿ **ಆಧಾರ ಚಕ್ರ**, ಗುಹ್ಯದಲ್ಲಿ **ಸ್ವಾಧಿಷ್ಠಾನ ಚಕ್ರ**, ನಾಭಿಯಲ್ಲಿ **ಮಣಿಪೂರಕ ಚಕ್ರ**, ಹೃದಯದಲ್ಲಿ **ಅನಾಹತ ಚಕ್ರ**, ಕಂಠದಲ್ಲಿ **ವಿಶುದ್ಧಿ ಚಕ್ರ**, ಹಣೆಯಲ್ಲಿ **ಆಜ್ಞಾ ಚಕ್ರ**, ನೆತ್ತಿಯಲ್ಲಿ **ಬ್ರಹ್ಮ ಚಕ್ರ**, ಮಸ್ತಕಾಗ್ರದಲ್ಲಿ **ಶಿಖಾ ಚಕ್ರ**, ತಲೆಯ ಹಿಂಭಾಗದಲ್ಲಿ **ಪಶ್ಚಿಮ ಚಕ್ರ**.

## ದಳಗಳು ಮತ್ತು ಅಕ್ಷರಗಳು

ಈ ಚಕ್ರಗಳಿಗೆ ಅನುಕ್ರಮವಾಗಿ ದಳಗಳು ೪, ೬, ೧೦, ೧೨, ೧೬, ೨. ಈ ಚಕ್ರಗಳಿಗೆ ಅನುಕ್ರಮವಾಗಿ ಅಕ್ಷರಗಳು - ವಶಷಸ, ಬಭ ಯರಲ, ಡಢಣ ತಥದಧನ ಪಫ, ಕಖಗಘಙ ಚಛಜಝಞ ಟಠ, ಅಕಾರದಿಂದ ವಿಸರ್ಗದವರೆಗೆ (೧೬), ಹಂ ಕ್ಷಂ.

ಬ್ರಹ್ಮ ಚಕ್ರ ೧೦೦೦ ದಳ, ಶಿಖಾಚಕ್ರ ೩ ದಳ, ಪಶ್ಚಿಮ ಚಕ್ರ ೧ ದಳ.

## ವರ್ಣಗಳು

**ಈ** ನವ ಚಕ್ರಗಳಿಗೆ ಅನುಕ್ರಮವಾಗಿ ವರ್ಣಗಳು–

ನ-ಮ-ಶಿ-ವ-ಯ-ಓಂ, ಬಕಾರ, ಕ್ಷಕಾರ, ಹಕಾರಗಳೇ ವರ್ಣಗಳು.

**ಈ** ನವ ಚಕ್ರಗಳಲ್ಲಿರುವ **ಲಿಂಗಗಳು**–

ಅನುಕ್ರಮವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಷ್ಕಲಲಿಂಗ, ನಿಶ್ಶೂನ್ಯಲಿಂಗ, ನಿರಂಜನಲಿಂಗ.

ನವಚಕ್ರಗಳ ವರ್ಣಗಳು ಅನುಕ್ರಮವಾಗಿ ಪೀತ, ಶ್ವೇತ, ಹರಿತ, ಮಾಂಜಿಷ್ಟ, ಕಪೋತ, ಮಾಣಿಕ್ಯ, ಜ್ಯೋತಿರ್ವರ್ಣ, ಮಹಾಜ್ಯೋತಿ ರ್ವರ್ಣ, ಅಗಣಿತ ಮಹಾಜ್ಯೋತಿರ್ವರ್ಣ.

## ನವ ಚಕ್ರಗಳ ಅಧಿದೇವತೆಗಳು

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಮಹೇಶ್ವರ, ಪರ ಮೇಶ್ವರ, ಸರ್ವೇಶ್ವರ.

## ನವ ಚಕ್ರಗಳ ಆಕೃತಿಗಳು

ಕ್ರಮವಾಗಿ ತಾರಕಾಕೃತಿ, ದಂಡಕಾಕೃತಿ, ಕುಂಡಲಾಕೃತಿ, ಅರ್ಧಚಂದ್ರಾಕೃತಿ, ದರ್ಪಣಾಕೃತಿ, ಜ್ಯೋತಿರಾಕೃತಿ, ನಿಷ್ಕಳಾಕೃತಿ, ನಿಶ್ಶೂನ್ಯಾಕೃತಿ. ನಿರಂಜನಾಕೃತಿ.

## ನವ ಚಕ್ರಗಳ ಕಲೆಗಳು

ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯಾತೀತ, ಶಾಂತ್ಯಾ ತೀತೋತ್ತರ. ಕಡೆಯ ಮೂರು ಅನಾದಿ, ನಿರ್ಮಾಯ, ಅನಿರ್ವಾಚ್ಯ.

## ನವ ಚಕ್ರಗಳ ಸಾದಾಖ್ಯಗಳು

ಕ್ರಮವಾಗಿ ಕರ್ತೃ ಮೂರ್ತಿ, ಅಮೂರ್ತಿ, ಶಿವ, ಮತ್ತು ಮಹಾ ಸಾದಾಖ್ಯ. ಕಡೆಯ ಮೂರು ಅಗಮ್ಯ ಅಗೋಚರ ಅಪ್ರಮಾಣ ಸಾದಾ ಖ್ಯಗಳು.

ಶಿವಯೋಗಾಭ್ಯಾಸಿಗಳು ಈ ಚಕ್ರಗಳ ಜ್ಞಾನ ಮಾಡಿಕೊಳ್ಳು ವದು. ಇನ್ನು

## ಮನತ್ರಯಗಳು

ಮನ, ಮನನ, ಮನನೀಯ—ಇವು ಮೂರು ಮನತ್ರಯಗಳು.

ಮನ ಮನನ ಮನನೀಯವೆಂದರೂ ತತ್ತ್ವದ ತ್ವಂಪದ ಅಸಿಪದ ವೆಂದೂ ತಾನು, ತನ್ನರಿವು, ಶಿವತತ್ತ್ವವೆಂದರೂ, ಜ್ಞಾತೃ ಜ್ಞಾನ ಜ್ಞೇಯ ವೆಂದರೂ ಒಂದೇ ನಾಮಪರ್ಯಾಯವಾಗಿರುವವು.

## ತಾಪತ್ರಯಗಳು

ಇನ್ನು ಅಧ್ಯಾತ್ಮಿಕ, ಆದಿಭೌತಿಕ, ಆದಿದೈವಿಕ - ಇಂತಿವು ತಾಪತ್ರಯಗಳು

ಇವು ಇಹಲೋಕ ತಾಪತ್ರಯಗಳು. ಇವಕ್ಕೆ ವಿವರ-

ಅಧ್ಯಾತ್ಮಿಕದಲ್ಲಿ ಶರೀರ ಮಾನಸವೆಂದು ಎರಡು ಪ್ರಕಾರಗಳು. ಅಲ್ಲಿ ಜ್ವರ, ಗುಲ್ಮ, ಶೂಲೆ, ತ್ರಿದೋಷ, ನವಗ್ರಹ, ಗೋವು, ಪಕ್ಷಿರಾಜ, ಪರರಿಂದಾದ ದುಃಖಮುಂ ಶರೀರವೆಂಬುದು. ಅಸೂಯೆ, ಮದ, ಮತ್ಸರ ಚಿಂತೆಗಳಿಂದಾದ ದುಃಖವು ಮಾನಸವೆಂಬುದು. ಈ ಎರಡು ಅಧ್ಯಾತ್ಮಿಕವೆಂಬುದು.

ಶೀತ, ಉಷ್ಣ, ವಾಯು, ಸಿಡಿಲು, ಮಿಂಚುಗಳಿಂದಾದ, ದುಃಖವು ಆದಿಭೌತಿಕವೆಂಬುದು.

ಜನನ ಮರಣ ನೆರೆತರೆ ಹಸಿವು ತೃಷೆ ಅಜ್ಞಾನ ಇಂಥವುಗಳಿಂದಾದ ದುಃಖವು ಆದಿದೈವಿಕವೆಂಬುದು.

ಇಂತಿವು ತಾಪತ್ರಯಂಗಳ ಭೇದ.

ಇನ್ನು ಕ್ಷಯ ಅತಿಕ್ಷಯ ಸಾಹಸ ಪತನ-ಇಂತಿವು ಸ್ವರ್ಗಲೋಕದ ತಾಪತ್ರಯಂಗಳು. ಇವಕ್ಕೆ ವಿವರ:

ಕ್ಷಯವೆಂದೊಡೆ ಸುಕೃತ ತೀರುವುದು. ಅತಿಶಯವೆಂದೊಡೆ ತನ್ನಿಂದ ಬಲ್ಲಿದರುಂಟೆ ಎಂಬುದು. ಸಾಹಸ ಪತನವೆಂದೊಡೆ ಕೆಳಕ್ಕೆ ನೂಕುವುದು.

ಇಂತಿವು ಸ್ವರ್ಗಲೋಕದ ತಾಪತ್ರಯಂಗಳು

## ತನುತ್ರಯಗಳು

ಇನ್ನು ಸ್ಥೂಲತನು, ಸೂಕ್ಷ್ಮತನು, ಕಾರಣತನು, ಇಂತಿವು ತನುತ್ರಯಂಗಳು. ಇವಕ್ಕೆ ವಿವರ–

ಪಂಚಭೌತಿಕದಿಂದಾದುದೇ **ಸ್ಥೂಲತನು.**
ವಾಯುಪಂಚಕ ಇಂದ್ರಿಯ ದಶಕ ಮನ ಬುದ್ಧಿಗಳೆಂದು ಇಂತಿವು
ಹದಿನೇಳು ಕೂಡಿ ಸಪ್ತದಶಕ ಲಿಂಗಭೌತಿಕವು **ಸೂಕ್ಷ್ಮತನು.**
ಅಹಂಕಾರ ಚಿತ್ತ ಆತ್ಮಸಂಯೋಗದಿಂದಾದುದೆ **ಕಾರಣತನು.**

ಇನ್ನೊಂದು ಪ್ರಕಾರದಿಂದ ಪೇಳಲ್ಪಡಗುಂ—ಪೃಥ್ವಿ ಅಪ್ಪುಗಳೆರಡು ಸ್ಥೂಲತನು. ಅಗ್ನಿ ವಾಯುಗಳೆರಡು ಸೂಕ್ಷ್ಮತನು. ಆಕಾಶ ಹಮ್ಮುಗಳೆರಡು ಕಾರಣತನು. ಪೃಥ್ವಿ ಅಪ್ಪುಗಳೆರಡು ಸ್ಥೂಲ ದೇಹ, ಅಗ್ನಿ ವಾಯು ಆಕಾಶ ಇವು ಮೂರು ಜೀವನ.

## ಜೀವತ್ರಯಗಳು

ಇನ್ನು ವಿಶ್ವ ತೈಜಸ ಪ್ರಾಜ್ಞ-ಇಂತಿವು ಜೀವತ್ರಯಗಳು. ಇವಕ್ಕೆ ವಿವರ :-

ಅಲ್ಲಿ ಜೀವನು ವಿಶ್ವವಾಪ್ತಿಯನೈದಲು **ವಿಶ್ವನು.**
ಅಲ್ಲಿ ಜೀವನು ತೈಜಸ ಸಂಬಂಧದಿಂ ಪರಿಯೆ **ತೈಜಸನು.**
ಅಲ್ಲಿ ಜೀವನು ಲೇಸಾಗಿ ಕತ್ತಲೆಯೊಳಗಿರ್ದನಾಗಿ **ಪ್ರಾಜ್ಞನು.**
ಇಂತಿವು ಜೀವತ್ರಯಂಗಳ **ಭೇದ.**

## ಆತ್ಮತ್ರಯಗಳು

ಇನ್ನು ಜೀವಾತ್ಮ ಅಂತರಾತ್ಮ ಪರಮಾತ್ಮ-ಇಂತಿವು ಆತ್ಮತ್ರಯಂಗಳು. ಇವಕ್ಕೆ ವಿವರ :-

ಅಲ್ಲಿ ಆತ್ಮನು ಸಂಸಾರವ್ಯಾಪ್ತಿಯಂತಹ ಜೀವನ ಬೆರಸಲಾಗಿ **ಜೀವಾತ್ಮನು.**

ಅಲ್ಲಿ ಆತ್ಮನು ಸಂಸಾರ ಹೊದ್ದಿಯೂ ಹೊದ್ದದಿಹನಾಗಿರಲು **ಅಂತರಾತ್ಮನು.**

ಅಲ್ಲಿ ಆತ್ಮನು ಸಂಸಾರಮಂ ಬಿಟ್ಟು ನಿಃಕಲನಾಗಿರಲು **ಪರಮಾತ್ಮನು.**
ಇಂತಿವು ಆತ್ಮತ್ರಯಂಗಳ ಭೇದ.

## ಅವಸ್ಥಾತ್ರಯಗಳು

ಇನ್ನು ಜಾಗ್ರತ ಸ್ವಪ್ನ ಸುಷುಪ್ತಿ ಇಂತವು ಅವಸ್ಥಾತ್ರಯಂಗಳು. ಇವಕ್ಕೆ ವಿವರ :-

ಅಲ್ಲಿ ಎಚ್ಚತ್ತಿಹುದೇ **ಜಾಗ್ರತ**.
ಅಲ್ಲಿ ಕನಸು ಕಾಂಬುದೇ **ಸ್ವಪ್ನ**.
ಅಲ್ಲಿ ಪ್ರೈಮರದಿಹುದೆ **ಸುಷುಪ್ತಿ**.
ಇಂತಿವು ಅವಸ್ಥಾತ್ರಯಂಗಳ ಭೇದ

## ಕರಣ ಹಸಿಗೆ ಮತ್ತು ಲಿಂಗಾಂಗ ಸಾಮರಸ್ಯ

ಈ ವರೆಗೆ ಹೇಳಿದ ದೇಹವೂ, ಜೀವವೂ, ಜಗತ್ತೂ, ಹಾಗೆಯೇ ಜಗತ್ತಿನಲ್ಲಿರುವ ಶಕ್ತಿಗಳೂ ಪರಮಾತ್ಮರಲ್ಲ. ಆದರೆ ತನ್ನನ್ನು ತಾನರಿದರೆ ತಾನೇ ಪರಮಾತ್ಮನು. ಅದೇ ಲಿಂಗೈಕ್ಯ ಸ್ಥಿತಿಯೆನಿಸಿಕೊಳ್ಳುವದು. ಇದಕ್ಕೋಸ್ಕರ ಮನುಷ್ಯನು ವ್ಯಸನಾದಿಗಳನ್ನೂ ಇಂದ್ರಿಯ ವಿಕಾರ ಗಳನ್ನೂ, ಜೀವ ಭಾವವನ್ನೂ ತೊರೆಯಬೇಕು ಮತ್ತು ಪರಮಾತ್ಮನನ್ನು ಮೊರೆ ಹೋಗಬೇಕು. ಅಂದರೆ ಲಿಂಗಾಂಗಸಾಮರಸ್ಯ ಸ್ಥಿತಿಯು ದೊರೆ ಯುವದು. ಇದರಲ್ಲಿಹ ಕರಣ ಹಸಿಗೆಯ ಜ್ಞಾನವು ಅತ್ಯಾವಶ್ಯಕವೆಂದು ಶರಣರ ಸಂದೇಶವಿದೆ.

ತತ್ತ್ವಜ್ಞಾನಿಗಳು ಈ ಕರಣ ಹಸಿಗೆಯನ್ನು ಮರೆಯದೆ ನಿರಂತರ ಪಠಿಸತಕ್ಕದ್ದು.

ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ **ಕರಣ ಹಸಿಗೆಯು** ಸಮಾಪ್ತಂ. ಮಂಗಳ ಮಹಾ ಶ್ರೀ ಶ್ರೀ.

*

ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ

# ಮಿಶ್ರಾರ್ಪಣವು

ಷಟ್‌ಸ್ಥಲ ಬ್ರಹ್ಮವನೊಡಗೂಡುವೆನೆಂದೊಡೆ ಅದು ಆರಿಗೂ ನಿಲುಕದಯ್ಯ. ಅರ್ಪಿತ ಅನರ್ಪಿತವೆಂದು ಒಪ್ಪಕ್ಕೆ ನುಡಿಯಬಹುದಲ್ಲದೆ ಅರ್ಪಣದೊಳಗಿನ ಅರ್ಪಣದ ಭೇದವನರಿದು ಸೊಪ್ಪಡಗಿದ ನಿಷ್ಪತ್ತಿ ನಿಜಲಿಂಗೈಕ್ಯನಿರವು ಅದು ಹೇಗೆಂದೊಡೆ–

## ಕಾಯಾರ್ಪಣ

ಕಾಯದ ಕ್ಕೈಂಯ ಮುಟ್ಟಿ, ಕ್ರಿಯಾರ್ಪಣವ ಮಾಡುವಾಗ, ಭೋಜ್ಯವಾಚಾರಲಿಂಗದಲ್ಲಿ, ಪಾನ್ಯ ಗುರುಲಿಂಗದಲ್ಲಿ, ಭಕ್ಷ ಶಿವಲಿಂಗದಲ್ಲಿ, ಚೋಹ್ಯ ಜಂಗಮ ಲಿಂಗದಲ್ಲಿ, ಲೇಹ್ಯ ಪ್ರಸಾದಲಿಂಗದಲ್ಲಿ, ಇವು ಎಲ್ಲರಲ್ಲಿಯು ಅರಿವು ಮಹಾಲಿಂಗದಲ್ಲಿ – ಇಂತೀ ಷಡ್ವಿಧ ಕಾಯಾರ್ಪಣವಾದಲ್ಲಿ ಮುಂದೆ ಕರಣಾರ್ಪಣದ ಭೇದಮಂ ಪೇಳ್ವೆ.

## ಕರಣಾರ್ಪಣ

ನಾಸಿಕದಲ್ಲಿ ಆಚಾರಲಿಂಗ, ಜಿಹ್ವೆಯಲ್ಲಿ ಗುರುಲಿಂಗ, ನೇತ್ರದಲ್ಲಿ ಶಿವಲಿಂಗ, ತ್ವಕ್ಕಿನಲ್ಲಿ ಜಂಗಮಲಿಂಗ, ಶ್ರೋತ್ರದಲ್ಲಿ ಪ್ರಸಾದಲಿಂಗ, ಹೃದಯದಲ್ಲಿ ಮಹಾಲಿಂಗವು - ಇಂತೀ ಷಡ್ವಿಧ ಲಿಂಗಾರ್ಪಣವೆಂತೆಂದೊಡೆ– ಆಚಾರಲಿಂಗದರಿವು ಗಂಧ,ಗುರುಲಿಂಗದರಿವು ರಸ, ಶಿವಲಿಂಗದರಿವು ರೂಪು, ಜಂಗಮಲಿಂಗದರಿವು ಸ್ಪರ್ಶನ, ಪ್ರಸಾದಲಿಂಗದರಿವು ಶಬ್ದ, ಮಹಾಲಿಂಗದರಿವು ಸರ್ವೇಂದ್ರಿಯ – ಇಂತೀ ಷಡ್ವಿಧ ಲಿಂಗಕ್ಕೆ ಮಿಶ್ರಾರ್ಪಣವು. ಛತ್ತೀಸ್(೩೬)ತತ್ತ್ವದ ಭೇದಮಂ ಕುರುಹಿನಲ್ಲಿ ಪೇಳ್ವೆಂ.

## ಆಚಾರಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಇನ್ನು ಆಚಾರಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವೆಂತೆಂದೊಡೆ - ಆವುದಾನೊಂದು ಅರ್ಪಣಕ್ಕೆ ಬೇಕಾದುದು ಬೇರು, ಗೆಣಸು ಮೊದಲಾದ ಗಂಧವನರಿವುದು ಆಚಾರಲಿಂಗದಲ್ಲಿ, ಮರಗಡುತಿಹಗಿನ ಮೊದಲಾದ ಗಂಧವನರಿವುದು ಗುರುಲಿಂಗದಲ್ಲಿ, ಚಿಗುರು ಮೊದಲಾದ ಪತ್ರೆಯ ಗಂಧವನರಿವುದು ಶಿವಲಿಂಗದಲ್ಲಿ, ಮೊಗ್ಗೆ ಮೊದಲಾದ ಪುಷ್ಪದ ಗಂಧವನರಿವುದು ಜಂಗಮ ಲಿಂಗದಲ್ಲಿ, ಕಾಯಿ ಹಣ್ಣು ಮೊದಲಾದ ಫಲದ ಗಂಧವನರಿವುದು ಪ್ರಸಾದಲಿಂಗದಲ್ಲಿ, ಇವೆಲ್ಲರಲ್ಲಿಯ ಗಂಧವನರಿವುದು ಮಹಾಲಿಂಗದಲ್ಲಿ, ಇಂತು **ಆಚಾರಲಿಂಗದ ಮಿಶ್ರಾರ್ಪಣವು.**

## ಗುರುಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಇನ್ನು ಗುರುಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವು. ಮಧುರವಾದ ರುಚಿಯನರಿವುದು ಆಚಾರಲಿಂಗದಲ್ಲಿ, ಒಗರಾದ ರುಚಿಯನರಿವುದು ಗುರುಲಿಂಗದಲ್ಲಿ, ಖಾರವಾದ ರುಚಿಯನರಿವುದು ಶಿವಲಿಂಗದಲ್ಲಿ, ಆಮ್ಲವಾದ ರುಚಿಯನರಿವುದು ಜಂಗಮಲಿಂಗದಲ್ಲಿ, ಕಹಿಯಾದ ರುಚಿಯನರಿವುದು ಪ್ರಸಾದ ಲಿಂಗದಲ್ಲಿ, ಇವು ಎಲ್ಲರಲ್ಲಿಯ ರುಚಿಯನರಿವುದು ಮಹಾಲಿಂಗದಲ್ಲಿ- ಇಂತೀ ಪಂಚರಸಂಗಳು ಲವಣ ಕೂಡಿದಲ್ಲದೆ ರುಚಿಯಾಗಿ ಆ ಲವಣವನ್ನು ಪಂಚರಸಂಗಳಲ್ಲಿ ಕೂಡಿ ಅರ್ಪಿಸಬೇಕಲ್ಲದೆ ಬೇರೆ ಬೇರೆ ಅರ್ಪಿಸಲಾಗದು. ಇಂತು **ಗುರುಲಿಂಗದ ಮಿಶ್ರಾರ್ಪಣವು.**

## ಶಿವಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಶಿವಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವು. ಪೀತವರ್ಣದ ರೂಪನರಿವುದು ಆಚಾರಲಿಂಗದಲ್ಲಿ, ಶ್ವೇತವರ್ಣದ ರೂಪನರಿವುದು ಗುರುಲಿಂಗದಲ್ಲಿ, ಹರಿತವರ್ಣದ ರೂಪನರಿವುದು ಶಿವಲಿಂಗ

ದಲ್ಲಿ, ಮಂಜಿಷ್ಠವರ್ಣದ ರೂಪನರಿವುದು ಜಂಗಮಲಿಂಗದಲ್ಲಿ, ಕಪೋತ ವರ್ಣದ ರೂಪನರಿವುದು ಪ್ರಸಾದ ಲಿಂಗದಲ್ಲಿ ಇಂತಿವು ಎಲ್ಲರಲ್ಲಿಯು ರೂಪನರಿವುದು ಮಹಾಲಿಂಗದಲ್ಲಿ - ಇಂತು **ಶಿವಲಿಂಗದ ಮಿಶ್ರಾರ್ಪಣವು.**

## ಜಂಗಮಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಇನ್ನು ಜಂಗಮಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವು- ಕಠಿಣವಾದ ಸ್ಪರ್ಶನವನರಿವುದು ಆಚಾರಲಿಂಗದಲ್ಲಿ, ಮೃದುವಾದ ಸ್ಪರ್ಶನವನರಿವುದು ಗುರುಲಿಂಗದಲ್ಲಿ, ಉಷ್ಣವಾದ ಸ್ಪರ್ಶನವನರಿವುದು ಶಿವಲಿಂಗದಲ್ಲಿ, ಶೈತ್ಯವಾದ ಸ್ಪರ್ಶನವನರಿವುದು ಜಂಗಮಲಿಂಗದಲ್ಲಿ, ನುಣುಪುಮಿಶ್ರವಾದ ಸ್ಪರ್ಶನವನರಿವುದು ಪ್ರಸಾದಲಿಂಗದಲ್ಲಿ - ಇಂತಿವು ಎಲ್ಲರಲ್ಲಿಯು ಸ್ಪರ್ಶನವನರಿವುದು ಮಹಾಲಿಂಗದಲ್ಲಿ - ಇಂತು **ಜಂಗಮ ಲಿಂಗದ ಮಿಶ್ರಾರ್ಪಣವು.**

## ಪ್ರಸಾದಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಇನ್ನು ಪ್ರಸಾದಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವು. ತಾಳ ಕಂಸಾಳವಿಡಿದು ಹುಟ್ಟಿದ ಶಬ್ದವನರಿವುದು ಆಚಾರಲಿಂಗದಲ್ಲಿ, ತಂತಿವಿಡಿದು ಹುಟ್ಟಿದ ಶಬ್ದವನರಿವುದು ಗುರುಲಿಂಗದಲ್ಲಿ, ಕುಡುಹು ಹಿಡಿದು ಹುಟ್ಟಿದ ಶಬ್ದವನರಿವುದು ಶಿವಲಿಂಗದಲ್ಲಿ, ಕೊಳಲು ವಾಸುಗಿ ನಾಗಸರ ಶಂಖದೊಳಗಾದಿಯಾಗಿ ಹುಟ್ಟಿದ ಶಬ್ದವನರಿವುದು ಜಂಗಮ ಲಿಂಗದಲ್ಲಿ, ವಚನ ಗೀತದೊಳಗಾದಿಯಾಗಿ ಹುಟ್ಟಿದ ಶಬ್ದವನರಿವುದು ಪ್ರಸಾದಲಿಂಗದಲ್ಲಿ, ಇಂತಿವೆಲ್ಲದರಲ್ಲಿಯ ಹುಟ್ಟಿದ ಶಬ್ದವನರಿವುದು ಮಹಾಲಿಂಗದಲ್ಲಿ - ಇಂತು **ಪ್ರಸಾದ ಲಿಂಗದ ಮಿಶ್ರಾರ್ಪಣವು.**

## ಮಹಾಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣ

ಇನ್ನು ಮಹಾಲಿಂಗದ ಮಿಶ್ರ ಷಡ್ವಿಧ ಲಿಂಗಾರ್ಪಣದ ವಿವರವು ಎಂತೆಂದೊಡೆ- ಗಂಧದ ತೃಪ್ತಿಯನರಿವುದು ಆಚಾರಲಿಂಗದಲ್ಲಿ, ರಸದ

ತೃಪ್ತಿಯನರಿವುದು ಗುರುಲಿಂಗದಲ್ಲಿ, ರೂಪಿನ ತೃಪ್ತಿಯನರಿವುದು ಶಿವ ಲಿಂಗದಲ್ಲಿ, ಸ್ಪರ್ಶನ ತೃಪ್ತಿಯನರಿವುದು ಜಂಗಮಲಿಂಗದಲ್ಲಿ, ಶಬ್ದದ ತೃಪ್ತಿಯನರಿವುದು ಪ್ರಸಾದಲಿಂಗದಲ್ಲಿ, ಇವು ಎಲ್ಲರಲ್ಲಿಯು ತೃಪ್ತಿಯನರಿವುದು ಮಹಾಲಿಂಗದಲ್ಲಿ ಇಂತಿವು–**ಮಹಾಲಿಂಗದ ಮಿಶ್ರಾರ್ಪಣವು.**

## ಭಾವಾರ್ಪಣ

ಇಂತಿವು ಛತ್ತೀಸು ಕರಣಾರ್ಪಣವಾದಲ್ಲಿ ಅವರೊಳಗೆ ಭಾವಾರ್ಪಣವುಂಟು. ಅದು ಹೇಗೆಂದೊಡೆ, ಮಿಶ್ರದೊಳಗಣ ಮಿಶ್ರಮಂ ಪೇಳ್ವೆ. ಆವುದಾನೊಂದು ಇಂದ್ರಿಯಂಗಳು ಸೋಂಕುವ ಕಾಲವೇಳೆ(?)ಆಚಾರ ಲಿಂಗದಲ್ಲಿ, ಸೋಂಕಿಹುದನರಿವ ಕಾಲವೇಳೆ ಗುರುಲಿಂಗದಲ್ಲಿ, ಅರಿದು ನಿಶ್ಚಯಿಸುವ ಕಾಲವೇಳೆ ಶಿವಲಿಂಗದಲ್ಲಿ, ನಿಶ್ಚಯಿಸಿ ಸುಖಿಸುವ ಕಾಲ ವೇಳೆ ಜಂಗಮಲಿಂಗದಲ್ಲಿ, ಸುಖಿಸಿ ಪರಿಣಾಮಿಸುವ ಕಾಲವೇಳೆ ಪ್ರಸಾದ ಲಿಂಗದಲ್ಲಿ, ಪರಿಣಾಮಿಸಿ ತೃಪ್ತಿಯನೈದುವ ಕಾಲವೇಳೆ ಮಹಾಲಿಂಗ ದಲ್ಲಿ ಪಸರಿಸಿ, ಇಂತು ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ದೊಳಗೆ ಷಡ್ವಿಧಲಿಂಗ ಮಿಶ್ರಾರ್ಪಣ ಪರಿಪೂರ್ಣವಾಗಿ ಪಿಂಡಾಂಡದಲ್ಲಿ ಸದಾ ಸನ್ನಿಹಿತವಾಗಿಪ್ಪುದು. ಅದು ಸರ್ವರಿಗೆ ಸಾಧ್ಯವಪ್ಪುದೊ ? ಅದು ಸರ್ವರಿಗೆ ಸಾಧ್ಯವಿಲ್ಲ. ಅದೇನು ಕಾರಣವೆಂದಡೆ, ಕುಚಿತ್ತವಳಿದು ಸುಚಿತ್ತ ನೆಲೆಗೊಂಡಲ್ಲದೆ ಆ ಹಸ್ತಕ್ಕೆ ಆಚಾರಲಿಂಗ ಸಾಧ್ಯವಾಗದು, ಕುಬುದ್ಧಿ ಅಳಿದು ಸುಬುದ್ಧಿ ನೆಲೆಗೊಂಡಲ್ಲದೆ ಆ ಹಸ್ತಕ್ಕೆ ಗುರುಲಿಂಗ ಸಾಧ್ಯವಾಗದು, ಅಹಂಕಾರವಳಿದು ನಿರಹಂಕಾರ ನೆಲೆಗೊಂಡಲ್ಲದೆ ಆ ಹಸ್ತಕ್ಕೆ ಶಿವಲಿಂಗ ಸಾಧ್ಯವಾಗದು, ವ್ಯಾಕುಲವಳಿದು ಸುಮನ ನೆಲೆ ಗೊಂಡಲ್ಲದೆ ಆ ಹಸ್ತಕ್ಕೆ ಜಂಗಮಲಿಂಗ ಸಾಧ್ಯವಾಗದು, ಅಜ್ಞಾನವ ಳಿದು ಸುಜ್ಞಾನ ನೆಲೆಗೊಂಡಲ್ಲದೆ ಆ ಹಸ್ತಕ್ಕೆ ಪ್ರಸಾದಲಿಂಗ ಸಾಧ್ಯವಾ ಗದು, ದುರ್ಭಾವವಳಿದು ಸದ್ಭಾವನೆ ನೆಲೆಗೊಂಡಲ್ಲದೆ ಆ ಹಸ್ತಕ್ಕೆ ಮಹಾಲಿಂಗ ಸಾಧ್ಯವಾಗದು - ಇಂತೀ ಷಡ್ವಿಧ ಹಸ್ತ ನೆಲೆಗೊಂಡಲ್ಲದೆ ಷಡ್ವಿಧಲಿಂಗ ಸಾಧ್ಯವಾಗವು. ಷಡ್ವಿಧಲಿಂಗ ಸಾಧ್ಯವಾದಲ್ಲದೆ ಷಡ್ವಿಧ

ಲಿಂಗ ಸಂಯೋಗವಾಗದು. ಷಡ್ವಿಧಲಿಂಗ ಸಂಯೋಗವಾದಲ್ಲದೆ ಷಡ್ವಿಧ ಲಿಂಗಾರ್ಪಣದ ಮಿಶ್ರದೊಳಗಣ ಮಿಶ್ರಾರ್ಪಣದ ಛಾಯೆ ಕಾಣಿಸದು. ಅದು ಕಾರಣವಾಗಿ ಈ ಷಡ್ವಿಧ ಹಸ್ತ ಸ್ವಸ್ಥವಾಗಿ ನೆಲೆಗೊಂಬ ಭೇದಮಂ ಪೇಳ್ವೆ.

## ಸುಚಿತ್ತದ ನೆಲೆ

ಅದೆಂತೆಂದೊಡೆ, ಕ್ರಿಯಾಶಕ್ತಿಯ ಮಥನದಿಂದ ಪ್ರಾಣವಾಯುವ ನಿಲ್ಲಿಸಿ ಆಧಾರ ಚಕ್ರದ, ಕೆಂಪು ವರ್ಣದ ನಾಲ್ಕುದಳದ 'ವ ಶ ಷ ಸ' ಎಂಬ ನಾಲ್ಕು ಅಕ್ಷರದ ಅಧಿದೈವ ಬ್ರಹ್ಮನ ಜಾಗ್ರತಾವಸ್ಥೆಯನ್ನು 'ನ' ಕಾರವೆಂಬ ಬೀಜಾಕ್ಷರದಿಂ ತಿಳಿದು ಇಂತೀ ಷಡ್ವಿಧ ವಿಚಾರವಿಡಿದು, ಸದ್ಭಕ್ತಿಯಿಂದ ಒಂದನೆಯ ತತ್ತ್ವದಾದಿಯ ಪಶ್ಚಿಮ ದಿಕ್ಕಿನ ಸದ್ಯೋಜಾತ ಮುಖವನರಿದು ಪೃಥ್ವಿಯ ಕಠಿಣವನ್ನು ಕಿಂಕುರ್ವಾಣ ಭಯಭಕ್ತಿಯಿಂದೆ ತಿಳಿದು, ತನುಗುಣ ನಾಸ್ತಿಯಾಗಿ ಭಕ್ತಸ್ಥಲವನಂಗಂಗೊಂಡುದೀಗ ಸುಚಿತ್ತದ ನೆಲೆ.

## ಸುಬುದ್ಧಿಯ ನೆಲೆ

ಇನ್ನು, ಜ್ಞಾನಶಕ್ತಿಯ ಮಥನದಿಂದ ಅಪಾನವಾಯುವ ನಿಲ್ಲಿಸಿ, ಸ್ವಾದಿಷ್ಠಾನ ಚಕ್ರದ ನೀಲವರ್ಣದ ಷಡುದಳದ 'ಬ ಭ ಮ,ಯ ರ ಲ' ಎಂಬ ಅಕ್ಷರದ ಅಧಿದೈವ ವಿಷ್ಣುವಿನ ಸ್ವಪ್ನಾವಸ್ಥೆಯನ್ನು 'ಮ'ಕಾರವೆಂಬ ಬೀಜಾಕ್ಷರದಿಂ ತಿಳಿದು, ಇಂತೀ ಷಡ್ವಿಧ ವಿಚಾರವಿಡಿದು ನೈಷ್ಠಿಕ ಭಕ್ತಿಯಿಂದ ಎರಡನೆಯ ತತ್ತ್ವದಾದಿಯ ಉತ್ತರ ದಿಕ್ಕಿನ ವಾಮದೇವ ಮುಖವನರಿದು, ಅಪ್ಪುವಿನ ಮೃದುವನ್ನು ದೃಢವ್ರತದಿಂ ತಿಳಿದು ಸಂಸಾರ ನಾಸ್ತಿಯಾಗಿ, ಮಹೇಶ್ವರ ಸ್ಥಲವನಂಗಂಗೊಂಡುದೀಗ ಸುಬುದ್ಧಿಯ ನೆಲೆ.

## ನಿರಹಂಕಾರದ ನೆಲೆ

ಇನ್ನು, ಇಚ್ಛಾಶಕ್ತಿಯ ಮಥನದಿಂದ ವ್ಯಾನವಾಯುವನ್ನು ನಿಲ್ಲಿಸಿ ಮಣಿಪೂರಕ ಚಕ್ರದ ಕುಂಕುಮ ವರ್ಣದ ದಶದಳದ 'ಡಢಣ, ತಥದ

ಧನ, ಪಫ' ಎಂಬ ದಶಾಕ್ಷರದ ಅಧಿದೈವ ರುದ್ರನ ಸುಷುಪ್ತಾವಸ್ಥೆ ಯನ್ನು 'ಶಿ'ಕಾರವೆಂಬ ಬೀಜಾಕ್ಷರದಿಂ ತಿಳಿದು, ಇಂತೀ ಷಡ್ವಿಧ ವಿಚಾರವಿಡಿದು,ಅವಧಾನ ಭಕ್ತಿಯಿಂದ ಮೂರನೆಯ ತತ್ತ್ವದಾದಿಯ ತಿಳಿದು, ದಕ್ಷಿಣ ದಿಕ್ಕಿನ ಅಘೋರ ಮುಖವನರಿದು, ಅಗ್ನಿಯ ಉಷ್ಣವನ್ನು ಶಿವ ಯೋಗದಿಂ ಕೆಡಿಸಿ ಕಾಮ್ಯನಾಸ್ತಿಯಾಗಿ, ಪ್ರಸಾದಿಯ ಸ್ಥಲವನಂಗಂ ಗೊಂಡುದೀಗ ನಿರಹಂಕಾರದ ನೆಲೆ.

## ಸುಮನದ ನೆಲೆ

ಇನ್ನು, ಆದಿಶಕ್ತಿಯ ಮಥನದಿಂದ ತಿಳಿದು, ಉದಾನ ವಾಯುವ ನಿಲ್ಲಿಸಿ, ಅನಾಹತ ಚಕ್ರದ ಪೀತವರ್ಣದ ದ್ವಾದಶ ದಳದ 'ಕಖಗಘಙ, ಚಛಜಝಞ, ಟಠ' ಎಂಬ ದ್ವಾದಶ ದಳದ ಅಕ್ಷರದ ಅಧಿದೈವ ಈಶ್ವರನ ತೂರ್ಯಾವಸ್ಥೆಯನ್ನು 'ವಕಾರ'ವೆಂಬ ಬೀಜಾಕ್ಷರದಿಂ ತಿಳಿದು, ಇಂತೀ ಷಡ್ವಿಧ ವಿಚಾರವಿಡಿದು ಅನುಭಾವ ಭಕ್ತಿಯಿಂದ ನಾಲ್ಕನೆಯ ತತ್ತ್ವದಾದಿಯ ಪೂರ್ವದಿಕ್ಕಿನ ತತ್ಪುರುಷ ಮುಖವನರಿದು,ವಾಯುವಿನ ಚಲನೆಯನ್ನು ಪರಿಪೂರ್ಣತ್ವದಿಂ ಕೆಡಿಸಿ ಗಮನ ನಾಸ್ತಿಯಾಗಿ, ಪ್ರಾಣ ಲಿಂಗಿಯ ಸ್ಥಲವನಂಗಂಗೊಂಡುದೀಗ ಸುಮನದ ನೆಲೆ.

## ಸುಜ್ಞಾನದ ನೆಲೆ

ಇನ್ನು ಪರಶಕ್ತಿಯ ಮಥನದಿಂದ ಸಮಾನವಾಯುವ ನಿಲ್ಲಿಸಿ, ವಿಶುದ್ಧಿ ಚಕ್ರದ ಶ್ವೇತವರ್ಣದ ಷೋಡಶ ದಳದ 'ಅಆ,ಇಈ,ಉಊ, ಋೠ,ಎಏಐ,ಒಓಔ,ಅಂ ಅಃ' ಎಂಬ ಷೋಡಶಕ್ಷರದ ಅಧಿದೈವ ಸದಾಶಿವನ ಅತೀತಾವಸ್ಥೆಯನ್ನು 'ಯ'ಕಾರವೆಂಬ ಬೀಜಾಕ್ಷರದಿಂ ತಿಳಿದು, ಇಂತೀ ಷಡ್ವಿಧ ವಿಚಾರವಿಡಿದು ಆನಂದ ಭಕ್ತಿಯಿಂದ ಐದನೆಯ ತತ್ತ್ವದಾದಿಯ ಊರ್ಧ್ವ ದಿಕ್ಕಿನ ಈಶಾನ ಮುಖವನರಿದು, ಆಕಾಶದ ಭ್ರಮೆಯನ್ನು ಪರಿಣಾಮದಿಂ ತಿಳಿದು ಕರ್ಮನಾಸ್ತಿಯಾಗಿ,ಶರಣಸ್ಥಲವನಂಗಂ ಗೊಂಡುದೀಗ ಸುಜ್ಞಾನದ ನೆಲೆ.

## ಸದ್ಭಾವದ ನೆಲೆ

ಇನ್ನು ಚಿತ್‌ಶಕ್ತಿಯ ಮಥನದಿಂದ ನಾಗ ಕೂರ್ಮ ಮಕರ ದೇವ ದತ್ತ ಧನಂಜಯ ಎಂಬ ಪಂಚವಾಯುವ ನಿಲಿಸಿ, ಆಜ್ಞಾಚಕ್ರದ ಮಾಣಿಕ್ಯವರ್ಣದ ದ್ವಿದಳದ 'ಹಂ ಕ್ಷಂ' ಎಂಬ ದ್ವಿಅಕ್ಷರದ ಅಧಿದೈವ ಮಹಾಶ್ರೀ ಗುರುವಿನ ನಿರಾವಸ್ಥೆಯಂ 'ಓಂ'ಕಾರವೆಂಬ ಬೀಜಾಕ್ಷರ ದಿಂ ತಿಳಿದು, ಇಂತೀ ಷಡ್ವಿಧ ವಿಚಾರವಿಡಿದು ಸಮರಸ ಭಕ್ತಿಯಿಂದ ಆರನೆಯ ತತ್ತ್ವದಾದಿಯ ಗಂಭೀರ ದಿಕ್ಕಿನ ಮಹಾತತ್ತ್ವದ ಮುಖವ ನರಿದು, ಆತ್ಮನ ಅಹಂ ಮಮತೆಯನ್ನು ಘನಪ್ರಕಾಶದಿಂ ತಿಳಿದು, ಮೋಕ್ಷಾರ್ಥ ನಾಸ್ತಿಯಾಗಿ,ಐಕ್ಯಸ್ಥಲವನಂಗಂಗೊಂಡುದೀಗ ಸದ್ಭಾವದ ನೆಲೆ.

## ತ್ರಯೋಂಗ ಸ್ಥಲದ ವಿವರ

ಇಂತೀ ಷಡ್ವಿಧ ಶಕ್ತಿಯ ಮಥನದಿಂದ ದಶವಾಯುಗಳ ನಿಲ್ಲಿಸಿ, ಷಡ್ವಿಧ ಚಕ್ರದ, ಷಡ್ವಿಧ ವರ್ಣದ, ಷಡ್ವಿಧ ದಳದ, ಷಡ್ವಿಧ ಅಕ್ಷರದ ಷಡ್ವಿಧ ಅಧಿದೈವದ, ಷಡ್ವಿಧ ಅವಸ್ಥೆಯನ್ನು, ಷಡ್ವಿಧ ಬೀಜಾಕ್ಷರದಿಂ ತಿಳಿದು, ಇಂತೀ ಅಂತರ್ಮುಖದ ಛತ್ತೀಸು ವಿಚಾರವಿಡಿದು ಕಾಣಿಸಿದ ಷಡ್ವಿಧ ಭಕ್ತಿಯಿಂದ ಷಡ್ವಿಧ ತತ್ತ್ವದಾದಿಯ ಷಡ್ವಿಧ ದಿಕ್ಕಿನ ಷಡ್ವಿಧ ಮುಖವನರಿದು, ಷಡ್ವಿಧ ಭೂತಗುಣವನು ಷಡ್ವಿಧ ಶೀಲವ್ರತದಿಂ ತಿಳಿದು, ಷಡ್ವಿಧ ಮದನಾಸ್ತಿಯಾಗಿ, ಷಡ್ವಿಧ ಅಂಗಸ್ಥಲವನುವಾಗಿ, ಷಡ್ವಿಧ ಹಸ್ತ ನೆಲೆಗೊಂಡು ಷಡ್ವಿಧಲಿಂಗ ಸಾಧ್ಯವಾಗಿ, ಇಂತೀ ಕಾಯಾ ರ್ಪಣ, ಕರಣಾರ್ಪಣ, ಭಾವಾರ್ಪಣದೊಳಗೆ, ಷಡ್ವಿಧ ಕಾಯಾರ್ಪಣ ಮಿಶ್ರ ಇಂದ್ರಿಯಾರ್ಪಣವು ಛತ್ತೀಸು ತತ್ತ್ವದ ಭೇದವಂ ಕುರುಹಿನಲ್ಲಿ ಅರಿವು ಮಿಶ್ರ ಷಡ್ವಿಧವಾಗಿ ಷೋಡಶೋತ್ತರ ದ್ವಿಶತಾರ್ಪಣದಲ್ಲಿ ಪರಿ ಣಾಮವ ಪ್ರಸಾದದೊಳಗೋಲಾಡುತ್ತ, ಪರಿಣಾಮವು ಅಂಗವಾಗಿ, ಪರಿಣಾಮವು ಲಿಂಗವಾಗಿ, ಪರಿಣಾಮವು ಸಂಗವಾಗಿ, ಪರಿಣಾಮವು ಸಮರಸವಾಗಿ, ಒಳಹೊರಗೆ ತೆರಹಿಲ್ಲದೆ ಷಡ್ವಿಧ ಸ್ಥಲದ ಬೆಳಗ ಬೀರುತ್ತ

ತೋರುತ್ತ, ಮೀರುತ್ತ, ಇಂತೀ ಷಡ್ವಿಧ ಸ್ಥಲದ ನಿರ್ದೇಶವನು ಗುರು ಲಿಂಗಜಂಗಮವೆಂಬ ಮೂರುಸ್ಥಲದಲ್ಲಿ ಕಾಣಿಸಿ, ನಾದ, ಬಿಂದು, ಕಳೆಯ ತಿಳಿದು, ಜೀವಾತ್ಮ, ಅಂತರಾತ್ಮ, ಪರಮಾತ್ಮನೆಂಬ ಆತ್ಮತ್ರಯದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ತೃಪ್ತಿಲಿಂಗವೆಂಬ ಲಿಂಗತ್ರಯವ ಸಂಬಂಧಿಸಿ, ಸ್ಥೂಲತನು, ಸೂಕ್ಷ್ಮತನು, ಕಾರಣತನುವೆಂಬ ತನುತ್ರಯದಲ್ಲಿ ತ್ಯಾಗಾಂಗ ಭೋಗಾಂಗ ಯೋಗಾಂಗವೆಂಬ ತ್ರಯಾಂಗಸ್ಥಲ ಸಂಬಂಧ ವಾಗಿ ನಿಂದ ನಿರ್ದೇಶದ ವಿವರವೆಂತೆಂದಡೆ– ಭಕ್ತ ಮಹೇಶ್ವರ ಎಂಬು ಭಯಸ್ಥಲವು ತನು, ಮನ, ಧನದಲ್ಲಿ ವಂಚನೆಯಿಲ್ಲದೆ ಪ್ರಕಾಶಿಸುತ್ತಿಹು ದಾಗಿ, **ತ್ಯಾಗಾಂಗಸ್ಥಲ**ದ ಬೆಳಗಿನೊಳಗಡಗಿತ್ತು. ಪ್ರಸಾದಿ ಪ್ರಾಣಲಿಂಗಿ ಎಂಬುಭಯಸ್ಥಲವು ಲಿಂಗಾಂಗವಾಗಿ ಸಕಲ ಕಳೆಯೊಳಗೆ ಲಿಂಗವೆಂದೆ ನಿಸಿಕೊಂಡು ಪ್ರಕಾಶಿಸುತ್ತಿಹುದಾಗಿ **ಭೋಗಾಂಗಸ್ಥಲ**ದ ಬೆಳಗಿನೊಳ ಗಡಗಿತ್ತು. ಶರಣ ಐಕ್ಯರೆಂಬ ಉಭಯಸ್ಥಲವು ಭಿನ್ನರುಚಿಯನರಿಯದೆ ಪ್ರಕಾಶಿಸುತ್ತಿಹುದಾಗಿ, **ಯೋಗಾಂಗಸ್ಥಲ**ದ ಬೆಳಗಿನೊಳಗಡಗಿತ್ತು. ಇಂತು ತ್ರಯಾಂಗಸ್ಥಲದ ವಿವರ. ಇನ್ನು

## ತ್ರಿಲಿಂಗ ಸ್ಥಲ

ತ್ರಿಲಿಂಗ ಸ್ಥಲದ ವಿವರವೆಂತೆಂದಡೆ– ಆಚಾರಲಿಂಗ ಗುರು ಲಿಂಗವೆಂಬ ಉಭಯ ಸ್ಥಲವು ಸಾಕಾರವಾಗಿ **ಇಷ್ಟಲಿಂಗ**ವೆನಿಸಿ ಕೊಂಡು ಅನಿಷ್ಟವ ಪರಿಹರಿಸಿ ತೋರಿತ್ತು. ಶಿವಲಿಂಗ ಜಂಗಮ ಲಿಂಗವೆಂಬುಭಯ ಸ್ಥಲ ಸಕಲ ನಿಷ್ಕಲವಾಗಿ, **ಪ್ರಾಣಲಿಂಗ**ವೆನಿಸಿ ಕೊಂಡು ಒಳಹೊರಗೆ ಬೆಳಗಿ ತೋರಿತ್ತು. ಪ್ರಸಾದಲಿಂಗ ಮಹಾ ಲಿಂಗವೆಂಬುಭಯ ಸ್ಥಲವು ನಿರವಯವಾಗಿ **ಭಾವಲಿಂಗ**ವೆನಿಸಿಕೊಂಡು ಸರ್ವನಿರ್ವಹವ ಮಾಡಿತೋರಿತ್ತು. ಇಂತು ತ್ರಿಲಿಂಗ ಸ್ಥಲದ ವಿವರ.

## ದಿವ್ಯ ಶಿವಯೋಗಿಯ ದರ್ಶನ

ಇಂತಿವು ಮೂರು ಸ್ಥಲದ ಲಿಂಗಾಂಗದ ನಿರ್ಣಯ ಮುಟ್ಟಿನೋ ಡುತ್ತ ಮೂರುಸ್ಥಲದ ಬೆಳಗನು ಭಕ್ತಜಂಗಮವೆಂಬುಭಯ ಸ್ಥಲದಲ್ಲಿ

ಕಾಣಿಸಿ, ಶಿವಭಕ್ತಿಯಲ್ಲಿ ತಿಳಿದು, ಕಾಯಪ್ರಾಣದಲ್ಲಿ ಸಂಬಂಧಿಸಿ, ಭಕ್ತ, ಮಹೇಶ್ವರ, ಪ್ರಸಾದಿ ಎಂಬ ತ್ರಯಾಂಗ ಸ್ಥಲವು ಭಕ್ತನಲ್ಲಿಯೇ ಸುಳಿದು, ಪ್ರಾಣಲಿಂಗಿ ಶರಣೈಕ್ಯನೆಂಬ ತ್ರಯಾಂಗ ಸ್ಥಲವು ಜಂಗಮಲಿಂಗದಲ್ಲಿಯೇ ಸುಳಿದು, ಸಾಕಾರ ಮೂರುಸ್ಥಲವು ಕ್ರಿಯಾಚರಣೆಯಲ್ಲಿ ಸವೆದು, ನಿರಾಕಾರ ಮೂರುಸ್ಥಲವು ಜ್ಞಾನಾಚರಣೆಯಲ್ಲಿ ಸವೆದು, ಮಾರ್ಗಕ್ರಿಯೆ ಮೀರಿದ ಕ್ರಿಯೆಯೆಂದೆನಿಸಿ, ಕುರುಹಿನ ಸ್ಥಲವನು ರೂಪವ ಮಾಡಿ, ಅರುಹಿನ ಸ್ಥಲವನು ನಿರೂಪ ಮಾಡಿ, ರೂಪು ರುಚಿಯಂತೆ ಉಭಯಸ್ಥಲದಲ್ಲಿ ನಿಂದು, ಉಭಯ ಸ್ಥಲವ ನೆಲೆಮಾಡಿ ತೋರುತ್ತ, ಉಭಯಸ್ಥಲವಳಿದುಳಿದು, ಏಕಮೇವ ಪರಬ್ರಹ್ಮವೆಂಬಲ್ಲಿ ತನ್ನ ಪಶ್ಚಿಮ ಪಾದದ ನಿಜ ಬೆಳಗಿನ ಪ್ರಭೆಯಲ್ಲಿ ಒಂದು ಎರಡಾದುದಂ ಕಂಡು, ಎರಡು ಮೂರಾದುದಂ ಕಂಡು, ಮೂರು ಆರಾದುದಂ ಕಂಡು, ಆರು ಮೂವತ್ತಾರಾದುದಂ ಕಂಡು, ಆ ಮೂವತ್ತಾರು ಇನ್ನೂರ ಹದಿನಾರು ಆದುದಂ ಕಂಡು, ಆ ಇನ್ನೂರ ಹದಿನಾರರ ಮಿಶ್ರಪಿಂಡಾಂಡದಲ್ಲಿ ಪರಿಪೂರ್ಣವಾಗಿ ಬೆಳಗಿ ತೋರಿತ್ತೆಂಬುದಂ ಕಂಡು, ಕಡೆಗೂಸಿ ಅರೆಮರುಳು ಬೆರಗು ನಿಬ್ಬೆರಗಾಗಿ ಪಿಂಡಾಂಡದಲ್ಲಿ ತೋರುವ ಪರಿಪೂರ್ಣ ಪ್ರಭೆಯನು ಆ ಇನ್ನೂರ ಹದಿನಾರರಲ್ಲಿ ಭೇದಿಸಿ, ಆ ಇನ್ನೂರ ಹದಿನಾರರ ಪ್ರಭೆಯನ್ನು ಆ ಇನ್ನೂರ ಹದಿನಾರರಲ್ಲಿ ಭೇದಿಸಿ, ಆ ಇನ್ನೂರ ಹದಿನಾರರ ಪ್ರಭೆಯನು ಮೂವತ್ತಾರರಲ್ಲಿ ಅರಿದು, ಆ ಮೂವತ್ತಾರರ ಬೆಳಗನು ಆರು ಸ್ಥಲದಲ್ಲಿ ಅರಿದು ಆ ಆರು ಸ್ಥಲದನ್ವಯವನು ಮೂರು ಸ್ಥಲದಲ್ಲಿ ಅರಿದು, ಆ ಮೂರುಸ್ಥಲದ ಮೂಲವನ್ನು ಉಭಯ ಸ್ಥಲದಲ್ಲಿ ಅರಿದು, ಆ ಉಭಯಸ್ಥಲದ ಉಪಮೆಯನು ಉಪಮಾತೀತದಲ್ಲಿ ಅರಿದು, ಉಪಮೆ ಅನುಪಮೆಯೆಂಬ ಅರಿವರಿತು ಮರವು ನಷ್ಟವಾಗಿ ||ಶೃತಿ|| "ವಾಚಾತೀತಂ ಮನೋತೀತಂ | ಭಾವಾತೀತಮಗೋಚರಂ | ಸರ್ವಶೂನ್ಯ ನಿರಾಕಾರಂ | ನಿತ್ಯತ್ವಂ ಪರಮಂಪದಂ ||" ಎಂದುದಾಗಿ ||ಗ್ರಂಥ|| 'ಆದಿಶೂನ್ಯಂ ಮಧ್ಯಶೂನ್ಯಂ | ಅಂತ್ಯಶೂನ್ಯಂ ನಿರಾಮಯಂ || ಸರ್ವಶೂನ್ಯಂ ನಿರಾಲಂಬಂ | ನಿಃಶಬ್ದಂ

ಬ್ರಹ್ಮಮುಚ್ಯತೆ||' ಎಂಬ ನುಡಿಗೆಡೆಗೊಡದೆ ನಿರವಯ ಸ್ಥಲದಲ್ಲಿ ನಿಜವ ನೈದಿಪ್ಪಾತನೀಗ ಅಭೇದ್ಯಭೇದಕ, ಅಸಾಧ್ಯಸಾಧಕ, ಚಿನ್ಮಯ, ಚಿದ್ರೂಪ, ಚಿದಾನಂದ ಇಂತಪ್ಪ ದಿವ್ಯಶಿವಯೋಗಿ, ಮಹಾಶರಣ ಪ್ರಭು ದೇವರ ಬಸವಣ್ಣನ ಕರುಣದಿಂದ ನಾನು ಬದುಕಿದೆನಯ್ಯಾ ಕೂಡಲ ಚೆನ್ನಸಂಗಮದೇವ.

ಇಂತು ಮಿಶ್ರಾರ್ಪಣ ಸಂಪೂರ್ಣಂ. ಮಂಗಳ ಮಹಾ ಶ್ರೀ ಶ್ರೀ ಶ್ರೀ.

---

## ಮಿಶ್ರಾರ್ಪಣದ ಸಾರ

ಮಿಶ್ರವೆಂದೊಡೆ ಪದಾರ್ಥ. ಅರ್ಪಣವೆಂದೊಡೆ ಲಿಂಗಾರ್ಪಣವು. ಆ ಲಿಂಗಾರ್ಪಣದ ಸಕೀಲಂಗಳನ್ನು ಹೇಳುವ ಶಾಸ್ತ್ರವು ಮಿಶ್ರಾರ್ಪಣವು. ಇದು ಅಷ್ಟಾವರಣ ಷಟ್‌ಸ್ಥಲಗಳನ್ನು ತಿಳಿದವರಿಗೆ ಮಾತ್ರ ಸಾಧ್ಯವು.

ಷಡ್ವಿಧಾಂಗವನ್ನು ಷಡ್ವಿಧ ಲಿಂಗದಲ್ಲಿ ಒಡಗೂಡಿಸಿ ಷಡ್ವಿಧಲಿಂಗ ಸಂಬಂಧವನ್ನು ಮಾಡಿಕೊಂಡು ಷಡ್ವಿಧ ಭಕ್ತಿವಿಡಿದು ಆಚರಿಸಿ ಪರ ಮಾತ್ಮನೊಡನಿರುವ ಸ್ಥಿತಿಯನ್ನುಂಟುಮಾಡಿಕೊಳ್ಳುವುದೇ ಮಿಶ್ರಾರ್ಪ ಣದ ಮುಖ್ಯ ಉದ್ದೇಶವು. ಇವರಲ್ಲಿ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳೆಂದು ಮೂರು ಭಾಗಗಳಿವೆ.

### ಕಾಯಾರ್ಪಣ

ಭೋಜ್ಯ, ಪಾನ್ಯ, ಭಕ್ಷ್ಯ, ಚೋಹ್ಯ (ಸುಲಿದು ತಿನ್ನುವ), ಲೇಹ್ಯ (ನೆಕ್ಕಿ ತಿನ್ನುವ) ಮತ್ತು ಇವೆಲ್ಲವುಗಳ ಅರಿವನ್ನು ಅನುಕ್ರಮ ವಾಗಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದ ಲಿಂಗ ಮತ್ತು ಮಹಾಲಿಂಗಗಳಲ್ಲಿ ಷಡ್ವಿಧ ಭಕ್ತಿ ಸಕೀಲಗಳಿಂದ ಸಮರ್ಪಿ ಸುವುದೇ ಕಾಯಾರ್ಪಣವು.

## ಕರಣಾರ್ಪಣ

ಪ್ರಾಣಲಿಂಗವು ನಾಶಿಕವಲ್ಲಿ ಪಂಚಾಚಾರ ಸ್ವರೂಪ ಆಚಾರ ಲಿಂಗವಾಗಿ, ಜಿಹ್ವೆಯಲ್ಲಿ ಮಂತ್ರಮೂರ್ತಿ ಗುರುಲಿಂಗವಾಗಿ, ನೇತ್ರದಲ್ಲಿ ಪ್ರಕಾಶ ಸ್ವರೂಪ ಶಿವಲಿಂಗವಾಗಿ, ತ್ವಕ್ಕಿನಲ್ಲಿ (ಚರ್ಮದಲ್ಲಿ) ಯಜನ ಪೂಜಾಸ್ವರೂಪವಾದ ಚರಲಿಂಗವಾಗಿ, ಶ್ರೋತ್ರದಲ್ಲಿ ಈಳನ ಪ್ರಾರ್ಥನಾ ರೂಪವಾದ ಪ್ರಸಾದಲಿಂಗವಾಗಿ, ಹೃದಯದೊಳಗೆ ಬೋಧಾರೂಪ ಮಹಲಿಂಗವಾಗಿರುತ್ತದೆ. ಆದುದರಿಂದ ಸುಗಂಧ, ಸುರಸ, ಸುಪ್ರಕಾಶ, ಸುಸ್ಪರ್ಶನ, ಸುಶಬ್ದ ಸುಪರಿಣಾಮ – ಇವುಗಳನ್ನು ಅನುಕ್ರಮವಾಗಿ, ಆಚಾರಲಿಂಗ, ಗುರುಲಿಂಗ ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮತ್ತು ಮಹಾಲಿಂಗಗಳಿಗೆ ಅರ್ಪಿಸತಕ್ಕದ್ದು. ಮುಂದೆ ಈ ಪದಾರ್ಥ ಗಳಲ್ಲಿ ಅವುಗಳ ಗುಣಗಳ ಪ್ರಕಾರ ಪುನಃ ಆರು ವರ್ಗಗಳನ್ನು ಮಾಡಿ, ಆಯಾ ಲಿಂಗಗಳಿಗೆ ಅರ್ಪಿಸುವುದೇ ಕರಣಾರ್ಪಣವು.

## ಭಾವಾರ್ಪಣ

ಇದರಲ್ಲಿ ಆತ್ಮತತ್ತ್ವ ಸಂಬಂಧವಾದ ೨೧೬ ತೆರದ ತೃಪ್ತಿ ಪದಾ ರ್ಥಗಳು ೨೧೬ ಲಿಂಗಗಳಿಗೆ ೨೧೬ ಭಕ್ತಿ ಸಕೀಲಗಳಿಂದ ಸಮರ್ಪಿತ ವಾಗುವುವು ಕರಣಾರ್ಪಣದ ಪ್ರತಿಯೊಂದು ಗುಂಪಿನಲ್ಲಿ ಆರುಆರು ವಿಧ ಗಳಾಗಿ ೩೬ ಭಾಗಗಳಾಗುವವು. ಈ ಪ್ರತಿಯೊಂದರಲ್ಲೂ ಭಾವಲಿಂಗ ಸಂಬಂಧದ ಆರು ಕ್ರಿಯೆಗಳಿರುತ್ತವೆ.

ಅವು, ಇಂದ್ರಿಯಗಳಿಗೆ ತಟ್ಟುವುದು, ತಟ್ಟಿದ್ದನ್ನು ತಿಳಿಯುವುದು, ತಿಳಿದದ್ದನ್ನು ನಿಶ್ಚಯಿಸುವುದು, ನಿಶ್ಚಯಿಸಿದ್ದನ್ನು ಧೃಡೀಕರಿಸುವುದು, ಧೃಡೀಕರಿಸಿದ್ದನ್ನು ಅನುಭವಿಸುವುದು, ಅನುಭವಿಸಿದ್ದನ್ನು ಆನಂದಿಸು ವದು – ಹೀಗೆ ಇರುತ್ತವೆ. ಅವು ಆತ್ಮಸಂಬಂಧವಾದವುಗಳು. ಅವುಗ ಳನ್ನು ಭಾವಲಿಂಗಕ್ಕೆ ಅರ್ಪಿಸಬೇಕು. ಮೂವತ್ತಾರು ಪದಾರ್ಥಾರ್ಪಿತ ಕರಣಾರ್ಪಣದ ಪ್ರತಿಯೊಂದರಲ್ಲಿ ಮೇಲೆ ಹೇಳಿದ ಆರು ಕ್ರಿಯೆಗಳು ಇದ್ದು, ಈ ಕ್ರಿಯೆಗಳೆಲ್ಲವೂ ೩೬ರ ಪ್ರತಿಯೊಂದರಲ್ಲಿ ಇರುವದರಿಂದ

ಎಲ್ಲವೂ ಕೂಡಿ ೨೧೬ ತೆರದ ಅರ್ಪಣಗಳಾಗುವವು. ಇದೇ ಭಾವಾರ್ಪಣವು.

ಇಂತು ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣದೊಳಗೆ ಷಡ್ವಿಧಲಿಂಗ ಮಿಶ್ರಾರ್ಪಣವು ಪಸರಿಸಿ ಲಿಂಗಪರಿಪೂರ್ಣವಾಗಿ ಪಿಂಡಾಂಡದಲ್ಲಿ ಸದಾ ಸನ್ನಿಹಿತನಾಗಿರುತ್ತಾನೆ. ಇದು ಸರ್ವರಿಗೆ ಸಾಧ್ಯವೆ ? ಸಾಧ್ಯವಿಲ್ಲ. ಏನು ಕಾರಣವೆಂದರೆ–

ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ ನೆಲೆಗೊಳ್ಳದೆ ಷಡ್ವಿಧ ಲಿಂಗಗಳು ಸಾಧ್ಯವಾಗವು; ಷಡ್ವಿಧ ಲಿಂಗ ಸಂಯೋಗವಾಗದು. ಆ ಷಡ್ವಿಧ ಲಿಂಗಸಂಯೋಗವಾದಲ್ಲದೆ ಷಡ್ವಿಧಾರ್ಪಣದ ಮಿಶ್ರದೊಳಗಣ ಮಿಶ್ರಾರ್ಪಣದ ಛಾಯೆ ಕಾಣಿಸದು.

## ತ್ರಯಾಂಗ ಮತ್ತು ತ್ರಿಲಿಂಗ ಸ್ಥಲಗಳು

ಕೊನೆಯಲ್ಲಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯರೆಂಬ ಆರು ಸ್ಥಲಗಳು ತ್ಯಾಗಾಂಗ, ಭೋಗಾಂಗ, ಯೋಗಾಂಗ ಎಂಬ ಮೂರು ಅಂಗಸ್ಥಲಗಳ ಬೆಳಗಿನೊಳಗೆ ಅಡಗುವವು. ಅದೇ ಪ್ರಕಾರ ಆಚಾರಾದಿ ಆರುವಿಧ ಲಿಂಗಗಳು ಸಾಕಾರವಾಗಿ ಇಷ್ಟ, ಪ್ರಾಣ ಮತ್ತು ಭಾವಲಿಂಗಗಳೆನಿಸಿಕೊಳ್ಳುವವು.

## ದಿವ್ಯ ಶಿವಯೋಗಿ

ಶ್ರುತಿಯಲ್ಲಿ ಹೇಳಿದ ವಾಚ್ಯಾತೀತವೂ, ಮನೋತೀತವೂ, ಭಾವಾತೀತವೂ, ಅಗೋಚರವೂ, ಸರ್ವಶೂನ್ಯವೂ, ನಿರಾಕಾರವೂ, ಶಾಶ್ವತವೂ, ಆದಿ ಮಧ್ಯ ಅಂತ್ಯ ಶೂನ್ಯವೂ, ನಿರಾಮಯವೂ, ಸರ್ವ ಶೂನ್ಯವೂ, ನಿರಾಲಂಬ ನಿಃಶಬ್ದವೂ ಎನಿಸಿದ ಪರಬ್ರಹ್ಮವೇ ನಾನೆಂದು ಹೇಳುವ ನುಡಿಗೆಡೆಗೊಡದೆ ನಿರವಯ ಸ್ಥಲದಲ್ಲಿ ನಿಜವನೈದಿದಾತನೇ ಅಭೇದ್ಯ ಭೇದಕ, ಅಸಾಧ್ಯಸಾಧಕ, ಚಿನ್ಮಯ, ಚಿದಾನಂದ, ದಿವ್ಯ ಶಿವಯೋಗಿ-ಮಹಾ ಶರಣನಾದ ಪ್ರಭುದೇವರ ಬಸವಣ್ಣನ ಕರುಣದಿಂದ ಶ್ರೀ ಚೆನ್ನಬಸವಣ್ಣನವರು ಬದುಕಿದೆನೆಂದು ಹೇಳುವಲ್ಲಿಗೆ ಮಿಶ್ರಾರ್ಪಣ ಸಂಪೂರ್ಣವು.

# ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ
# ಮಂತ್ರಗೋಪ್ಯ

## ವಿ ವ ರ ಣೆ

ಪರಶಿವಲಿಂಗದಿಂದೆ ನಿ ರ್ಮಿ ತ ವಾ ದ ಜಗದ್ವೈಭವದೊಳಗೆ ವೇದಾಂತ ಸಿದ್ಧಾಂತ ಮೊದಲಾದ ಮಾರ್ಗಗಳಿಗೆ ಉತ್ತರವೆನಿಸುವ ವೀರಶೈವ ಸಿದ್ಧಾಂತ ಮಾರ್ಗದಲ್ಲಿ ಆ ಪರಶಿವಲಿಂಗದ ಲೀಲಾನಂದ ಭಕ್ತಿ ಭಾವಸೂತ್ರವಿಡಿದು ಆಚರಿಸುತ ಆ ಲಿಂಗದ ಸಮವೇತ್ತ ಚಿಚ್ಛಕ್ತಿ ಸ್ವರೂಪವಪ್ಪ ಷಟ್‌ಸ್ಥಲ ಜ್ಞಾನಪ್ರಕಾಶ ಮಧ್ಯದಲ್ಲಿ ಲಿಂಗಾಂಗ ಸಮರಸ ಸಂಯೋಗವೆಂಬ ಶಿವಯೋಗ ಸಮಾಧಿಯ ಮಹಾ ಹೊಲಬನರಿದು ನಿಂದಾತನೇ ನಿತ್ಯ ನಿಜಲಿಂಗೈಕ್ಯನು, ಅಸಾಧ್ಯಸಾಧಕನು, ಜಗತ್ಪೂಜ್ಯನೆಂದು ಆ ಶಿವಯೋಗದ ಸುಮಾರ್ಗ ಲಕ್ಷಣವನ್ನು ಸಿದ್ಧರಾಮೇಶ್ವರನಿಗೆ ಚೆನ್ನಬಸವರಾಜದೇವರು ತಮ್ಮ ಸ್ವಾನುಭವ ಪ್ರಸನ್ನ ವಾಕ್ಯಗಳಿಂದ ಬೋಧಿಸುತಿರ್ದರದರ ವಿಸ್ತಾರವೆಂತೆನಲು—

## ವಿಸ್ತಾರ ಮತ್ತು ಅರ್ಥ

ಆ ಸದ್ಬೋಧ ಸ್ವರೂಪವಪ್ಪ ಶಾಸ್ತ್ರಕ್ಕೆ 'ಮಂತ್ರಗೋಪ್ಯ'ವೆಂಬ ನಾಮ ಪ್ರಸಿದ್ಧ. ಈ ಮಂತ್ರಗೋಪ್ಯಕ್ಕೆ ಅರ್ಥವೇನೆಂದರೆ 'ಮಂ' ಎಂಬಲ್ಲಿ ಮನನವೆಂದು ಪ್ರಣವಸ್ವರೂಪವಪ್ಪ ಪರಶಿವನ ನೆನಹು. 'ತ್ರ' ಎಂದರೆ ತ್ರಾಣವೆಂದು ಅಂತು ಪರಶಿವನ ನೆನಹೆಂಬುದು ನೆನೆವಾತನ ಚಿತ್ತವ ಸಂಸಾರ ವ್ಯಾಪ್ತಿಯಿಂದ ಕಡೆಗೆ ದಾಂಟಿಸಿ, ಆ ಚಿತ್ತವ ತನ್ನಲ್ಲಿ ಸಂಬಂಧಿಸಿಕೊಳ್ಳುತಿರ್ದ ಕಾರಣ, ಆ ನೆನಹಿಂಗೆ ಮಂತ್ರವೆಂಬ ಅರ್ಥವಾಯಿತು. ಇನ್ನು ಗೋಪ್ಯವೆಂದರೆ ರಹಸ್ಯಾರ್ಥ. ಶಿವಧ್ಯಾನದಲ್ಲಿ ಕರಗಿಗೊಂಡ ಚಿತ್ತವು ಆ ಶಿವಾನಂದದಲ್ಲಿಯೇ ಮುಳುಗಿ, ಶಿವಸ್ವರೂಪವಾಯಿತ್ತಾಗಿ ಅದು ಆತ್ಮಯೋಗದ ಲಕ್ಷ್ಯಾನುಸಂಧಾನದೊಳಗಿಪ್ಪ ಚಿತ್ತದಹಾಂಗೆ ಕಲ್ಪಿತಕ್ಕೆ ಕಾಣಿಸಿಕೊಳ್ಳದೆಂಬುದು ಗೌಪ್ಯ ಶಬ್ದಕ್ಕೆ ಅರ್ಥ. ಈ ಕ್ರಮದಿಂ ಅವಿರ

ಖಾನಂದ ಶಿವಯೋಗ ಸಂಬಂಧಾರ್ಥಮಂ ಪೇಳ್ವ ಈ ಶಾಸ್ತ್ರಕ್ಕೆ **ಮಂತ್ರ ಗೋಪ್ಯ**ವೆಂಬ ನಾಮವು ಪ್ರಸಿದ್ಧ.

ಇಂತಪ್ಪ ಶಿವಯೋಗ ಸಂಬಂಧಕ್ಕೆ ಅಧಿಕಾರಿಯಾಗಬೇಕಾದರೆ ತನುವಿನ ಕುರುಹು, ಮನದ ಸಂಕಲ್ಪ, ಆತ್ಮನ ಜೀವ ಭಾವವೆಂಬ ಮಿಥ್ಯ ಎಂಬ ಪ್ರಪಂಚ ನಾಸ್ತಿಯಾಗಿ ಗುರುವೆ ತನು, ಲಿಂಗವೆ ಮನ, ಆ ಗುರು ಚೈತನ್ಯವೆಂಬ ಜಂಗಮವೆ ಆತ್ಮಸ್ವರೂಪವಾದಲ್ಲದೆ ಆಗದಾಗಿ ಆ ಶಿವದೀಕ್ಷಾನುಗ್ರಹಕ್ಕೆ ಶಿವನ ಸಾಕಾರ ಮೂರ್ತಿಯೆನಿಸುವ ಸದ್ಗುರುವೇ ಕರ್ತನೆಂದು ಅರುಹಿ ಪ್ರಥಮದಲ್ಲಿ ಚೆನ್ನಬಸವರಾಜದೇವರು ಸದ್ಗುರು ಸ್ತೋತ್ರಮಂ ಮಾಡುತ್ತಿರ್ದಪರು.

## ಗುರು ಸ್ತೋತ್ರ

ಗುರುವೆ ಪರಶಿವನೆ । ಸಕಲಾಗ ಮಂಗಳ ಮೂರ್ತಿ ।
ಗುರುವೆ ಅಜ್ಞಾನ ತಿಮಿರಕ್ಕಂಜನ ।
ನಾಸ್ತಿ ತತ್ತ್ವ ಗುರೋಃ ಪರವೆಂದುದಾಗಿ ।
ಶ್ರೀಗುರು ಪಾದಸೇವೆ ಕಾರಣ ಯೋಗಿಗೆ ॥

## ಭಾವಾರ್ಥ

ಅನಾದಿ ಸಂಪ್ರದಾಯವಿಡಿದು ಬಂದ ಗುರುವಿನ ಕರುಣಾ ಕಟಾಕ್ಷದಿಂದ ಜೀವನ ಜೀವಗುಣವು ಅಳಿದು ಶಿವನ ಸ್ವರೂಪು ದೊರೆವುದಾಗಿ ಗುರುವೆ ಶಿವನೆನಿಸಿದನು. ಮತ್ತು ಗುರುಪೂಜೆಯಿಂದ ಶಿವನು ಪೂಜಿತನಾಗುತ್ತಿಹನಾಗಿ ಶಿವನೇ ಗುರುವೆನಿಸಿದನು ಇದುವೆ ಗುರು, ಪರಶಿವನೆಂಬುದಕ್ಕೆ ಅರ್ಥ. ಆ ಪರಶಿವನೆಂಬ ಗುರುವಿನ ಪಂಚಮುಖದಿಂದ ಹುಟ್ಟಿದ ಕಾಮಿಕಾದಿ ೨೮ ಶಿವಾಗಮಂಗಳೇ ಸದ್ಗುರುವಿಗೆ ಕ್ರಿಯಾಶಕ್ತಿಸ್ವರೂಪದಿಂದ ಅಂಗವೆನಿಸಿ ಅವರ ಸ್ವರೂಪಾರ್ಥಂಗಳೇ ಜ್ಞಾನಶಕ್ತಿ ಸ್ವರೂಪಿನಿಂದ ಅವಯವಂಗಳೆನಿಸಿಪ್ಪವೆಂಬುದೇ ಸಕಲಾಗಮಂಗಳ ಮೂರ್ತಿಯೆಂಬ ಶಬ್ದಕ್ಕರ್ಥ. ಶಿವಾಂಶಿತನಾದ ಆತ್ಮನನ್ನು (ಜೀವನನ್ನು) ಮೂಲ ಅಜ್ಞಾನ ದೃಷ್ಟಿಯು ಮುಸುಕಿಕೊಂಡಿಪ್ಪ ಅಹಂ ಜೀವನೆಂಬ ಅಜ್ಞಾನ ತಮಸ್ಸನ್ನು

ಕಡೆಗೆ ತೊಲಗಿಸಿ ನಿಜ ಸ್ವರೂಪ ಪ್ರಕಾಶಿಸುವದಕ್ಕೆ ಅಹಂ ಪರಬ್ರ ಹ್ಮೋಸ್ಮಿ ಎಂಬ ಶಿವಜ್ಞಾನಾಂಜನ ಸ್ವರೂಪನಾಗಿರುವನು ಎಂಬುವದೇ ಗುರ ಅಜ್ಞಾನ ತಿಮಿರಕ್ಕಂಜನನೆಂಬುದರ್ಥ. ಗುರುಮುಖದಿಂದ ಮೇಲಣ ಪರಶಿವನಲ್ಲಿ ಅವಿರಳ ಸಂಯೋಗಿಯಾದೆನೆಂಬ ಆತ್ಮಂಗೆ ಗುರುಭಕ್ತಿ ಯೊಂದೆ ಮುಖ್ಯವಾಗಿಹುದು. ಆ ಚಿಚ್ಛಕ್ತಿ ಸ್ವರೂಪ ನಿರಹಂಭಾವ ಭಕ್ತಗೆ ಬಂಧ ಮೋಕ್ಷಗಳ ತೊಡಕಿಲ್ಲವಾಗಿ ಶಿವಭಕ್ತಿಯೇ ಸಾಧನವೆಂಬು ದೀಗ 'ಶ್ರೀ ಗುರು ಪಾದಸೇವೆ ಕಾರಣ ಯೋಗಿಗೆ' ಎಂಬ ಶಬ್ದಕ್ಕರ್ಥ.

ಆಕಾರ ನಿರಾಕಾರ ಏಕವೆಂದೇ ನೋಡಿ ।<br>
ಆಕಾರವಿಡಿದು ಅರ್ಚನೆ ಪೂಜನೆ ।<br>
ಏಕೋಭಾವದ ನಿಷ್ಠೆ ನಿರ್ವಾಣದಲಿ ನಿಲಲು ನಿ ।<br>
ನ್ನಾಕಾರ ನಿರಾಕಾರ ತಾನು ತಾನೆ ॥ ೧ ॥

## ಭಾವಾರ್ಥ

ಆಕಾರವೆಂದೊಡೆ ಕ್ರಿಯಾಲಿಂಗ. ನಿರಾಕಾರವೆಂದೊಡೆ ಜ್ಞಾನ ಲಿಂಗ. ಏಕವೆಂದೇ ನೋಡಿ ಎಂದಡೆ ತಿಳಿದುಪ್ಪ ಗಟ್ಟಿಗೊಂಡ ಹಾಗೆ, ಆ ಚಿಲ್ಲಿಂಗವು ಕ್ರಿಯಾಶಕ್ತಿಯ ಸಂಪುಟದಿಂದ ಕರ್ಮಸಾದಾಖ್ಯವೆಂಬ ಇಷ್ಟಲಿಂಗಾಕಾರವೆನಿಸಿತ್ತಾಗಿ, ಕ್ರಿಯಾಲಿಂಗವೆಂದು ಜ್ಞಾನಲಿಂಗವೆಂದು ಎರಡು ಭೇದವಾಗಿ ಕಾಣದೆ ಒಂದೇ ಸ್ವರೂಪಿನಲ್ಲಿ ಕಾಣಬೇಕೆಂಬುದರ್ಥ. ಆಕಾರವಿಡಿದು ಅರ್ಚನೆ, ಪೂಜನೆಯೆಂದರೆ ಸತ್ಕ್ರಿಯಾಚಾರದಿಂದಲ್ಲದೆ ಮುಕ್ತಿಯಿಲ್ಲವಾಗಿ ಸತ್ಕ್ರಿಯಾರೂಪಮಪ್ಪ ಇಷ್ಟಲಿಂಗವೆ ಮುಕ್ತಿಸ್ಥಾನ ವೆಂದು ಧೃಡವಿಡಿದು ಪೂಜೋಪಚಾರಗಳ ಮಾಡಬೇಕೆಂಬುದರ್ಥ. ಇಂತಹ ಏಕೋಭಾವದ ನಿಷ್ಠೆ ನಿರ್ವಾಣದಲಿ ನಿಲಲು ಎಂದಡೆ ಪತಿವ್ರ ತಾಂಗನೆಯಂತೆ ತನ್ನಿಷ್ಟಲಿಂಗವಲ್ಲದೆ ಬೇರೊಂದನರಿಯದ ನೈಷ್ಠಿಕ ಭಾವ ವೆಂಬುದು ಆ ಲಿಂಗ ಪೂಜಾ ಚಿತ್ತ ವಿಶ್ರಾಂತಿಯಿಂದ ಕರಿಗೊಂಡು (ಸ್ಥಿರ ವಾದ) ಸದ್ಯೋನ್ಮುಕ್ತಿಯಲ್ಲಿ ಸುಸ್ಥಿರವಾದುದೆಂಬುದರ್ಥ. ನಿನ್ನಾಕಾರ ನಿರಾಕಾರ ತಾನು ತಾನೆಂದಡೆ ಮನದ ನಿಷ್ಠೆ, ತನುವಿನ ನಿರ್ವಾಣವೆಂ

ಬೆರಡು ಒಂದಾಗಲು ಮನವು ಪ್ರಾಣಲಿಂಗಸ್ವರೂಪವಾಯಿತು. ತನುವು ಇಷ್ಟಲಿಂಗಾಕಾರವಾಯಿತೆಂಬುದರ್ಥ.

ನೋಡ ನೋಡಲು ಲಿಂಗ । ದಾಕಾರ ತಾನಾಗಿ ।
ನಾದ ಬಿಂದುವಿನ ಕಳೆ ಶಿವಕಳೆಯೊಳು ।
ಕೂಡೆ ಬಲಿದಾಲಿಂಗ ತಾನಾದಲ್ಲಿ ।
ನಾದ ಬಿಂದು ಕಳಾತೀತನಾದ. ॥ ೨ ॥

## ಭಾವಾರ್ಥ

ನೋಡ ನೋಡಲು ಲಿಂಗಾಕಾರ ತಾನಾಗಿ ಎಂದಡೆ ಶಿರ, ಭುಜ, ನಡು, ಪಾದಂಗಳಲ್ಲಿ ಕ್ರಮವಿಡಿದು, ಶಿರದಲ್ಲಿ ಓಂಕಾರ ಎರಡು ಭುಜಗಳಲ್ಲಿ ನಕಾರ ಯಕಾರಗಳು, ನಡುವಿನಲ್ಲಿ ಶಿಕಾರ, ಎರಡು ಪಾದಗಳಲ್ಲಿ ನಕಾರ ಮಕಾರಗಳು ಷಡಕ್ಷರ ಮಂತ್ರಮೂರ್ತಿ ಸಂಬಂಧನಿಂದ ತಾನೇ ತನ್ನ ಇಷ್ಟಲಿಂಗದಾಕಾರವೆನಿಸಿ, ಅನಿಮಿಷ ದೃಷ್ಟಿಯಿಂದ (ರೆಪ್ಪೆ ಬಡಿಯದ ಕಣ್ಣಿನಿಂದ) ತನ್ನಿಷ್ಟಲಿಂಗವ ನೋಡುತ್ತಿರಲು, ನಾದ ಬಿಂದುವಿನ ಕಳೆ ಶಿವಕಳೆಯೊಳು ಕೂಡಿ ಬಲಿದು ಎಂದಡೆ ತನ್ನ ಇಷ್ಟಲಿಂಗದೊಳಗೆ ದೃಷ್ಟಿ ಮನಂಗಳು ನಿಬ್ಬೆರಗಾಗಿ ಸ್ಥೂಲಾಂಗದ ಕಳೆ, ಇಷ್ಟಲಿಂಗದ ಚಿತ್ಕಳೆಯಲ್ಲಿ ಬೆರೆದು ನಿಂದಿತ್ತು. ಮತ್ತಂ ಆ ಇಷ್ಟಲಿಂಗದ ಚಿತ್ಕಳಾ ಸ್ವರೂಪಿನಿಂದೆ ಮನದೊಳಗೆ ಬೆಳಗುವ ಪ್ರಾಣಲಿಂಗದ ಚೈತನ್ಯದಲ್ಲಿ ಪ್ರಾಣ ಚೈತನ್ಯ ಬೆರೆದುನಿಂದಿತ್ತು. ಮತ್ತಂ ಆ ಲಿಂಗ ತಾನುತಾನಾದಲ್ಲಿ ನಾದ-ಬಿಂದು-ಕಳಾತೀತನಾದನೆಂದಡೆ ಅಂಗ ಪ್ರಾಣದ ಕಲೆಗಳು ಇಷ್ಟ ಪ್ರಾಣ ಲಿಂಗದೊಳಡಗಿ ಲಿಂಗಸ್ವರೂಪವಾಗಿ ಮತ್ತಾ ಉಭಯ ಲಿಂಗವೇ ಅಂಗ ಪ್ರಾಣವಾಗಿಪ್ಪ ನಿಲುಕಡೆಯಲ್ಲಿ ಆ ಶರಣನು ದೇಹ, ಪ್ರಾಣ, ಇಂದ್ರಿಯಂಗಳೆಂಬ ಕಲ್ಪಿತ ಭಾವವ ಮೀರಿ ನಿಂದನೆಂಬುದರ್ಥ.

ಯೋಗ ಯೋಗವೆಂದು ಯಾಕೆ ಬಳಲುವೆ ಯೋಗಿ ।
ಸಾಕು ಗುರು ಹೇಳಿದಂತಿಹುದು ಯೋಗ ।
ಏಕಾಗ್ರದಲ್ಲಿ ನೋಡಿ ಗುರು ವಾಕ್ಯವಿಡಿದು ನಿಲೆ ನಿ ।
ನ್ನಾಕಾರ ನಿರಾಕರ ತಾನು ತಾನೇ ॥ ೩ ॥

## ಭಾವಾರ್ಥ

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳೆಂಬ ಅಷ್ಟಾಂಗ ಯೋಗವೇ ಪರವೆಂದು (ಶ್ರೇಷ್ಠವೆಂದು) ತಿಳಿದು ಬಳಿಕ ಪ್ರಾಣಾಯಾಮಾದಿ ಅಭ್ಯಾಸದಿಂದ ಶರೀರ ಸಿದ್ಧಿಯಂ ಪಡೆದು ನಾದ ಲಕ್ಷಣ ಧ್ಯಾನದೊಳು ಸಮಾಧಿ ಯನ್ನು ಹೊಂದಿ ನಿತ್ಯನಾಗಿರ್ದಪನೆಂದು ಬಳಲುವ ಮೋಕ್ಷವು ಕಾಮಿಗೆ ಸಲ್ಲದು. ಅದೇನು ಕಾರಣವೆಂದಡೆ ತನಗೆ ಶರೀರ ಸಿದ್ಧಿಯಾದಡೆಯೂ ಶಿವದೀಕ್ಷೆಯಿಂದಲ್ಲದೆ ಸೂಕ್ಷ್ಮ ತನು ಭಾವ ನಷ್ಟವಾಗದ ಪಕ್ಷದಲ್ಲಿ ತನ್ನ ಶರೀರವೆಂಬುದು ಪ್ರಳಯಕ್ಕೊಳಗಪ್ಪುದಾಗಿ ಸಲ್ಲದೆಂಬುದೀಗ ಯೋಗ ಯೋಗವೆಂದು ಯಾಕೆ ಬಳಲುವೆ ಯೋಗಿ ಸಾಕು ಎಂಬ ಶಬ್ದಕ್ಕರ್ಥ. ಮತ್ತೆ ನಿತ್ಯನಿಜಯೋಗವೆಂದಡೆ ವಾಙ್ಮಯನಕ್ಕಗೋಚರವಾದ ಚಿದ್ರೂಪ ಲಿಂಗವ ಅಂತರಂಗದಲ್ಲಿಯೇ ಕಂಡು ಕೂಡಿರುವೆನೆಂಬ ಭ್ರಾಂತಿ ಜ್ಞಾನವ ಬಿಟ್ಟು ಕಟ್ಟಿಗೆಯೊಳಗಿರುವ ಮಂದಾಗ್ನಿಯು ಮಥನದಿಂದ ಕಾಣುವಂತೆ ಸದ್ಗುರು ಕಾರುಣ್ಯದಿಂದ ಆ ಚಿದ್ರೂಪ ಲಿಂಗವನ್ನು ಸಾಕಾರ ಲಿಂಗವಾಗಿ ಕಂಡು ಆ ಲಿಂಗವನ್ನೇ ಮನದೊಳಗೆ ಜ್ಯೋತಿರ್ಮಯವಾಗಿ ಧ್ಯಾನಿಸಿ, ಮನೋಲ್ಲಯವ ಪಡೆಯುವದೇ ನಾದ-ಬಿಂದು-ಕಳಾತೀತವಾದ ಪರ ಶಿವಯೋಗವೆಂದು ಶ್ರೀ ಗುರು ಬೋಧಿಸಿದ ತೆರದಲ್ಲಿ ತಿಳಿದು ನಡೆದ್ದು ನಿಶ್ಚಿಂತನಾಗಿಪ್ಪುದೇ ಕೇಡಿಲ್ಲದ ಶಿವಯೋಗವೆಂಬುದೀಗ ಗುರು ಹೇಳಿದಂ ತಿಹುದು ಯೋಗವೆಂಬ ಶಬ್ದಕ್ಕರ್ಥ. ಇಂತೀ ಭೇದವ ತನ್ನ ಸದ್ವಿವೇಕ ದೃಷ್ಟಿಯಿಂದ ನಿಧಾನಿಸಿ ನೋಡಿ ತಿಳಿದು ಗುರು ನಿರೂಪವ ಧೃಡವಾಗಿ ಪಿಡಿದು ಲಿಂಗಾಂಗ ಯೋಗಮಾರ್ಗದಲ್ಲಿ ಸ್ಥಿರವಾಗಿ ನಿಂದೊಡೆ ಆತನೇ ಯೋಗೀಶ್ವರನು. ಇಂತಪ್ಪ ಯೋಗೀಶ್ವರನ ಅಂಗವೇ ಸದಾಚಾರ ಸಂಬಂ ಧದಿಂದ ಇಷ್ಟಲಿಂಗವಪ್ಪುದು. ಪ್ರಾಣವೇ ನೈಷ್ಠಿಕಾ ಭಕ್ತಿ ಸಂಬಂಧದಿಂದ ಪ್ರಾಣಲಿಂಗವಪ್ಪುದೆಂಬುದೀ ವಚನಾರ್ಥ.

ಮೂಲ ಸ್ಥಾನದ ದೇಗುಲದೊಳಗಣ ಲಿಂಗ ।
ನಾಭಿ ಮಂಡಲದ ಕಮಲದಲುದಯವು ।

ಮೇಲುಗಿರಿ ಶಿಖರ ಪಶ್ಚಿಮ ದ್ವಾರವನು ಹೊಗಲು ।
ಕಾಣಬಹುದಾ ಲಿಂಗದ ಘನವನು ||೪||

ಸ್ಥೂಲ ತನುವೆಂಬ ದೇವಾಲಯದೊಳಗೆ ಪೂಜೆಗೊಂಬ ಇಷ್ಟ ಲಿಂಗವೆಂಬುದು ನಾಡಿ ಕಂದದ ಮೇಲೆ ಊರ್ಧ್ವ ಮುಖವಾಗಿಪ್ಪ ಹೃತ್ಕ ಮಲಕರ್ಣಿಕಾಪೀಠದಲ್ಲಿ ಪ್ರಣವ ಜ್ಯೋತಿರ್ಮಯ ಮಂಡಲದಿಂದ ಪ್ರಾಣಲಿಂಗವೆನಿಸಿಕೊಂಡು ಪ್ರಕಾಶಿಸುತ್ತಿಹುದೆಂಬುದೀಗ ಮೂಲಸ್ಥಾನದ ದೇಗುಲದೊಳಗಣ ಲಿಂಗ ನಾಭಿಮಂಡಲದೊಳು ಉದಯ ಎಂಬ ಶಬ್ದ ಕ್ಕರ್ಥ. ಮೇಲುಗಿರಿ ಎಂದಡೆ ಭ್ರೂಮಧ್ಯ ಚಕ್ರ; ಶಿಖರವೆಂದಡೆ ಬ್ರಹ್ಮ ರಂಧ್ರ; ಪಶ್ಚಿಮದ್ವಾರವೆಂದಡೆ ಸುಷುಮ್ನಾ ದ್ವಾರ. ಇಂತೀ ಸ್ಥಾನಗ ಳಲ್ಲಿ ನಿಂದು ನೋಡಲು ತನ್ನ ಪ್ರಾಣಲಿಂಗದ ಪರಿಪೂರ್ಣ ಲಕ್ಷಣವು ಕಾಣಬಹುದು. ಅದು ಹೇಗಂದಡೆ ಅಂತರ್ಮುಖವನ್ನೈದಿದ ಸ್ವಾನುಭವ ದೃಕ್ಕೆಂಬುದು ಭ್ರೂಮಧ್ಯ ಚಕ್ರದ ಬೆಳಗಿನಲ್ಲಿ ನಿಂದು ನೋಡಲು ಉಭ ಯದಳದಲ್ಲಿಪ್ಪ ಜೀವ ಪರಮರನ್ನೊಳಕೊಂಡು ಅಲ್ಲಿ ತಾರಕ ಬ್ರಹ್ಮವೆಂಬ ಮಹಾಲಿಂಗವಾಗಿ ನೆಲಸಿ ಸ್ಫಟಿಕದ ನಿರ್ಮಲದಂತೆ ಅನಾದಿ ನಿರ್ಮಲ ತೇಜೋಮಯದಿಂದ ಪ್ರಕಾಶಿಸುತ್ತಿಹುದು. ಮತ್ತಂ ಆ ಸುಷುಮ್ನಾ ದ್ವಾರದೊಳಗೆ ಸೋಹಂ ಭಾವದ ಅರಿವು ನಿಶ್ಚಲವಾಗಿ ನಿಂದು ನೋಡಲು ಅಲ್ಲಿ ಸೋಹಂ ಎಂಬ ಶಬ್ದವನೊಳಕೊಂಡು ಓಂ ಎಂಬ ನಾದ ಬ್ರಹ್ಮ ಮಯವಾಗಿ ತೋರುತ್ತಿಹುದು. ಮತ್ತಂ ಮೇಲಣ ಚಿದಾಕಾರ ಮಂಡಲ ದೊಳಗೆ ಉನ್ಮನಿಯ ನೆನಹು ನಿಂದು ನೋಡಲು ಆ ನೆನಹನೊಳಕೊಂಡು ನಾದ ಬ್ರಹ್ಮ ಕಲಾತೀತವಪ್ಪ ಕೇವಲ ಸಚ್ಚಿದಾನಂದಮಯದಿಂದ ಪ್ರಕಾ ಶಿಸುತ್ತಿಹುದೆಂಬುದೀ ವಚನಾರ್ಥ.

ಮನ ಪವನ ಪ್ರಾಣಲಿಂಗವು ಲಿಂಗ ತಾನಾಗಿ ।
ಘನ ಮಹಾಲಿಂಗವನು ಗ್ರಹಿಸುತಿರಲು ।
ಘನಕೆ ಘನವಾದ ಏಕೋ ದೇವಂ ಅದ್ವಿತೀಯ ।
ಕೂಡಲ ಚೆನ್ನ ಸಂಗಯ್ಯನಾದ ಶರಣ || ೫ ||

## ಭಾವಾರ್ಥ

ಮನ, ಪವನ, ಪ್ರಾಣಲಿಂಗವು ಎಂದಡೆ ಪ್ರಾಣವಾಯು, ಮನಸ್ಸುಗಳೆಂಬೆರಡು ಸೋಹಂ ಎಂಬ ಅವಿರಳ ಶಿವಧ್ಯಾನದರುವಿನಿಂ ಕೂಡಿ ಪ್ರಣವ ಪ್ರಕಾಶಮಯದಿಂದ ಬೆಳಗುವ ಪ್ರಾಣಲಿಂಗದೊಳಗೆ ನಿಶ್ಚಲವಾಗಿ ನಿಲಲು, ಗಮನಾಗಮನ ಸಂಕಲ್ಪ ವಿಕಲ್ಪಂಗಳಳಿದು ಪ್ರಾಣಲಿಂಗದ ನಿಜಸ್ವರೂಪವೇ ನಿಜವಾದುದು. ಲಿಂಗ ತಾನಾಗಿ ಘನ ಮಹಾಲಿಂಗವು ಅನುಗ್ರಹಿಸುತ್ತಿರಲು ಆ ಪ್ರಾಣಲಿಂಗದೊಳಗೆ ತನ್ನ ಪ್ರಾಣ ಚೈತನ್ಯವು ಸಮರಸವಾಗಿ ತನಗೆ ಬೇರೊಂದು ಸ್ವರೂಪಿಲ್ಲದೆ ತಾನೆ ಪ್ರಾಣಲಿಂಗ ಮಯವಾಗಿ ನಿಂದು ಮೇಲಣ ಚಿದ್ಘನ ಲಿಂಗವೆಂಬ ಸ್ವಯಂಜ್ಯೋತಿ ಲಿಂಗವನು ಉನ್ಮನೀ ನೆನಹಿನಲ್ಲಿ ಧರಿಸುತ್ತಿಹನು. ಹೀಗೆ ಜ್ಯೋತಿರ್ಲಿಂಗವ ಧರಿಸುತ್ತಿದ್ದ ನೆನಹೆಂಬುದು ಆ ಜ್ಯೋತಿರ್ಲಿಂಗದ ಚಿದಾನಂದದೊಳಗೆ ನಿಷ್ಪತ್ತಿಯನೈದಲು ಆ ಶರಣನ ಬೆಳಗು ಆ ಲಿಂಗದ ಪರಿಪೂರ್ಣ ಚಿದ್ಬೆಳಗಿನೊಳಗೆ ಬೆರೆದು ಆ ಲಿಂಗವೇ ತಾನಾದನೆಂಬುದೀ ವಚನಾರ್ಥ.

ಇಲ್ಲಿಗೆ ಶಿವಯೋಗ ಸ್ಥಾಪನಾಸ್ಥಲ ಸಮಾಪ್ತ.

## ಪ್ರಾಣಲಿಂಗ ಸ್ಥಲ

ಇಂತು ಸದ್ಗುರು ಕಾರುಣ್ಯದಿಂದ ಲಿಂಗಾಂಗ ಸಂಯೋಗವೆಂಬ ಶಿವಯೋಗ ಸಂಪನ್ನನಾಗಿ ಕರ್ಮಯೋಗವ ನಿರಾಕರಿಸಿ ತನ್ನ ಇಷ್ಟಲಿಂಗದ ನಿಜಸ್ವರೂಪವನರಿದು ಬೆರಿಸಿದ ಮಹಾಂತನು ಆ ನಿಜಸ್ವರೂಪವೆಂಬ ಪ್ರಾಣಲಿಂಗವನರ್ಚಿಸುತ್ತಿರಲು ಮುಂದೆ ಪ್ರಾಣಲಿಂಗ ಪೂಜಾ ವಿಧಾನ ಸ್ಥಲವಾದುದು.

ಹೃದಯ ಪೀಠವ ಬಲಿದು ಸದಮಲದ ಬೆಳಗಿನಿಂ ।
ಫಲ ಪದವನೊದೆದು ನಿಜದೊಳು ನಿಂದೆನು ॥

## ಭಾವಾರ್ಥ

ಹೃದಯಪೀಠವ ಬಲಿದು ಎಂದಡೆ ತನ್ನ ಮನೋ ಮಧ್ಯದಲ್ಲಿ ಪ್ರಣವ ಸ್ವರೂಪದಿಂದ ತನ್ನಿಷ್ಟಲಿಂಗವ ನೆನೆವುತ್ತಿರಲು ಮನವಳಿದು

ಮನೋ ಮೂರ್ತಿಲಿಂಗವಾಯಿತ್ತಾಗಿ, ಆ ಲಿಂಗಕ್ಕೆ ತನ್ನ ಮನವೇ ಒಂದು ಚಿತ್ಪ್ರಣವ ಪೀಠವಾಗಿ ನಿಂದಿತ್ತೆಂಬುದರ್ಥ. ಸದಮಲ ಬೆಳಗೆಂದಡೆ ಆ ಪ್ರಾಣಲಿಂಗದ ಮೂಲ ಪ್ರಕಾಶವೆಂಬುದು ಮಾಯಾ ಕಳಂಕಿಲ್ಲದೆ ಅನಾದಿ ನಿರ್ಮಲ ಗುಣದಿಂನ ನಿತ್ಯವಾಗಿ ಪ್ರಕಾಶಿಸುತ್ತಿಹುದೆಂಬುದರ್ಥ. ಬೆಳಗಿನಲಿ ಫಲ ಪದವನೊಡೆದು ನಿಜದೊಳು ನಿಂದೆನೆಂದಡೆ ಆ ಮೂಲ ಪ್ರಕಾಶವನಾಶ್ರಯಿಸಿ ನಿಂದು ನೋಡಲು ಅಲ್ಲಿಂದ ಕೆಳಗೊಪ್ಪುವ ಚತುರ್ವಿಧ ಪದಂಗಳೆಲ್ಲ ತನ್ನ ನಿಜ ಭಾವಕ್ಕೆ ಖಂಡಿತ ಗುಣದಿಂದ ತೋರುತ್ತಿಹವಾಗಿ ಅವುಗಳನ್ನೆಲ್ಲ ಮಿಥ್ಯವೆಂದು ಕಳೆದು ತನ್ನ ಪ್ರಾಣಲಿಂಗ ಪದವೆಂಬ ನಿತ್ಯ ನಿಜಪದ ಒಂದರಲ್ಲಿ ಅಖಂಡ ಪರಿಪೂರ್ಣ ಸ್ವರೂಪನಾಗಿ ನೆಲೆಗೊಂಡನೆಂಬುದರ್ಥ.

ಆಕಾರ ಓಂಕಾರ ಸಾಕಾರ ಸನ್ಮತಂ ।
ಏಕಾಕ್ಷರ ಪೂಜೆ ಗೋಪ್ಯ ಗೋಪ್ಯಂ ।
ಏಕ ವರ್ಣದ ಜಪಂ ಏಕಾಕ್ಷರ ಮಂತ್ರಂ ।
ಏಕೋರುದ್ರನದ್ವಿತೀಯನೆನುತಿರ್ದನು ॥ ೬ ॥

## ಭಾವಾರ್ಥ

ಆಕಾರವೆಂದಡೆ ಆತ್ಮ ತತ್ತ್ವ ಸ್ವರೂಪವಾದ ಅಂಗ. ಓಂಕಾರವೆಂದಡೆ ಹೃದಯದಲ್ಲಿ ಲಿಂಗಮಯದಿಂದ ಬೆಳಗುವ ಮೂಲ ಪ್ರಣವ. ಸಾಕಾರವೆಂದಡೆ ಸತ್ಕ್ರಿಯಾ ಸ್ವರೂಪವಾದ ಇಷ್ಟಲಿಂಗ ಸನ್ಮತಂ ಎಂದಡೆ ಅಂಗ ಲಿಂಗವೆರಡೂ ಆ ಪ್ರಣವ ಲಿಂಗದಲ್ಲಿ ಸಂಬಂಧ. ಅದು ಹೇಗಂದಡೆ ತನ್ನಿಷ್ಟಲಿಂಗವೆಂಬುದು ಅನುಮಿಷ ದೃಷ್ಟಿ ಸೂತ್ರವಿಡಿದು ಹೋಗಿ ಘನವನೊಳಕೊಂಡಿಪ್ಪ ಪ್ರಣವದ ಜ್ಯೋತಿಯಾಕಾರದಲ್ಲಿ ಸುನಾದಮಯವಾಗಿ ಸಂಬಂಧವಾಗಿಹವು. ಮತ್ತಂ ಅಂಗ ಸಂಬಂಧವಾದ ಪಂಚತತ್ತ್ವಂಗಳು ಆ ಲಿಂಗದ ನೆನಹಿನೊಡನೆ ಕೂಡಿದ ಆತ್ಮನ ಬೆಂಬಳಿವಿಡಿದು ಆ ಪ್ರಣವದ ಜ್ಯೋತಿರಾಕಾರ, ದರ್ಪಣಾಕಾರ, ಅರ್ಧ

ಚಂದ್ರಾಕಾರ, ಕುಂಡಲಾಕಾರ, ದಂಡಾಕಾರ, ತಾರಕಾಕಾರವೆಂಬ ಐದಂಗದಲ್ಲಿ ಪಂಚಾಕ್ಷರಿಸ್ವರೂಪಿನಿಂದ ಸಂಬಂಧವಾದವು. ಏಕಾಕ್ಷರ ಪೂಜೆಯೆಂದರೆ ಓಂ ಎಂಬ ಏಕಾಕ್ಷರವು ಅಖಂಡ ಭಾವ ಪ್ರಕಾಶದರಿವಿನ ಸದ್ವಾಸನೆಯುಳ್ಳವನಾದ ಶರಣನು ಆ ಅಖಂಡ ಭಾವಪ್ರಕಾಶದೊಳಗಿಪ್ಪ ಪ್ರಾಣಲಿಂಗಕ್ಕೆ ಓಂಕಾರ ಒಂದು ಪುಷ್ಪದ ಪೂಜೆಯೆಂದು ನೇಮಿಸಿ ಮಾಡುವನು. ಗೋಪ್ಯ ಗೋಪ್ಯವೆಂದಡೆ ಇಂತಪ್ಪ ಪೂಜಾ ಭಾವನೆಯೆಂಬುದು ಧ್ಯಾನ ಧ್ಯೇಯಗಳಿಂದಿದಿರಿಟ್ಟು ಅರ್ಚಿಸುವ ಭಿನ್ನಯೋಗ ದೃಷ್ಟಿಗೆ ಅಗೋಚರವಾಗಿಹುದು. ಇನ್ನು ಏಕವರ್ಣದ ಜಪ, ಏಕಾಕ್ಷರ ಮಂತ್ರವೆಂದಡೆ ಆ ಪ್ರಣವ ಲಿಂಗ ಸಂಬಂಧದಲ್ಲಿ ಅಂಗ ಲಿಂಗವೆಂಬೆರಡೂ ಬೇರಿರಿಟ್ಟು ತೋರಲಿಲ್ಲವಾಗಿ ಓಂಕಾರ ಒಂದೇ ಮಂತ್ರವಾದುದು. ಆ ಮಂತ್ರವನ್ನು ತನ್ನ ಪ್ರಾಣಲಿಂಗದೊಡನೆ ಕೂಡಿದ ನಿರ್ವಿಕಲ್ಪ ಧ್ಯಾನ ಚಿತ್ತದಲ್ಲಿ ಓಂ ಓಂ ಎಂದು ಮರಳಿ ಮರಳಿ ನೆನಹು ಗೋಚರ ಮಾತ್ರವಾಗಿ ಮೆಲ್ಲ ಮೆಲ್ಲನೆ ಪದವಿಡಿದುದೆ ಶಿವಸಮಾಧಿಯ ಜಪವೆಂಬುದರ್ಥ. ಇಂತಪ್ಪ ಜಪದಲ್ಲಿ ನಿರತನಾದ ಶರಣನು ಏಕೋರುದ್ರನದ್ವಿತೀಯನೆನುತಿರ್ಪನು. ಅದೆಂತೆಂದಡೆ ಲಿಂಗಮಯವಾಗಿ ಲಿಂಗವ ನೆನೆಯುತ್ತಿರ್ದ ಮನಸ್ಸು ಲಿಂಗರತಿಯಿಂದ ಆ ಲಿಂಗದಲ್ಲಿ ಲಯವನೈದಿ ಪರಮಾನಂದಮಯವಾಗಿರುತಿರಲು ಅಲ್ಲಿಪ್ಪ ಶರಣನ ನಿಲುಕಡೆಯೆಂಬುದು ಅದ್ವಿತೀಯ ಪರಬ್ರಹ್ಮ ಸ್ವರೂಪವಾಯಿತೆಂಬುದರ್ಥ.

ಪದ್ಮ ಪೀಠವ ಬಲಿದು ಪದ್ಮ ನವಸೂತ್ರದಿಂ ।
ಪದ್ಮ ಪುಷ್ಪವು ಅರಳಿ ವಾಸಿಸಿತು ।
ಪದ್ಮ ಪುಷ್ಪವ ಕೊಯ್ದು ಉನ್ಮನಿಯ ಸ್ಥಾನದ ।
ಪದ್ಮಲಿಂಗಾರ್ಚನೆಯ ಪರಮಯೋಗಿ ॥ ೭ ॥

## ಭಾವಾರ್ಥ

ಉನ್ಮನೀಯ ಸ್ಥಾನ ಪ್ರಕಾಶಮಯವಪ್ಪ ಮಹಾಲಿಂಗ ಧ್ಯಾನಾರೂಢನಾಗಿ ಸ್ವಸ್ಥ ಪದ್ಮಾಸನ ಬಲಿದು ಕುಳಿತು ಊರ್ಧ್ವಲೋಚನನಾಗಿ

ನೋಡುತಿರಲು, ಪದ್ಮ ನವಸೂತ್ರವೆಂದರೆ ಮೂಲಾಧಾರದಲ್ಲಿಪ್ಪ ಮೂಲಾಗ್ನಿ ಪ್ರಕಾಶವೆಂಬುದು ನಿವೃತ್ತಿ ಕಲಾಶಕ್ತಿ ಸಂಬಂಧದಿಂದ ಊರ್ಧ್ವ ಮುಖವನ್ನೈದಿ ಪೋಗಿ ದಶದಳ ಪದ್ಮವಲಯದಲ್ಲಿ ಹೃದಯಾಕಾಶದಲ್ಲಿ ಶಿವ ಲಿಂಗದ ವಿದ್ಯಾ-ಕಲಾ-ಪ್ರಕಾಶದಿಂದೊಪ್ಪುವ ಚಿದಾದಿತ್ಯನ ಮುಸುಕ ಲಾಗಿ ಚಿದಾದಿತ್ಯನಲ್ಲಿ ಅಚ್ಚ ಹೊಸ ಕಿರಣಂಗಳು ಪ್ರಕಾಶವನ್ನೈದಿದವೆಂಬು ದರ್ಥ. ಸೂತ್ರದಿಂ ಪದ್ಮ ಪುಷ್ಪವು ಅರಳಿ ವಾಸನೆಯನ್ನೈದಿತೆಂದಡೆ ಆ ಚಿದಾದಿತ್ಯನ ಕಿರಣಂಗಳ ಪ್ರಕಾಶವು ಹೋಗಿ ಅಧೋ ಮುಖವಾಗಿರ್ದ **ಅಷ್ಟ**ದಳಕಮಲಕ್ಕೆ ತಾಗಲು ಆ ಕಮಲವು ವಿಕಾಸವನ್ನೈದು ಅನೇಕ ರತ್ನ ಸಂಕೀರ್ಣ ಪ್ರಕಾಶವುಳ್ಳದ್ದಾಗಿ ಮೇಲಣ ಚತುರ್ದಳದೊಳಗಿಪ್ಪಪ್ರಾಣಲಿಂ ಗದ ಪರಿಪೂರ್ಣ ಜ್ಞಾನ ಸದ್ವಾಸನೆಯನುಳ್ಳದ್ದಾಗಿ ಒಪ್ಪುತ್ತಿದ್ದಿತೆಂಬು ದರ್ಥ. ಅಂತಪ್ಪ ಸದ್ವಾಸನೆಯ ಕಮಲವನು ತನ್ನ ಶುದ್ಧ, ಸಾತ್ವಿಕ ನಿರ್ಮಲವಪ್ಪ ಮನದಿಂದ ಉನ್ಮನೀ ಚಿತ್ತವೆಂಬ ಹಸ್ತದಲ್ಲಿ ಗ್ರಹಿಸಲು ಆ ಹೃತ್ಕಮಲದೊಳಗಿಪ್ಪ ಪ್ರಾಣಲಿಂಗವೆಂಬುದು ಮೇಲಣ ಶತ ಪತ್ರ ಕಮಲದೊಳು ಮಹಾಲಿಂಗಮಯವಾಗಿ ತೋರುವುದು. ಇದಾಗಿ ಆ ಮಹಾಲಿಂಗಕ್ಕೆ ತನ್ನ ಮಹಾಜ್ಞಾನಾನಂದ ಜಲದಲ್ಲಿ ಮಜ್ಜನಕ್ಕೆರೆದು ಆ ಹೃತ್ಕಮಲ ಪುಷ್ಪದಿಂದ ನಿತ್ಯ ಪೂಜೆಯನು ಅಳವಡಿಸುತ್ತಿರ್ದ ಶರಣ ನೆಂಬುದೀ ವಚನಾರ್ಥ.

ಧ್ಯಾನ, ಮೌನ, ನೇಮ, ನಿತ್ಯ ಚತುರ್ವಿಧವೆಂಬ ।
ಸ್ವಾನುಭಾವದಲಿ ಸನ್ನಿಹಿತನಾಗಿ ।
ಜ್ಞಾನಲಿಂಗಾರ್ಚನೆಯ ಮಾಡಿ ಸುಖಿಯಾಗಿಪ್ಪ ।
ಸ್ವಾನುಭಾವದಲಿ ಸನ್ನಿಹಿತನಾದ ಶರಣ ॥ ೮ ॥

## ಭಾವಾರ್ಥ

ಅಂತರಂಗದಲ್ಲಿಪ್ಪ ತನ್ನ ಶಿವಲಿಂಗ ಸ್ವರೂಪವನ್ನು ನೆನೆವುದೇ ಧ್ಯಾನ; ಆ ಧ್ಯಾನದಲ್ಲಿ ಶಬ್ದ ಮುಗ್ಧವಾಗಿಪ್ಪುದೆ ಮೌನ; ಬಾಹ್ಯ ಲಿಂಗಾ ರ್ಚನೆಯನಂಗೀಕರಿಸುವದೆ ನೇಮ; ತ್ರಿಕಾಲದಲ್ಲಿ ಲಿಂಗಾರ್ಚನೆಯ

ಮಾಳ್ಪುದೇ ನಿತ್ಯ; ತನ್ನ ಮನದೊಳಗೆ ಭಿನ್ನವಿಲ್ಲದೆ ಪ್ರಕಾಶಿಸುವ ಮೂಲಜ್ಞಾನವೇ ಸ್ವಾನುಭಾವ. ಇಂತೀ ಸ್ವಾನುಭಾವ ಜ್ಞಾನವೆಂಬುದು ಧ್ಯಾನ, ಮೌನ, ನಿತ್ಯ, ನೇಮುಗಳೆಂಬ ಮಾರ್ಗ ಕ್ರಿಯೆ ಮೀರಿದ ಕ್ರಿಯೆಗಳಲ್ಲಿ ವೇಧಿಸಿಕೊಂಡು ತಾನೆ ಪ್ರಾಣವೆನಿಸಿ ಅವುಗಳೇ ತನಗೆ ಅಂಗವಾಗಿರುತಿರಲು ಆ ನಾಲ್ಕರ ಸ್ವರೂಪವೆನಿಸಿತೆಂಬುದೀಗ ಧ್ಯಾನ, ಮೌನ, ನೇಮ,ನಿತ್ಯವೆಂಬ ಚತುರ್ವಿಧ ಸ್ವಾನುಭಾವವೆಂಬುದರ್ಥ.ಇಂಥ ಸ್ವಾನುಭಾವವೇ ಜ್ಞಾನವೆಂಬ ಅವಿರಳ ಚಿಚ್ಛಕ್ತಿಪೀಠದಲ್ಲಿ ಚಿತ್ಸುಖಸ್ವರೂಪಿನಿಂದ ಬೆರೆದು ಬೆಳಗುವ ಸ್ವಯಂಜ್ಯೋತಿರ್ಲಿಂಗವೇ ಜ್ಞಾನಲಿಂಗ. ಆ ಲಿಂಗದಲ್ಲಿ ತನ್ನ ಮಹದರಿವು ಸಮರಸವಾಗಿಪ್ಪ ಪೂರ್ಣ ಭಾವವೆ ಮಹಾಜ್ಞಾನ ಪುಷ್ಪದ ಪೂಜೆಯೆಂಬುದು ಸ್ವಾನುಭಾವ ಸನ್ನಿಹಿತ ಜ್ಞಾನಲಿಂಗಾರ್ಚನೆ ಮಾಡಿ ಎಂಬುದಕ್ಕರ್ಥ. ಹೀಗೆ ಸತ್ಕ್ರಿಯಾ ಲಿಂಗದೊಡನೆ ಕೂಡಿದ ಸುಜ್ಞಾನ ಲಿಂಗವನರ್ಚಿಸುವ ಶರಣನು ಅಖಂಡ ಶಿವಾದ್ವೈತ ಜ್ಞಾನ ತತ್ಪರನಾಗಿ ಲಿಂಗಾನಂದ ನಿತ್ಯತೃಪ್ತನಾಗಿರುತಿಪ್ಪನೆಂಬುದು ಸ್ವಾನುಭಾವದಲ್ಲಿ ಸನ್ನಿಹಿತನಾಗಿ ಸುಖಿಯಾಗಿಪ್ಪನೆಂಬ-ದಕ್ಕರ್ಥ. ಶಿವಯೋಗಿಯಾದ ಶರಣನು ಶಿವಭಾವದಿಂದ ಶಿವಸುಖಿಯಾಗಿರುತ್ತಿಹನಲ್ಲದೆ ಕರ್ಮಯೋಗಿಗಳ ಹಾಗೆ ಆತ್ಮಭಾವವಿಡಿದು ಆತ್ಮಸುಖಿಯಾಗಿರುವವನಲ್ಲ ಎಂದು ಅಭಿಪ್ರಾಯ.

ಅಂಗ ಕ್ರಿಯೆ ಲಿಂಗದಲಿ । ಲಿಂಗ ಕ್ರಿಯೆ ಅಂಗದಲಿ ।
ಅಂಗ ಲಿಂಗವೆಂಬುಭಯುವಳಿದು ।
ಸಂಗ ಸಂಯೋಗವಾರಂಗದಲಿ ಮೈ ಮರೆದು ।
ಲಿಂಗ ಸಂಗವೆ ಸಂಗಿಯಾದ ಶರಣ ॥ ೯ ॥

## ಭಾವಾರ್ಥ

ಅಂಗಕ್ರಿಯೆ ಲಿಂಗದಲ್ಲಿ ಎಂದಡೆ ಭಕ್ತಾದಿ ಷಟ್‌ಸ್ಥಲಾಂಗ ಸ್ವರೂಪನಪ್ಪ ಶರಣನಾಚರಿಸುವ ಸದಾಚಾರ ಕ್ರಿಯೆಗಳು ಬೇರೆನಿಸಿ ತೋರದೆ ಆ ಶರಣನ ನಿಜಸ್ವರೂಪಿನಿಂದ ಇಷ್ಟಲಿಂಗದಲ್ಲಿ ಅಡಗಿಹವೆಂಬುದರ್ಥ.

ಇನ್ನು ಲಿಂಗಕ್ರಿಯೆ ಅಂಗದಲ್ಲಿ ಎಂದಡೆ ಆಚಾರಾದಿ ಷಡ್ವಿಧ ಲಿಂಗಸ್ವರೂಪವಪ್ಪ ಇಷ್ಟಲಿಂಗಕ್ಕೆ ಮಾಳ್ಪ ಪೂಜಾ ಕ್ರಿಯೆಗಳು ಬೇರೆನಿಸಿ ತೋರದೆ ಆ ಲಿಂಗದ ನಿಜಸ್ವರೂಪಿನಿಂದ ಶರಣನೊಳಡಗಿಹವೆಂಬುದರ್ಥ. ಅಂಗ ಲಿಂಗವುಭಯವಳಿದು ಎಂದಡೆ ಉಭಯ ಭಾವ ನಿಷ್ಪತ್ತಿಯಾದಲ್ಲಿ ಲಿಂಗಾಂಗವೆರಡೂ ಸಚ್ಚಿದಾನಂದಮಯವಪ್ಪ ಅಖಂಡ ಲಿಂಗಸ್ವರೂಪವನೈದುವವೆಂಬುದರ್ಥ. ಅಂಗವೆಂದಡೆ ಷಡ್ವಿಧ ಲಿಂಗ ಸಂಬಂಧ ಸ್ಥಾನವೆನಿಸುವ ಘ್ರಾಣಾದಿ ಷಡೀಂದ್ರಿಯಂಗಳೆಂಬ ಅರ್ಥ. ಸಂಯೋಗವು ಆ ರಂಗದಲಿ ವೈಮರೆದು ಎಂದಡೆ ಲಿಂಗವನರಿದ ಶರಣನು, ಆ ಶರಣನಿಂದರುಹಿಸಿಕೊಂಬ ಲಿಂಗವು ಎರಡೂ ಒಂದಾಗಿ ಮಹಾಲಿಂಗ ಸ್ವರೂಪವನೈದಲಾಗಿ ಆ ಮಹಾಲಿಂಗದ ಸಮರಸವೆಂತೆನೆ – ಷಡ್ವಿಧ ಚಿದಂಗಳಲಿ ಘ್ರಾಣಾದಿ ಷಡೀಂದ್ರಿಯಗಳು ಮನೋರ್ಲಯದ ದೃಕ್ಕಿರಣವಿಡಿದು ಸಮರಸ ಸಂಯೋಗವನ್ನೈದುವವು. ಲಿಂಗ ಸಂಗವೆ ಸಂಗಿಯಾದ ಶರಣನೆಂದಡೆ ಹೀಗೆ ಚಿದಂಗನಲ್ಲಿ ತನ್ನರಿವರಿತು ಆ ಚಿದಂಗದೊಳಗಿನ ಚಿದ್ಘನಲಿಂಗದೊಳಗೆ ಏಕಾರ್ಥವಾದ ಅವಿರಳ ಸಂಯೋಗವೆಂಬ ಜ್ಞಾನೇಂದ್ರಿಯವಾಗಿರುತ್ತಿಹನು - ಶರಣನು ಎಂಬುದೀ ವಚನಾರ್ಥ.

ಲಿಂಗದೇಹಿಯಾದ ಶರಣನಿಗೆ ತನ್ನ ಮಹಾಲಿಂಗದ ಬೆಳಗಿನೊಳಗೆ ಸಮಸ್ತ ವಸ್ತುವು ಪ್ರಸಾದಮಯವಾಗಿ ಕಾಣುವದರಿಂದ ಆ ಶರಣಂಗೆ ಶಿವಜ್ಞಾನವಲ್ಲದೆ ಜಡವಾದ ವಿಷಯ ರೂಪಂಗಳಾಗಿ ಅರಿವ ಆತ್ಮಜ್ಞಾನವಿಲ್ಲೆಂಬುದು ಈ ಸೂತ್ರದ ತಾತ್ಪರ್ಯಾರ್ಥ.

ಜಾತಿ ಸೀತಿಯನರಿದು ಜಾತಿ ಸೂತಕವಳಿದು ।
ಜಾತಿ ನೀತಿಯೊಳಜಾತನಾದ ।
ಜ್ಯೋತಿ ಪ್ರಭೆಯನೈದು ಪ್ರಜ್ವಲಿಸಿ ಬೆಳಗುವಾ ।
ಜಾತ ಕೂಡಲ ಚೆನ್ನ ಸಂಗಯ್ಯನು ॥ ೧೦ ॥

**ಭಾವಾರ್ಥ**

ಅಜಾತ ಸ್ವಯಂಭು ಲಿಂಗದಿಂದುದಯನಾದ ಶರಣನು ತನಗೆ ಶಿವನಾಶ್ರಯಿಸಿಪ್ಪ ಶಿವಕುಲವೆ ಉತ್ತಮೋತ್ತಮ ಕುಲವೆಂದೂ ಮತ್ತು

ಶಿವಭಕ್ತಿ ಚಾರಿತ್ರವೇ ಪರಮಪಾವನ ಚಾರಿತ್ರವೆಂದರಿದು ಕೈವಿಡಿದು ಬಳಿಕ ಮಾಯಾ ಮಲಿನ ದೇಹಿಗಳಾದ ಬ್ರಾಹ್ಮಣಾದಿ ಜಾತಿ ಭೇದಂಗಳ ಸೂತಕವ ನೀಗಿಬಿಟ್ಟು ತನ್ನ ಶಿವಕುಲ ಶಿವಾಚಾರದಲ್ಲಿ ತತ್ಪರನಾಗಿ ನಿಂದು ಅಲ್ಲಿ ಸದ್ಗುರು ಕಾರುಣ್ಯದಿಂಡ ಪೂರ್ವಜನ್ಮದ ಭಾವವಳಿದು ಪುನರ್ಜಾತನೆನಿಸಿ ಒಪ್ಪುತ್ತಿಹನು. ಇಂತು ಅಜಾತನೆನಿಸಿದ ಶರಣನು ಆವ ತತ್ತ್ವವ ನೈದಿಹನೆಂದಡೆ ಪೃಥ್ವಿಯಾದಿ ಸಕಲ ತತ್ತ್ವಂಗಳ ಮೇಲೆ ಜಗಜ್ಜ್ಯೋತಿಯೆನಿಸಿ ಬೆಳಗುವ ಮಹಾಲಿಂಗದ ಮೂಲ ಪ್ರಭೆಯನ್ನೈದು ಆ ಲಿಂಗದೊಳೈಕ್ಯವಾದನೆಂಬುದೀ ವಚನಾರ್ಥ.

ಇಲ್ಲಿಗೆ ಪ್ರಾಣಲಿಂಗ-ಪೂಜಾ-ವಿಧಾನ-ಸ್ಥಲ ಸಮಾಪ್ತಂ.

## ನವಲಿಂಗ ಪೂಜಾ ಸ್ಥಲ

ಇಂತು ಪ್ರಾಣಲಿಂಗಾರ್ಚನೆಯಂ ಮಾಡಿ ಆ ಲಿಂಗ ಸುಖದಲ್ಲಿ ತೃಪ್ತಿವಡೆದು ಆ ಲಿಂಗದೊಳಗೆ ಐಕ್ಯಸ್ಥಲವ ಕಂಡ ಶರಣನ ನವಚಕ್ರ ದೊಳಗೆ ಆ ಪ್ರಾಣಲಿಂಗವೆಂಬುದು ನವಲಿಂಗಮಯದಿಂದ ಪ್ರಕಾಶಿಸುತ್ತಿರಲು ಆ ನವಲಿಂಗಗಳನು ಅರ್ಚಿಸಿ ಬೆರಸುತ್ತಿರ್ದನಾಗಿ ಮುಂದೆ ನವ ಲಿಂಗ ಪೂಜಾವಿಧಾನ ಸ್ಥಲವಾದುದು.

ಬ್ರಹ್ಮಸೂತ್ರವ ಬಲಿದು ವರ್ಮಾದಿ ವರ್ಮದಲಿ ।
ಕರ್ಮವನು ಹರಿದು ನಿರ್ಮಾಯನಾದೆನು ॥

### ಭಾವಾರ್ಥ

ಬ್ರಹ್ಮಸೂತ್ರವೆಂದಡೆ ಪರಬ್ರಹ್ಮ ಮೊದಲಾದ ಷಡ್ವಿಧ ಬ್ರಹ್ಮವೆನಿಸುವ ಆಚಾರಾದಿ ಷಡ್ವಿಧಲಿಂಗ ಸಂಬಂಧವಪ್ಪ ಜ್ಞಾನಸೂತ್ರಂಗಳೆಂಬುದರ್ಥ. ವರ್ಮಾದಿ ವರ್ಮವೆಂದಡೆ ಪೃಥ್ವಿ ಆದಿ ಷಡ್ವಿಧ ತತ್ತ್ವಂಗಳಲ್ಲಿ ವಿಭಾಗಿಸಿ ಷಡ್ವಿಧ ಲಿಂಗದ ಮುಖದಲ್ಲಿ ನಿವೃತ್ತಿಯ ತಿಳಿಯುವಂಥ ವಿಚಾರಗಳೆಂಬರ್ಥವು. ಬಲಿದು ಎಂದೊಡೆ ಇಂತೀ ತತ್ತ್ವ ವಿಚಾರಗಳಲ್ಲಿ ಆ ಷಡ್ವಿಧ ಲಿಂಗದರಿವಿನ ಸೂತ್ರಗಳು ಹರುಕಿಲ್ಲದಂತೆ ಸುಸ್ಥಿರ ಮಾಡಿದ ನೆಂಬುದರ್ಥ. ಕರ್ಮವನು ಹರಿದು ಎಂದಡೆ ಆ ಷಡ್ವಿಧ ಲಿಂಗದರಿವ

ನಾಶ್ರಯಿಸಿದ ತತ್ತ್ವಗಳು ಆ ಲಿಂಗದಲ್ಲಿ ಅಡಗಲು ಷಡ್ವಿಧ ಲಿಂಗವೇ ಒಡಲಾಯಿತ್ತಾಗಿ ದೇಹಾತ್ಮಗಳ ಸ್ವರೂಪಗಳೆನಿಸುವ ಪುಣ್ಯ ಪಾಪಗಳು ನಷ್ಟವಾಗಿ ಹೋದವೆಂದರ್ಥ. ನಿರ್ವಾಯನಾದೆನೆಂದಡೆ ಸುಖದುಃಖ ರೂಪವಾದ ಕರ್ಮವಳಿದು ಕೂಡಲು ನಾನು ನನ್ನದೆಂಬ ಮೋಹಭ್ರಾಂತಿಯ ಪುಟ್ಟಿಸುವ ಪ್ರಪಂಚ ಮಾಯಾ ಶಕ್ತಿಗೆ ಇರಲೆಡೆಯಿಲ್ಲದೆ ತೊಲಗಿ ಹೋಗಿ ಆ ಶರಣನೇ ನಿರಾಳ ನಿರ್ವಾಯಲಿಂಗವಾಗಿರುತ್ತಿದ್ದನೆಂಬುದರ್ಥ. ಲಿಂಗಪ್ರಾಣಿಯಾಗಿ ಕಾಲಕಲ್ಪಿತವಿಲ್ಲ. ಪ್ರಾಣಲಿಂಗಿಯಾಗಿ ಕರ್ಮ ಲೇಪವಿಲ್ಲವೆಂಬ ತಾತ್ಪರ್ಯ.

ಅಷ್ಟದಳ ಮಂಟಪದ । ಅಷ್ಟ ಕೋಣೆಗಳೊಳಗೆ ।<br>
ಅಷ್ಟ ಲಿಂಗಾರ್ಚನೆಯು ಅಷ್ಟ ಪೂಜೆ ।<br>
ಅಷ್ಟಲಿಂಗಾರ್ಪಿತವು ದೃಷ್ಟ ಪ್ರಸಾದದಿಂ ।<br>
ನಿಷ್ಠೆ ನಿಜದಲಿ ನಿರಂಜನವ ಕಂಡೆ ॥ ೧೧ ॥

## ಶಬ್ದಾರ್ಥ

ಅಷ್ಟದಳ ಮಂಟಪ = ಚತುರ್ದಳ, ಷಡ್‌ದಳ, ದಶದಳ, ದ್ವಾದಶದಳ, ಷೋಡಶದಳ, ದ್ವಿದಳ, ಸಹಸ್ರದಳ, ತ್ರಿದಳಂಗಳನುಳ್ಳ ಎಂಟು ಮಂಟಪಗಳು. ಅಷ್ಟ ಕೋಣೆಗಳು = ಚತುಃಕೋಣೆ, ಧನುರ್ಗತಿ, ತ್ರಿಕೋಣೆ, ಷಟ್‌ಕೋಣೆ, ವೃತ್ತಾಕಾರ, ತಮಂಧಃಕಾರ, ಶೂನ್ಯಾಕಾರ, ಮಹಾ ಶೂನ್ಯಾಕಾರ ಎಂಬ ಎಂಟು ಕೋಣೆಗಳು. ಅಷ್ಟಲಿಂಗಾರ್ಚನೆಯು = ಆಯಾ ಗರ್ಭ ಗೃಹಂಗಳಲ್ಲಿ ನೆಲಸಿರ್ಪ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ನಿಃಕಲಲಿಂಗ, ಶೂನ್ಯಲಿಂಗ. ಇವುಗಳಿಗೆ ಶ್ರದ್ಧೆ, ನಿಷ್ಠೆ, ಸಾವಧಾನ, ಅನುಭಾವ, ಆನಂದ, ಸಮರಸ, ಸ್ವಲೀಲಾನಂದ ಪರಿಪೂರ್ಣವೆಂಬ ಎಂಟು ತರದ ಭಕ್ತಿಗಳೇ ಅಭಿಷೇಕಂಗಳಾಗಿರ್ಪವು. ಅಷ್ಟಪೂಜೆ = ಆಯಾ ದಳಂಗಳೇ ಆಯಾ ಲಿಂಗಗಳಿಗೆ ಪತ್ರಿ ಪುಷ್ಪದ ಪೂಜೆಗಳಾಗಿರ್ಪವು. ಅಷ್ಟಲಿಂಗಾರ್ಪಿತವು = ಗಂಧ, ರಸ, ರೂಪ, ಸ್ಪರ್ಶನ, ಶಬ್ದ, ತೃಪ್ತಿ, ಪರಿಪೂರ್ಣ ತೃಪ್ತಿ ಎಂಬ ಅವಿರಳ ಪದಾರ್ಥ ಮಹಾಜ್ಞಾನವೆಂಬ

ಘನ ಪದಾರ್ಥಂಗಳೇ ಆಯಾ ಲಿಂಗಗಳಿಗೆ ಸಮರ್ಪಣೆಯಾಗಿರ್ಪವು. ದೃಷ್ಟ ಪ್ರಸಾದದಿಂ = ಆಯಾ ಲಿಂಗಗಳ ಮುಖದಿಂದ ಬಂದಂಥ ಗಂಧ ಪ್ರಸಾದ, ರಸ ಪ್ರಸಾದ, ರೂಪು ಪ್ರಸಾದ, ಸ್ಪರ್ಶನ ಪ್ರಸಾದ, ಶಬ್ದ ಪ್ರಸಾದ, ತೃಪ್ತಿ ಪ್ರಸಾದ, ಮಹಾತೃಪ್ತಿ ಪ್ರಸಾದ ಪರಿಪೂರ್ಣತೃಪ್ತಿ ಪ್ರಸಾದವೆಂಬ ಪ್ರತ್ಯಕ್ಷ ಪ್ರಸಾದವನ್ನು ಅನುಭವಿಸಿ.

## ಭಾವಾರ್ಥ

ಆಧಾರಚಕ್ರ ಮೊದಲಾದ ಷಟ್‌ಚಕ್ರಂಗಳನಾಶ್ರಯಿಸಿರ್ಪ ಚತುರ್ದಳ ಮೊದಲಾದ ದಳಂಗಳೇ ಮಂಟಪಂಗಳೆನಿಸಿರುವವು. ಅಷ್ಟಕೋಣೆಗಳೊಳಗೆ ಎಂದಡೆ ಮಾಯಾದಳಂಗಳ ಕುಹರದೊಳಗಿಪ್ಪ ಚತುಃಕೋಣೆ ಮೊದಲಾದ ಲಿಂಗ ನಿವಾಸ ಸ್ಥಲಂಗಳೇ ಗರ್ಭಗೃಹಂಗಳೆನಿಸಿರುವವು. ಇಂತು ಆಯಾ ಗರ್ಭಗೃಹಂಗಳಲ್ಲಿ ನೆಲಸಿರ್ಪ ಲಿಂಗಾಂಗಗಳೊಳಗೆ ಶ್ರದ್ಧೆ ನಿಷ್ಠೆ ಮೊದಲಾದ ಅಷ್ಟವಿಧ ಭಕ್ತಿಗಳು ಸಮರಸವನೈದಿಪ್ಪ ಶಿವಾನಂದ ಜಲಗಳೇ ಆಯಾ ಲಿಂಗಗಳಿಗೆ ಅಭಿಷೇಕಂಗಳೆನಿಸಿರುವವು. ಮತ್ತಂ ಆ ಭಕ್ತಿ ಭಾವಂಗಳು ಸದ್ವಾಸನಾ ಪುಷ್ಪದ ಪೂಜೆಗಳೆಂದೆನಿಸುವವು. ಇಂತು ಆಚಾರಾದಿ ಷಡ್ವಿಧಲಿಂಗಕ್ಕೆ ಘ್ರಾಣಾದಿ ಷಡೀಂದ್ರಿಯ ಮುಖದಲ್ಲಿ ಸುಗಂಧಾದಿ ಷಡ್ವಿಧ ಪದಾರ್ಥಂಗಳು, ಮೇಲಣ ನಿಃಕಲ ಲಿಂಗಕ್ಕೆ ಉನ್ಮನಿಯ ಮುಖದಲ್ಲಿ ಮಹಾತೃಪ್ತಿಯೆಂಬ ಅವಿರಳ ಪದಾರ್ಥಂಗಳು, ಮಹಾಶೂನ್ಯಲಿಂಗಕ್ಕೆ ಉನ್ಮನಿಯ ನೆನಹಿನ ಅಗ್ರದ ಜ್ಯೋತಿಯ ಮುಖದಲ್ಲಿ ಮಹಾಜ್ಞಾನವೆಂಬ ಘನ ಪದಾರ್ಥ ಸಮರ್ಪಿತವು. ಇಂತು ಆಯಾ ಲಿಂಗ ಮುಖದಿಂದ ತನಗೆ ಪ್ರತ್ಯಕ್ಷವಾಗಿ ಬಂದಂಥ ಅಷ್ಟ ಪ್ರಸಾದಂಗಳ ಸ್ವೀಕಾರ ಸಂಬಂಧದಿಂದ ತನ್ನ ಸದ್ಭಾವದಲ್ಲಿ ನಿರಂಜನ ಜಂಗಮವೆಂಬ ನಿರಾಳ ಪರಶಿವನ ಪ್ರಸಾದ ಸುಖಮಯದಿಂದ ಕಂಡು ಸಾಧ್ಯವ ಮಾಡಿಕೊಂಡನೆಂಬುದರ್ಥ.

ಶಿವನಿಗೆ ಸಂಬಂಧವಾದ ಆತ್ಮ ಪ್ರಸಾದವನರ್ಪಿಸಿ ಪ್ರಸಾದವ ಪಡೆದ ಶರಣಂಗೆ ಜನಕನಪ್ಪ ಪರಶಿವನು ಸಾಧ್ಯನಹನಲ್ಲದೆ ಆತ್ಮಾರ್ಪಿತವಿಲ್ಲದ ಬಹುಮುಖಿಗಳಿಗೆ ಇದು ಅಸಾಧ್ಯವೆಂದು ತಾತ್ಪರ್ಯ.

ನವಸೂತ್ರ ಪಟ್ಟಣದ । ನವದ್ವಾರ ಬೀದಿಯೊಳು ।
ನವನಾಳ ಬಾಗಿಲಿಗೆ ನವ ಕಳಶವು ।
ನವಲಿಂಗ ಸ್ಥಾವರಕೆ ನವಪೂಜೆ ನವಧೂಪ ।
ನವದೀಪ ನವಮಂತ್ರ ನವಜಪ ನಮೋ ನಮೋ
ಎನುತಿರ್ದೆನು ॥ ೧೨ ॥

## ಭಾವಾರ್ಥ

ನವಸೂತ್ರ ಪಟ್ಟಣ ಎಂದಡೆ ಪ್ರಾಣವಾಯು ಇದು ಪ್ರಾಣಲಿಂಗ ಸಂಬಂಧವಾಗಿರುತಿರಲು ಆ ಪ್ರಾಣಲಿಂಗ ಚೈತನ್ಯವಿಡಿದಿಪ್ಪ ಅಪಾನಾದಿ ವಾಯುಗಳು ಈಡಾ ಪಿಂಗಳಾದಿ ನವದ್ವಾರಗಳಲ್ಲಿ ಸಂಚಲ ಗುಣವಿಲ್ಲದೆ ಇರುವದರಿಂದ ಅವು ಸೂತ್ರಗಳೆನಿಸಿದವೆಂದರ್ಥ. ನವದ್ವಾರ ಬೀದಿಯೆಂದಡೆ ಆ ಈಡಾದಿ ನವದ್ವಾರಗಳು ಪ್ರಾಣಲಿಂಗ ಸೇವಕರಪ್ಪ ಶರಣ ಜನಂಗಳ ಎಡೆಯಾಟಕ್ಕೆ ಬೀದಿಗಳೆನಿಸಿದವೆಂದರ್ಥ. ನವನಾಳ ಬಾಗಿಲೆಂದಡೆ ಆ ನವದ್ವಾರಗಳ ಪೂರ್ವಮುಖ ಸ್ಥಾನಂಗಳೇ ಬಾಗಿಲವಾಡಂಗಳೆನಿಸಿದವೆಂದರ್ಥ. ನವಕಳಶಗಳೆಂದಡೆ ಆ ಪ್ರಾಣಲಿಂಗ ಪರಿಪೂರ್ಣ ಪ್ರಕಾಶವೆಂಬುದು ನವದ್ವಾರಂಗಳೊಳಗೆ ತುಂಬಿಕೊಂಡು ಹೊರಸೂಸಿ ಬೆಳಗುತಿರಲು ಆಯಾ ನಾಡಿಸ್ಥಾನದ ಮೇಲಣ ಬೆಳಗುಗಳೇ ಕಳಶಂಗಳೆಂದರ್ಥ. ಇಂತೀ ಕಳಶಂಗಳುಳ್ಳ ಪಟ್ಟಣವೆಂದಡೆ ಇಂತೀ ಕ್ರಮವಿಡಿದು ಶಿವಮಂತ್ರ ಕಾಯವೆಂಬ ಶಿವಪುರವು, ಶಿವಜ್ಞಾನಿಗಳಿಗೆ ಮಂಗಲಮಯವಾಗಿ ಒಪ್ಪುತ್ತಿಹುದೆಂದರ್ಥ. ಅಲ್ಲಿಯ ನವಲಿಂಗ ಸ್ಥಾವರಕೆ ನವಚಕ್ರ ಸ್ಥಾನಗಳಲ್ಲಿ ನೆಲಸಿರ್ಪ ನವಲಿಂಗಗಳಿಗೆ ಆಯಾ ಲಿಂಗದಲ್ಲಿ ತೋರುವ ಸಮರಸ ಭಾವಂಗಳೇ ಪುಷ್ಪದ ಪೂಜೆಗಳೆನಿಸುವುದು. ನವಧೂಪವೆಂದಡೆ ಆಯಾ ಲಿಂಗವನವಲಂಬಿಸಿರುವ ಪ್ರತಿ ಪ್ರೇಮ ಪ್ರಕಾಶಂಗಳೇ ಆರತಿಗಳೆನಿಸಿದವೆಂಬರ್ಥ. ನವಮಂತ್ರವೆಂದಡೆ ನಕಾರಾದಿ ಪಂಚಾಕ್ಷರಂಗಳು. ಅ ಪಂಚಾಕ್ಷರಂಗಳನೊಳಗೊಂಡಿಪ್ಪ ಮೂಲ ಪ್ರಣವ ಕೇವಲ ಸುನಾದಮಯವಪ್ಪ ನಿಷ್ಕಲ ಓಂಕಾರ ಚಿದ್ಬಿಂದು ಸ್ವರೂಪವಾದ ಪರಿಪೂರ್ಣ ಶಿವಾಕ್ಷರವೆನಿಸುವ ಆಕಾರವೆಂಬ ಒಂಬತ್ತು ವರ್ಣಂಗಳು, ನವಲಿಂಗ ನೆನ

ಹಿಗೆ ನವಮಂತ್ರ*ಗಳಾದವೆಂಬುದರ್ಥ. ನವಜಪ ನಮೋನಮೋ ಎಂದಡೆ 'ನಕಾರ ಮಂತ್ರಮೂರ್ತಯೇ ನಮಃ' ಇಂತಹ ನಕಾರ ಮಂತ್ರ ಸ್ವರೂಪಿನಿಂದ ಆಚಾರ ಲಿಂಗವ ಧ್ಯಾನಿಸಿ ನೆನೆವುದೇ ಜಪ. ನಮಃ ಎಂಬ ವಾಕ್ಯವೇ ಆಯಾ ಲಿಂಗದೊಡನೆ ಕೂಡಿದ ನಮಸ್ಕಾರವೆನಿಸುವದು. ಹೀಗೆ ಆಯಾ ಮಂತ್ರಗಳ ನೆನೆವುದೇ ಜಪ. ನಮಃ ಎಂಬ ವಾಕ್ಯಂಗಳೇ ನಮಸ್ಕಾರಗಳಾಗಿ ಪರಿಣಮಿಸುವವು ಎಂದರ್ಥ.

**ತಾತ್ಪರ್ಯ**— ಏಕಲಿಂಗ ವ್ರತಸ್ಥ ವೀರಮಹೇಶ್ವರನು ತನ್ನ ಲಿಂಗದೊಳಗೆ ಸಕಲ ತೀರ್ಥ ಕ್ಷೇತ್ರಗಳನಡಗಿಸಿಕೊಂಡು ಲಿಂಗದೊಡನೆ ಪೂಜಿಸಿ ಏಕ ಭಾವದಿಂದ ಪ್ರಸಾದವ ಪಡೆದು ಅವಿರಳ ಲಿಂಗೈಕ್ಯನಾಗುವನಲ್ಲದೆ ಸ್ಥಾವರಲಿಂಗ ಭಜನೆಯ ಮಾಡಿ ಬಹು ಪ್ರಸಾದವನುಂಡು ಭಿನ್ನಪದವನೈದುವವನಲ್ಲವೆಂದರ್ಥ.

ಆರು ನೆಲೆ ಮಂಟಪದ । ಮೂರು ಕೋಣೆಗಳೊಳಗೆ ।
ಬೇರೊಂದು ಸ್ಥಾನದಲಿ ಲಿಂಗವಿಹುದು ।
ಆರು ನೆಲೆಯನು ದಾಂಟಿ ಮೂರು ಬಾಗಿಲ ಮುಚ್ಚಿ ।
ಮೀರಿ ಕಂಡೆನು ಮಹಾ ಘನಲಿಂಗವ ॥ ೧೩ ॥

## ಭಾವಾರ್ಥ

ಆರು ನೆಲೆಯ ಮಂಟಪವೆಂದಡೆ ಷಡಾಧಾರ ಚಕ್ರಂಗಳು. ಆ ಅಂತರದಮೇಲೆ ಉಭಯ ದಳವೆಂಬ ಮಂಟಪವಿಹುದು. ಮೂರು ಕೋಣೆಗಳೊಳಗೆ ಎಂದಡೆ ಈಡಾ, ಪಿಂಗಳ, ಸುಷುಮ್ನಗಳು ಕೂಡಿದಲ್ಲಿ ತ್ರಿಕೋಣಾಕಾರದ ಸ್ಥಾನವಿಹುದು. ಬೇರೊಂದು ಸ್ಥಾನವೆಂದಡೆ ಇವೆರಡೂ ಸ್ಥಾನಗಳಿಗೆ ಮೇಲಾಗಿ ಬ್ರಹ್ಮರಂಧ್ರವೆಂಬ ಶಿವತತ್ತ್ವ ಸ್ಥಾನವುಂಟು. ಅಲ್ಲಿ ಲಿಂಗವಿಹುದು ಎಂದಡೆ ಆತ್ಮಯೋಗಿಗಳು ಆಧಾರಾದಿ ಆರು ಚಕ್ರಂಗಳಲ್ಲಿ ಧ್ಯಾನಿಸುವ ಪಂಚಅಧಿದೇವತೆಗಳಿಗೆ ಮತ್ತು ಉಭಯ

* ನವಮಂತ್ರ= ನಕಾರ, ಮಕಾರ, ಶಿಕಾರ, ವಕಾರ, ಯಕಾರ, ಓಂಕಾರ, ಒಕಾರ, ರಕಾರ, ಹಕಾರಗಳೆಂಬ ಮಂತ್ರಗಳು.

ದಳದಲ್ಲಿ ಸಾಧಿಸುವ ಜೀವ ಪರಮರ ಯೋಗಕ್ಕೆ ಮತ್ತು ತ್ರಿಕೋಣೆಯ ಸ್ಥಾನದಲ್ಲಿ ಸಾಧಿಸುವ ರಕ್ಷಣಕ್ಕೆ ಮೂಲವಾಗಿಹುದೇ ಮಹಾ ಲಿಂಗವೆನಿಸುವದು. ಇಂತಹ ಮಹಾ ಲಿಂಗವು ಬ್ರಹ್ಮರಂಧ್ರದ ಸಹಸ್ರದಳ ಕಮಲದೊಳಗೆ, ಸಚ್ಚಿದಾನಂದ, ನಿತ್ಯಪರಿಪೂರ್ಣವೆಂಬ ಪಂಚಾಕ್ಷರಿ ಸ್ವರೂಪಿನಿಂದ ಪ್ರಕಾಶಿಸುತ್ತಿಹುದು. ಆರು ನೆಲೆಯನು ದಾಂಟಿ ಮೂರು ಬಾಗಿಲ ಮುಚ್ಚಿಯೆಂದಡೆ ಷಡಾಧಾರ ಚಕ್ರಂಗಳ ಅಭ್ಯಾಸಯೋಗದೊಳಗೆ ಸಿಕ್ಕದೆ, ಅಲ್ಲಿಂದ ಮೇಲೆ ಪಶ್ಚಿಮ ದ್ವಾರದಲ್ಲಿನಿಂದು, ರೇಚಕ, ಪೂರಕ, ಕುಂಭಕಸ್ವರಂಗಳ ಅಕ್ಷರತ್ರಯ ಸಂಬಂಧದಿಂದ ಓಂಕಾರದೊಳಗೆ ತಡೆದು ನಿಲ್ಲಿಸಿದನೆಂಬುದರ್ಥ. ಮೀರಿ ಕಂಡೆನು ಮಹಾ ಘನಲಿಂಗವನೆಂದಡೆ ಆ ಬಿಂದುಸ್ವರೂಪವಪ್ಪ ಓಂಕಾರ ನಾದಘೋಷದ ಪರಿಣಾಮದಲ್ಲಿ, ತೃಪ್ತಿಯನೈದು ನಿಲ್ಲದೆ ಆ ನಾದದ ತುಟ್ಟತುದಿಯ ಸೂಕ್ಷ್ಮ ಜ್ಯೋತಿರ್ಲಿಂಗವೆಂಬ ಮಹಾ ಘನಲಿಂಗವೇ ತನ್ನ ಮುಕ್ತಿಪದ ಸ್ಥಾನನೆಂದರಿದು, ತನ್ನ ಮೂಲ ಜ್ಞಾನದೃಷ್ಟಿಯಿಂದ ನಿಶ್ಚಯಿಸಿದನೆಂಬುದರ್ಥ.

**ತಾತ್ಪರ್ಯ:**–ಇಂದ್ರಾದಿ ದೇವತೆಗಳು ಮಹೇಶ್ವರ ತತ್ತ್ವವನರಿಯರು. ಆತ್ಮಯೋಗಿಗಳು ಸದಾಶಿವ ತತ್ತ್ವವನರಿಯರು. ಶಿವಶರಣರೇ ನಿರ್ಮಾಯ, ನಿಷ್ಕಲ ಶಿವತತ್ತ್ವವನರಿದು ಕೂಡುತಿಹರೆಂದು ತಾತ್ಪರ್ಯ.

ಆಕಾಶದ ಮೇಲೆ ನಿರಂತರ ಸ್ಥಾನದಲಿ ।
ಲೋಕವನು ಹೊದ್ದದ ಶಿವ ನಿಳಯವು ।
ಏಕಾಂತವಾಸದೊಳಗೆ ಏಕೀಕರನ ಪೂಜೆ ।
ಓಂಕಾರ ಮಂತ್ರದಲಿ ಗೋಪ್ಯ ಗೋಪ್ಯ ॥ ೧೪ ॥

## ಭಾವಾರ್ಥ

ಪ್ರಾಣವಾಯುವಿನ ಶಬ್ದ ಸಂಚಲನಕ್ಕೆ ಅವಕಾಶವೆನಿಸಿದ ಸುಷುಮ್ನಾ ದ್ವಾರಾಗ್ರದಲ್ಲಿ ಶಿವತತ್ತ್ವ ಸ್ಥಾನವೆಂಬ ಬ್ರಹ್ಮರಂಧ್ರವಿಹುದು. ಅಲ್ಲಿ ಮಾಯಾ ಪ್ರಪಂಚಕ್ಕತೀತವಾದ ಶತದಳ ಕಮಲವೆಂಬದೊಂದು ಶಿವಲೋಕವಿಹುದೆಂಬುದು ಆಕಾಶದ ಮೇಲೆ ನಿರಂತರ ಸ್ಥಾನದಲಿ ಲೋ

ಕವನು ಹೊದ್ದದ ಶಿವನಿಳಯುಕ್ಕರ್ಥ. ಏಕಾಂತವಾಸವೆಂದಡೆ ಆ ಶತದಳ ಕಮಲ ಕುಹರದೊಳಗೆ ಅಹುದಲ್ಲವೆಂಬ ಶಬ್ದಜಾಲಂಗಳ ಉಲುಹು ಇಲ್ಲವಾಗಿ ಅದು ಏಕಾಂತವಾಸದರ್ಥ. ಅಲ್ಲಿ ಏಕೀಕರನ ಪೂಜೆ ಓಂಕಾರ ಮಂತ್ರದಲಿ ಎಂದಡೆ ಪಂಚಕಲೆಗಳ ತೋರಿಕೆಯಿಲ್ಲದೆ ಕೇವಲ ನಿಃಕಲ ಸ್ವರೂಪವಾಗಿರ್ಪ ಓಂಕಾರ ಮಂತ್ರದಲಿ ಪರಮಾನಂದ ಮಯದಿಂದ ಸಮರಸವಾಗಿದ್ದಂಥ ನಿಷ್ಕಲ ಲಿಂಗಕ್ಕೆ ಆ ಪರಮಾನಂದದೊಳಗೆ ಬೆರಸಿದ ನಿಜೈಕ್ಯ ಉನ್ಮನಿಯ ನೆನಹೆ ಅವಿರಳ ನಿತ್ಯ ಪೂಜೆಯೆನಿಸಿತೆಂಬರ್ಥ. ಗೋಪ್ಯ ಗೋಪ್ಯವೆಂದಡೆ ಇಂತೀ ಸಮರಸ ಭಾವದ ಪೂಜೆಯು ಲಿಂಗ ಸಂಗಿಗಳಿಗಲ್ಲದೆ ಅಂಗಸಂಗಿಗಳಿಗೆ ಅಗೋಚರವೆಂಬುದರ್ಥ.

ಜಂತ್ರ ಸೂತ್ರದ ತೆರದಿ ನಿ । ರಂತರದ ನಿಜವಿಡಿದು ।
ಮಂತ್ರ ಭೇದವನರಿದು ಸಂತೈಸುತ ನಿ ।
ಶ್ಚಿಂತ ನಿರ್ಜಾತ ನಿರ್ವಯಲನೈದಿದ ಮ ।
ಹಂತ ಕೂಡಲ ಚೆನ್ನ ಸಂಗಯ್ಯನು ॥ ೧೫ ॥

## ಭಾವಾರ್ಥ

ಜಂತ್ರ ಸೂತ್ರದ ತೆರದಿ ನಿರಂತರ ನಿಜವಿಡಿದು ಎಂದಡೆ ಜಂತ್ರದ ಬೊಂಬೆಯೊಳಗಣ ಜೀವಾಳದ ಸೂತ್ರವೆಂಬುದು ಸೂತ್ರಿಕನ ಕೈಯಲ್ಲಿರುವ ಹಾಗೆ ತನುತ್ರಯದೊಳು ವೇಧಿಸಿಕೊಂಡಿಪ್ಪ ಜೀವಚೈತನ್ಯದ ಸೂತ್ರಗಳು ದ್ವೈತಭಾವದಿಂದ ಹರುಕಾಗದೆ ನಿಜವೆಂಬ ಶಬ್ದವನ್ನುಳ್ಳ ತನ್ನ ಲಿಂಗತ್ರಯುವನಾಶ್ರಯಿಸಿಕೊಂಡಿಹವೆಂಬುದರ್ಥ. ಮಂತ್ರಭೇದವನರಿದು ಸಂತೈಸುತ ಎಂದಡೆ ಆ ತನುತ್ರಯ ಸಂಬಧವಾದ ತತ್ ಕರಣಂಗಳು ಪಂಚಾಕ್ಷರ ಸಂಬಂಧದಿಂದ ಆ ತ್ರಿವಿಧ ಲಿಂಗವನೊಳಕೊಂಡು ಬೆಳಗುವ ಮಹಾ ಲಿಂಗದಲ್ಲಿ ವಿಶ್ರಾಂತಿಯನೈದಿಹವೆಂಬುದರ್ಥ. ನಿಶ್ಚಿಂತನೆಂದಡೆ ಚಿತ್ತ ವಿಶ್ರಾಂತಿಯಲ್ಲಿ ಸಂಕಲ್ಪ ವಿಕಲ್ಪಂಗಳ ವ್ಯಾಕುಲವಿಲ್ಲದಿಹುದೆಂಬುದರ್ಥ. ನಿರ್ಜಾತನೆಂದಡೆ ಮನೋವ್ಯಾಕುಲವಿಲ್ಲವಾಗಿ ಜೀವಭಾವದ ಮರವೆಯಿಂದ ಹುಟ್ಟುವ ಜನಾಂಕುರವು ನಾಶವಾಗಿರುವದು. ನಿರ್ವಯಲ ನೈದಿದ ಮಹಂತ ಚೆನ್ನ ಸಂಗಯ್ಯನೆಂದಡೆ ಹೀಗೆ ಸಕಲ ಪ್ರಪಂ

ಚವ ದಾಂಟಿ ತುಟ್ಟತುದಿಯ ನಿಜಲಿಂಗವನೊಡಗೂಡಿದ ಲಿಂಗೈಕ್ಯನು, ಬಯಲು ಬಯಲನ್ನು ಬೆರಸಿದಂತೆ ಆ ಲಿಂಗದಲ್ಲಿ ಸ್ವಯಂ ಸ್ವಯವಾಗಿ ಹನೆಂಬುದರ್ಥ.

ಇಲ್ಲಿಗೆ ನವ-ಲಿಂಗ-ಪೂಜಾವಿಧಾನ ಸ್ಥಲವು ಸಮಾಪ್ತಂ.

## ಪರತತ್ತ್ವ ಲಿಂಗ ಪ್ರಕಾಶ ಸ್ಥಲ

ಇಂತು ಪ್ರಸನ್ನ ಪ್ರಸಾದದಿಂದ ಶಿವಸ್ವರೂಪನಾಗಿ, ನವ ಲಿಂಗಾರ್ಚನೆಯ ಮಾಡಿ ಮತ್ತಾ ನವ ಲಿಂಗದೇಕಸ್ವರೂಪವಪ್ಪ ಪರತತ್ತ್ವಲಿಂಗವನರಿದರ್ಚಿಸಿ ಮನೋಲಯವನೈದಿದ ಶರಣನ ಮೂಲಜ್ಞಾನದರಿವು ಆ ಲಿಂಗದ ಮಹದರವಿನೊಳಡಗಿ ಜಲಬಿಂದುವನು ನುಂಗಿದ ಅರುಣ ಕಿರಣದಂತೆ ಹೊರಗೊಳಗೆ ಲಿಂಗದ ದಿವ್ಯ ಪ್ರಕಾಶವೇ ತೋರುತಿರಲು ಮುಂದೆ ಪರತತ್ತ್ವ–ಲಿಂಗ–ಪ್ರಕಾಶ–ಸ್ಥಲವಾದುದು.

ಪುಷ್ಪ ಪರಿಮಳ ನುಂಗಿ ನಿಷ್ಪತ್ತಿಯು ಕರಿಗೊಂಡು ।
ಕರ್ಪುರವನಪ್ಪಿದುರಿಯಂತಾದೆನು ॥

### ಭಾವಾರ್ಥ

ಸತ್ಕ್ರಿಯಾ ಪ್ರಕಾಶ ಸ್ವರೂಪವಾದ ಇಷ್ಟಲಿಂಗವು ತನ್ನೊಳಗೆ ಸುಜ್ಞಾನ ಸದ್ಭಾವನಾಮಯವಪ್ಪ ಶರಣನಡಗಿಸಿಕೊಳಲು ಆ ಲಿಂಗದಲ್ಲಿ ಕ್ರಿಯಾ ಜ್ಞಾನ ಭಾವಗಳು ತರಹರವಾಗಿನಿಂದಬಳಿಕ ಉರಿಕರ್ಪುರವೆರಡು ಬಯಲಾದ ಹಾಗೆ ಲಿಂಗಾಂಗವೆರಡು ನಿಜ ಸಮಾಧಿಯನೊಡಗೂಡಿದ ವೆಂಬದೀ ವಚನದರ್ಥ.

ಬಯಲು ಭಾನುವ ನುಂಗಿ । ನಿಲವು ನೆಳಲನೆ ನುಂಗಿ ।
ಚಳಿಗಾಳಿ ಬಿಸಿಲ ನುಂಗಿದತೆರದೊಳು ।
ಮಳೆ ಮೋಡವನು ಮಿಂಚು ನುಂಗಿದಂದದೊಳಿಪ್ಪ ।
ಥಳಥಳನೆ ಹೊಳೆಯುತಿಹ ವಜ್ರದಂತೆ ॥ ೧೬ ॥

## ಭಾವಾರ್ಥ

ಬಯಲು ಭಾನುವ ನುಂಗಿ ಎಂಬಡೆ ಆಕಾಶವು ಸೂರ್ಯನ ಬೆಳಗನೊಳಕೊಂಡು ತೋರುವಂತೆ ಚಿದಾಕಾಶಮಯ ಲಿಂಗವು ಚಿತ್ಪ್ರಕಾಶಸ್ವರೂಪನಾದ ಶರಣನೊಳಕೊಂಡು ಪ್ರಕಾಶಿಸುತ್ತಿಹುದು ಎಂದರ್ಥ. ನಿಲವು ನೆಳಲನೆ ನುಂಗಿ ಎಂದಡೆ ತನುವಿನ ನೆಳಲ ಆ ತನುವು ಒಳಕೊಂಡು ತೋರುವ ಹಾಗೆ ಷಡಕ್ಷರ ಮಂತ್ರಮೂರ್ತಿ ಶಿವಲಿಂಗವು ತನ್ನ ಪರಮ ಶಾಂತಿಸ್ವರೂಪ ಸದ್ಭಕ್ತನನ್ನೊಳಕೊಂಡು ಪ್ರಕಾಶಿಸುತ್ತಿಹುದೆಂಬುದರ್ಥ. ಚಳಿಗಾಳಿ ಬಿಸಿಲ ನುಂಗಿದ ತೆರದೊಳು ಎಂದಡೆ ಶೀತಮಯ ಗಾಳಿಯು ಬಿಸಿಲನೊಳಕೊಂಡು ತೋರುವಂತೆ ಪ್ರಣವನಾದಘೋಷವನ್ನುಳ್ಳ ಪ್ರಾಣಲಿಂಗವು ಆ ನಾದಚೈತನ್ಯ ಪ್ರಾಣಲಿಂಗಿಯನೊಳಕೊಂಡು ಪ್ರಕಾಶಿಸುತ್ತಿಹುದೆಂದರ್ಥ. ಮಳೆ ಮೋಡವನು ಮಿಂಚು ನುಂಗಿದಂದದೊಳಿಪ್ಪ ಎಂದಡೆ ಕಾರ್ಮುಗಿಲೊಳಗಿಪ್ಪ ಮಿಂಚು ಆ ಮುಗಿಲನಾವರಿಸಿಕೊಂಡು ಬೆಳಗುವಂತೆ ಶಿವಾನಂದ ಜಲಮಯ ತನುವಿನೊಳಗಿನ ಚಿದಗ್ನಿಲಿಂಗವು ಶರಣನ ಸರ್ವಾಂಗವನೊಳಕೊಂಡು ಪ್ರಕಾಶಿಸುತ್ತಿಹುದೆಂಬುದರ್ಥ. ಥಳಥಳನೆ ಹೊಳೆವುತಿಹ ವಜ್ರದಂತೆ ಎಂದಡೆ ಎರಡಾಗಿ ವಿಭಾಗಿಸಲು ಬಾರದಂಥ ವಜ್ರದಂತೆ ಲಿಂಗಾಂಗವೆರಡು ಸಚ್ಚಿದಾನಂದದ ಘಟ್ಟಿಸ್ವರೂಪವನ್ನೈದು ಅದು ವಾಙ್ಮನಂಗಳಿಗೆ ಅಭೇದ್ಯವಾಗಿದ್ದು ಘನವಾಗಿಹುದೆಂಬುದರ್ಥ. ಮಾಡುವ ಸತ್ಕ್ರಿಯೆಯಲಿ ಶಿವಭಾವ ನಿಂದು ಶಿವನೊಳಗೆ ತನ್ನ ಮನಸಂದು ಇರುತಿರಲು ಅಭೇದವಲ್ಲದೆ ಭೇದವಿಲ್ಲೆಂಬುದರ್ಥ.

ಶಶಿ ಸಾಗರವ ನುಂಗಿ । ಶಿಶು ಗರ್ಭವ ನುಂಗಿ ।
ಪಶು ಬಸವನ ನುಂಗಿದಾ ತೆರನೊಳು ।
ಮಸೆದ ಕೂರಲಗು ಮೊನೆ ವಜ್ರದಂದದೊಳಿಪ್ಪ ।
ಪಸರಿಸಿತು ಶಿವಲಿಂಗ ಹೃದಯದೊಳಗೆ ॥ ೧೭ ॥

## ಭಾವಾರ್ಥ

ಶಶಿ ಸಾಗರವ ನುಂಗಿ ಎಂದಡೆ ಚಂದ್ರನ ಬೆಳಕು ಕ್ಷೀರಸಮುದ್ರವ ನೊಳಕೊಂಡು ತೋರುವ ಹಾಗೆ ಮಹಾಲಿಂಗದ ಚಿದಮೃತ ಕಿರಣದ ಬೆಳಗು ಪರಮಾನಂದ ರಸಾಬ್ಧಿಮಯವಾಗಿಪ್ಪ ಶರಣನೊಳಕೊಂಡು ಪ್ರಕಾಶಿಸುತ್ತಿಹುದೆಂಬುದರ್ಥ. ಶಿಶು ಗರ್ಭವ ನುಂಗಿ ಎಂದಡೆ ಒಳಗಿರ್ದ ಶಿಶುವು ತಾಯಗರ್ಭವ ತಾನೊಳಕೊಂಡು ಹೊರಗೆ ತನ್ನ ಕುರುಹ ತೋರುವ ಹಾಗೆ, ಅಂತರಂಗದೊಳಗೆ ಭರಿತವಾಗಿಪ್ಪ ಪ್ರಾಣಲಿಂಗವು ಬಹಿರಂಗದಲಿ ಸದಾಚಾರದ ಬೆಳಗಿನಿಂದ ತನ್ನ ಕುರುಹನೆ ಪ್ರಕಾಶಿಸುತ್ತಿಹುದೆಂಬುದರ್ಥ. ಪಶು ಬಸವನ ನುಂಗಿದತೆರದೊಳೆಂದಡೆ, ಉತ್ತಮ ಪಶು(ಆಕಳ)ವಿನ ಅಂಗದಲ್ಲಿ ಬಸವನ ಸಂಸ್ಕಾರ ಬಂಧವು ಅಳವಡಲು, ಪಶುಭಾವವಳಿದು ಬಸವನಾಕಾರ ಮಾತ್ರವೇ ತೋರುವ ಹಾಗೆ, ಶಿವಸಂಸ್ಕಾರಿಯಾದ ಆತ್ಮನ ಬಹಿರಂಗದ ಮೇಲೆ ಶಿವಲಿಂಗ ಸಂಬಂಧವಾಗಿರಲು ಆ ಆತ್ಮನ ಅಂಗಭಾವವಳಿದು ಶಿವಲಿಂಗಾಕಾರವೆ ಪ್ರಕಾಶಿಸುತಿಹುದೆಂಬುದರ್ಥ. ಮಸೆದ ಕೂರಲಗು ಮೊನೆ ವಜ್ರದಂಡದೊಳಿರ್ಪವೆಂದಡೆ, ಹದನವಾದ ಅಲಗು, ಅದರ ಮೊನೆ, ಹಿಡಿ–ಎಂಬೀ ಮೂರು ಕೂಡಿ ಒಂದೇ ಸ್ವರೂಪವಾಗಿ ತೋರುವ ಹಾಗೆ ಅಂಗದಲ್ಲಿ ಲಿಂಗಸಂಬಧವಾಗಿ ಲಿಂಗದಲ್ಲಿ ಪ್ರಾಣಲಿಂಗ, ಭಾವಲಿಂಗ ಸಂಬಂಧವಾಗಿ ಒಂದು ಲಿಂಗವೇ ಮೂರು ಸ್ವರೂಪಿನಿಂದ ವಜ್ರದಂತೆ ಒಂದಾಗಿ ಪ್ರಕಾಶಿಸುತ್ತಿಹುದೆಂಬುದರ್ಥ. ಪಸರಿಸಿತು ಶಿವಲಿಂಗ ಹೃದಯದೊಳಗೆ ಎಂದಡೆ ಹೀಗೆ ಸರ್ವಾಂಗವನೊಳಕೊಂಡು ಪ್ರಕಾಶಿಸುತ್ತಿರುವ ಮಹಾ ಘನಲಿಂಗವೆಂಬುದು ಮಹಾಕಾಶದೊಳು ತೋರುವ ಸೂರ್ಯನ ಬೆಳಗಿನ ಹಾಗೆ ಹೃದಯಾಕಾಶದಲ್ಲಿ ಭರಿತವಾಗಿ ಬೆಳಗುವದೆಂಬರ್ಥ. ಲಿಂಗದೊಳಗೆ ಮನೋ ದೃಷ್ಟಿ ವೇದಿಸಿ ಆ ಮನದೊಳಗೆ ಲಿಂಗ ವೇದಿಸಿ ಇರುತ್ತಿರಲು ಒಳಹೊರಗೆ ಲಿಂಗವೇ ಬೆಳಗುತ್ತಿಹುದೆಂಬುದರ್ಥ.

ಅಪ್ಪು ಅಗ್ನಿಯ ನುಂಗಿ । ಉಪ್ಪು ಉದಕವ ನುಂಗಿ ।
ಹೆಪ್ಪು ತುಪ್ಪವ ನುಂಗಿದಾ ಪರಿಯೊಳು ।

ಕಪ್ಪು ಕಣ್ಣನೆ ನುಂಗಿ ಒಪ್ಪು ಚಿತ್ರವ ನುಂಗಿ ।
ಅಪ್ಪಿ ಅಗಲದೆ ಇಪ್ಪ ನಿಜವು ತಾನೆ ॥ ೧೮ ॥

## ಭಾವಾರ್ಥ

ಅಪ್ಪು ಅಗ್ನಿಯ ನುಂಗಿ ಎಂದಡೆ ಸಾಗರದ ನೀರು ಬಡಬಾಗ್ನಿಯ ನೊಳಕೊಂಡಿಪ್ಪಂತೆ ಮಹದಾನಂದ ಜಲಭರಿತ ಮಹಾ ಘನಲಿಂಗವು ತನ್ನೊಳಗೆ ಜ್ಞಾನಾಗ್ನಿ ರೂಪ ಲಿಂಗೈಕ್ಯವನೊಳಕೊಂಡಿಹುದೆಂಬುದರ್ಥ. ಉಪ್ಪು ಉದಕವ ನುಂಗಿ ಎಂದಡೆ ಉಪ್ಪು ತಾನು ಸಮುದ್ರ ಜಲವನೊ ಳಕೊಂಡು ಘಟ್ಟಿಯಾಗಿಪ್ಪಂತೆ ನಿಜ ಪರಿಣಾಮ ಸ್ವರೂಪವಪ್ಪ ಪ್ರಸಾದ ಲಿಂಗವು ನಿಜಾನಂದ ರಸಮಯ ಶರಣನೊಳಕೊಂಡು ಬೇರಾಗದೆ ಬೆಳ ಗುವದೆಂಬುದರ್ಥ. ಹೆಪ್ಪು ತುಪ್ಪವ ನುಂಗಿದ ಪರಿಯೊಳು ಎಂದಡೆ ಹೆಪ್ಪು ಹಾಲಿನೊಳಗಿನ ತುಪ್ಪವನೊಳಕೊಂಡು,ಗಟ್ಟಿಯಾದಂತೆ ಚಿತ್ಕಲ ಲಿಂಗವು ಹೃದಯಕ್ಕೆ ವೇದಿಸಿ ಸಂಸಾರ ಸಾಗರವ **ಬೇರ್ಪಡಿಸಿ** ಅಲ್ಲಿಪ್ಪ ನಿಜಾತ್ಮನ ಸದ್ವಾಸನೆಯನೊಳಕೊಂಡು ಚಿದಾನಂದ ಸ್ವರೂಪಿನಿಂದಿಹು ದೆಂಬುದರ್ಥ. ಕಪ್ಪು ಕಣ್ಣನೆ ನುಂಗಿ ಎಂದಡೆ ಕಣ್ಣೊಳಗಿನ ಕಪ್ಪು ಆ ಕಣ್ಣಿನ ಬೆಳಗನೊಳಕೊಂಡು ತನ್ನ ಕಾಂತಿಯನ್ನು ತೋರುವ ಹಾಗೆ ಮಹಾಶೂನ್ಯ ನಿರಾಳ ಲಿಂಗವು ಅನಾದಿ ನಿರ್ಮಲ **ಚಿದ್ದೃಷ್ಟಿಯೊಡನೆ ಕೂಡಿ**ದ ನಿಜ ಶರಣನೊಳಕೊಂಡು ಬೆಳಗುವದೆಂದರ್ಥ. ಒಪ್ಪು ಚಿತ್ರವ ನುಂಗಿ ಎಂದಡೆ ಒಪ್ಪು (ಬಣ್ಣವು)ಚಿತ್ರದ ನಾನಾ ರೂಪಗಳನೊಳಕೊಂ ಡು ತೋರುವ ಹಾಗೆ ತನ್ನ ಚಿದೈಶ್ವರ್ಯದ ಅಲಂಕಾರವನ್ನುಳ್ಳ ಚಿದ್ಘನ ಲಿಂಗವು ನಿರ್ಮಲ ಹೃದಯವಪ್ಪ ಶರಣನೊಳಕೊಂಡು **ಬೆಳ**ಗುವದೆಂ ದರ್ಥ. ಅಪ್ಪಿ ಅಗಲದೆ ಇಪ್ಪ ನಿಜವು ತಾನೆ ಎಂದಡೆ ತನ್ನನೊಳಕೊಂಡ ಘನಲಿಂಗದೊಳಗೆ ತಾನೆಂಬುದಳಿದು ಆ ಲಿಂಗವೇ ತಾನಾದನೆಂಬುದರ್ಥ.

ಧ್ಯಾನ ಮೌನವ ನುಂಗಿ । ಮೌನ ಮುಗ್ಧವ ನುಂಗಿ ।
ನೇಮ ನಿತ್ಯವ ನುಂಗಿದಾ ತೆರನೊಳು ।
ಕಾಮ ಕರಣವ ನುಂಗಿ ನಾಮ ಸೀಮೆಯ ನುಂಗಿ ।
ಆ ಮಹಾ ಘನಲಿಂಗವಾದ ಶರಣ ॥ ೧೯ ॥

## ಭಾವಾರ್ಥ

ಧ್ಯಾನ ಮೌನವ ನುಂಗಿ ಎಂದಡೆ ಒಂದು ವಸ್ತುವಿನಲ್ಲಿ ಕರಿಗೊಂಡ ಧ್ಯಾನವೆಂಬುದು ನಿಶ್ಶಬ್ದವನೊಳಕೊಂಡು ತೋರುವ ಹಾಗೆ ಉನ್ಮನಿಯ ಪ್ರಣವ ಸ್ವರೂಪವಪ್ಪ ಮಹಾಲಿಂಗವು ತನ್ನಲ್ಲಿ ಸೋಽಹಂ ಎಂಬ ಶಬ್ದ ವಳಿದಿಪ್ಪ ಲಿಂಗೈಕ್ಯವನೊಳಕೊಂಡು ತಾನೊಂದೇ ಬೆಳಗುವದೆಂದರ್ಥ. ಮೌನ ಮುಗ್ಧವ ನುಂಗಿ ಎಂದಡೆ ಮೌನವು ಶಬ್ದವಿಲ್ಲದ ಮುಗ್ಧಭಾವವ ನೊಳಕೊಂಡು ತೋರುವಹಾಗೆ ನಿರಾಳ ನಿಶ್ಶಬ್ದಮಯವಪ್ಪ ಪರಬ್ರಹ್ಮವು ಶಬ್ದಾಡಂಬರವಿಲ್ಲದೆ ಗಂಭೀರನಾದ ಶರಣನನ್ನು ತನ್ನೊಳಡಗಿಸಿಕೊಂಡು ತಾನೊಂದಾಗಿ ತೋರುತಿಹುದೆಂದರ್ಥ. ನೇಮ ನಿತ್ಯವ ನುಂಗಿದ ತೆರ ದೊಳು ಎಂದಡೆ ಆವುದಾನೊಂದು ಕಟ್ಟು ಕ್ರಿಯಾ ನೇಮವು ಆ ಕ್ರಿಯೆ ಗಳನೊಳಕೊಂಡು ತಾನೇ ಮುಖ್ಯವಾಗಿ ತೋರುವಂತೆ ಪಂಚಾಚಾರ ರೂಪವಪ್ಪ ಆಚಾರಲಿಂಗವು ಶ್ರದ್ಧಾವಂತ ಭಕ್ತನನೊಳಕೊಂಡು ತಾನೇ ಬೆಳಗುತ್ತಿಹುದೆಂಬುದರ್ಥ. ಕಾಮ ಕರಣವ ನುಂಗಿ ಎಂದಡೆ ಮನದ ಬಯಕೆ ಮನವನೊಳಕೊಂಡು ತಾನೇ ಮುಂದೆ ತೋರುವ ಹಾಗೆ ನಿಜಾನಂದಮಯವಪ್ಪ ಭಾವಲಿಂಗವು ಆ ನಿಜಾನಂದ ಭಕ್ತಿ ಚಿಂತನೆ ಯೊಳಗಿಪ್ಪ ಶರಣನನೊಳಕೊಂಡು ತಾನು ಬೆಳಗುವದೆಂದರ್ಥ. ನಾಮ ಸೀಮೆಯ ನುಂಗಿ ಎಂದಡೆ ದೇಶದ ಹೆಸರು ಸಕಲ ದೇಶವನೊಳಕೊಂಡು ತೋರುವ ಹಾಗೆ ಶಿವನೆಂಬ ಅನಾದಿ ನಾಮಂಗಳುಳ್ಳ ಪರಶಿವನು ತನ್ನ ಶರೀರವಪ್ಪ ಶರಣನ ಪಂಚವಿಂಶತಿ ತತ್ತ್ವಗಳಂ ತನ್ನೊಳಗೆ ಗರ್ಭೀಕರಿಸಿ ಕೊಂಡು ತನ್ನರಿವನೇ ಬೆಳಗುತಿಹುದೆಂಬುದರ್ಥ. ಘನಲಿಂಗವಾದ ಶರ ಣನೆಂದಡೆ ಹೀಗೆ ವಾಙ್ಮನ ಶರೀರಂಗಳು ಮಹಾಲಿಂಗದೊಳಗೆ ಒಳಕೊಂ ಡು ತೋರುವ ಆ ಶಿವಶರಣಂಗೆ ನಾಮ-ರೂಪ-ಭ್ರಾಂತಿಗಳಿಲ್ಲವಾಗಿ ಆ ಲಿಂಗದ ಪರಿಪೂರ್ಣ ಲಕ್ಷಣದೊಳಗೆ ಬೆರೆದಿಹನೆಂಬುದರ್ಥ.

ಬೆಳಗು ಒಳಗನೆ ನುಂಗಿ । ಒಳಗು ಬೆಳಗನೆ ನುಂಗಿ ।
ಚಳಿಮೋಽಹರವ ಮಂಜು ನುಂಗಿದಂತೆ ।

ಹೊಳೆವ ದೀಪವ ಬಯಲ ಗಾಳಿ ನುಂಗಿದ ತೆರದಿ ।
ಕಳೆಯುಳಿದ ಕೂಡಲ ಚೆನ್ನ ಸಂಗಯ್ಯನು ॥ ೨೦ ॥

## ಭಾವಾರ್ಥ

ಬೆಳಗು ಒಳಗನೆ ನುಂಗಿ ಒಳಗು ಬೆಳಗನೆ ನುಂಗಿ ಎಂದಡೆ ಸೂರ್ಯನ ಬೆಳಕು ಮಹಾಕಾಶವನೊಳಕೊಂಡು ಆ ಮಹಾಕಾಶವು ತನ್ನೊಳಗೆ ಸೂರ್ಯನ ಬೆಳಗನಡಗಿಸಿಕೊಂಡು ಸಮರಸವಾಗಿದ್ದ ಹಾಗೆ ಚಿದಾದಿತ್ಯನೆಂಬ ಪ್ರಾಣಲಿಂಗದ ಬೆಳಗು ಶರಣನ ಹೃದಯಾಕಾಶವನೊಳ ಕೊಂಡು ಮತ್ತಾ ಹೃದಯಾಕಾಶವು ಆ ಪ್ರಾಣಲಿಂಗದ ಬೆಳಗನಡಗಿಸಿ ಕೊಂಡು ಎರಡೂ ಸಮರಸವಾಗಿರುವವೆಂದರ್ಥ. ಚಳಿ ಮೋಹರವ ಮಂಜು ನುಂಗಿದ ತೆರದಿ ಎಂದಡೆ ಚಳಿಯನ್ನು ಮಂಜಿನ ಹನಿಗಳೊಳ ಕೊಂಡು ಒಂದೆಯಾದಂತೆ ಕರಣ ವಿಶ್ರಾಂತಿಯೆಂಬ ಪರಮ ಶಾಂತಿ ಮಯ ಶರಣನನ್ನು ಕರಣ ರಸಭರಿತ ಕೃಪಾದೃಷ್ಟಿ ಪ್ರಭೆಯೊಡನೆ ಕೂಡಿದ ಪರಶಿವ ಮೂರ್ತಿ ತಾನೊಳಕೊಂಡು ಅಖಂಡ ಜ್ಯೋತಿಯಾಗಿ ರುವನೆಂದರ್ಥ. ಹೊಳೆವ ದೀಪವ ಬಯಲ ಗಾಳಿ ನುಂಗಿದ ತೆರದಿ ಕಳೆ ಯುಳಿದ ಕೂಡಲ ಚೆನ್ನಸಂಗಯ್ಯನೆಂದಡೆ ವಾಯುವಿನಂಶವಪ್ಪ ಸಂಚಲ ಗುಣವುಳ್ಳ ಪ್ರಚಂಡ ವಾಯುವು ಬಂದು ಜ್ಯೋತಿಯನೊಳಕೊಳ್ಳಲು ಜ್ಯೋತಿರೂಪವಡಗಿ ವಾಯುವೇ ಆದಂತೆ ಸುನಾದ ಬ್ರಹ್ಮಲಿಂಗದ ನೆನವಿಡಿದು ಸುಜ್ಞಾನ ಜ್ಯೋತಿಮಯವಾಗಿರ್ದ ಶರಣನನ್ನು ಆ ಲಿಂಗ ಬಂದು ಒಳಕೊಳ್ಳಲು ಆ ಲಿಂಗದೊಳಗೆ ಸರ್ವಾಂಗದ ಕಳೆ ಸಮರಸವಾ ಗಲು, ಆ ಲಿಂಗದೊಳಗೆ ಪಂಚ ತನ್ಮಾತ್ರಂಗಳಡಗಲು ಅದರೊಡನೆ ಪಂಚಭೂತಂಗಳಡಗಿ ಪ್ರಣವ ಸ್ವರೂಪವಾಗಿಹನೆಂಬುದರ್ಥ.

ಇಲ್ಲಿಗೆ ಪರತತ್ತ್ವ-ಲಿಂಗ-ಪ್ರಕಾಶ-ಸ್ಥಲ ಸಮಾಪ್ತಂ.

## ಶಿವಾದ್ವೈತ ಶರಣ ಪ್ರಕಾಶ ಸ್ಥಲವು

ತನ್ನ ಅಂಗ, ಮನ, ಪ್ರಾಣೇಂದ್ರಿಯ, ಭಾವಾದಿಗಳನೊಳಕೊಂಡು ಬೆಳಗುವ ಮಹಾಲಿಂಗದ ಮೂಲ ಪ್ರಭೆಯೊಳಗಿಪ್ಪ ಶಿವಶರಣನೆಂತು ತೋರುತ್ತಿಹನೆಂದಡೆ, ಅರುಣನ ಕಿರಣದೊಳಡಗಿದ ಜಲಬಿಂದುವು ಆ ಕಿರಣ ಪ್ರಕಾಶದಿಂದಲೇ ತೋರುವಂತೆ ಪುಷ್ಪ ಗಂಧಗಳು ಏಕ ಸ್ವರೂಪಿನಂತೆ ತೋರುತ್ತಿರಲು ಮುಂದೆ ಶಿವಾದ್ವೈತ-ಶರಣ-ಪ್ರಕಾಶ ಸ್ಥಲವಾದುದು.

ಗಗನದೊಳಗಣ ಚಂದ್ರ ಮುಗಿಲೊಳಗಣ ಮಿಂಚು ।
ಭುಗಿ ಭುಗಿಲನೆ ಸೂರ್ಯಪ್ರಭೆಯ ಬೆಳಗು ॥

### ಭಾವಾರ್ಥ

ತನ್ನ ಪ್ರಾಣಲಿಂಗದಿಂದ ತೋರಿದ ನಾದ ಬಿಂದು ಕಳೆಗಳನೆಂತು ಕಾಣಬೇಕೆಂದಡೆ, ಪಶ್ಚಿಮ ದ್ವಾರದಲ್ಲಿ ಪ್ರಾಣಲಿಂಗ ಧ್ಯಾನಿಯಾಗಿ ಸ್ವಸ್ಥ ಪದ್ಮಾಸನದಲ್ಲಿರುತ್ತಿರಲು ಮೂಲಾಧಾರದಲ್ಲಿ ಹುಟ್ಟಿದ ಜ್ಞಾನ ಚೈತನ್ಯದಿಂದ ಮೂಲಾಗ್ನಿ ಪ್ರಕಾಶ ಪುಟವಾಗಿ ಚಿದಗ್ನಿ ಪ್ರಕಾಶವೆನಿಸಿಕೊಂಡು ಊರ್ಧ್ವ ಮುಖವನೈದಲಾಗಿ ಗಗನವೆನಿಸಿಕೊಂಬ ಕಂಠ ಸ್ಥಾನದಲ್ಲಿ ಪ್ರಸಾದಲಿಂಗದ ಶಾಂತಿಕಲಾ ಕಿರಣ ಸ್ವರೂಪದಿಂದ ಬೆಳಗುವ ಚಂದ್ರ ಮಂಡಲದ ಬೆಳಗು ಮೇಲಣ ಪಶ್ಚಿಮ ದ್ವಾರಕ್ಕೈದು ಬೆಳಗುವದೆಂಬುದೀಗ ಗಗನದೊಳಗಣ ಚಂದ್ರನೆಂಬುದಕ್ಕರ್ಥ. ಮುಗಿಲೊಳಗಣ ಮಿಂಚೆಂದಡೆ ಈಡಾಪಿಂಗಳದಗ್ರದ ತ್ರಿಕೋಣದಲ್ಲಿ ನಿಶ್ಚಲವಾಗಿಪ್ಪ ಪ್ರಾಣವಾಯುವಿನೊಳಗೆ ಮಿಂಚಿನ ಬೆಳಗಿನಂತೆ ಮೂಲಾಗ್ನಿ ಪ್ರಕಾಶದೋರುವದೆಂಬುದರ್ಥ. ಭುಗುಭುಗುಲನೆ ಎಂದಡೆ ಭುಗುಭುಗು ಎಂಬ ಶಬ್ದವು ಅಗ್ನಿಯಲ್ಲಿ ಹುಟ್ಟುವದಾಗಿ ಆ ಪ್ರಾಣವಾಯುವಿನೊಳಗಣ ಅಗ್ನಿಪ್ರಭೆಯಲ್ಲಿ ಮೇಘಧ್ವನಿಯಂತೆ ಓಂಕಾರ ನಾದಘೋಷವು ತೋರುವದೆಂಬುದರ್ಥ. ಸೂರ್ಯಪ್ರಭೆಯ ಬೆಳಗೆಂದಡೆ ನಾಭಿಸ್ಥಾನದ ಹೃದಯಾಕಾಶದಲ್ಲಿ ಶಿವಲಿಂಗ ವಿದ್ಯಾ ಕಲಾ ರೂಪಿನಿಂದೊಪ್ಪುವ ಸೂರ್ಯಮಂಡಲದ

ಪ್ರಕಾಶವೆಂಬುದರ್ಥ. ಪಶ್ಚಿಮದ್ವಾರದೊಳಗಣ ಚಂದ್ರಾಗ್ನಿ ಪ್ರಕಾಶಗಳಲ್ಲಿ ಬೆರೆದು ತೋರುತ್ತಿಹುದೆಂದರ್ಥ. ಇಂತು ಮನ ಪವನಂಗಳು ನಾದ ಬಿಂದು ಪ್ರಕಾಶಗಳೆಂಬೆಲ್ಲವು ಸಮರಸ ಸಮಾಧಿಯನೈದಿ ಅಲ್ಲಿ ಶರಣನು ತನ್ನ ಚಿದ್ರೂಪ ಪ್ರಾಣಲಿಂಗದ ಸ್ವರೂಪವ ಭಿನ್ನವಿಲ್ಲದೆ ನೋಡುತ್ತಿರ್ದನೆಂದರಿವುದು.

ಪಂಚದೋವರಿಯೊಳಗೆ ಪಂಚ ಸೂತ್ರವು ಮಿಂಚಿ ।
ಕಂಚು ಮಿಂಚಿನ ಸಂಚಲವ ನುಂಗಿ ।
ಪಂಚಸೂತ್ರವು ಮಿಂಚಿ ಸಂಚದೋವರಿಗೊಂಡು ।
ಪಂಚಮುಖ ಪರಮ ಗುರುವಾದ ಶರಣ ॥ ೨೧ ॥

## ಭಾವಾರ್ಥ

ಪಂಚದೋವರಿಯೊಳಗೆ ಪಂಚಸೂತ್ರವು ಮಿಂಚಿ ಎಂದಡೆ ದಶ ನಾಡಿಗಳೊಳಗೆ ಮರೆಯಾಗಿಪ್ಪ ಸುಷುಮ್ನಾ ದ್ವಾರದೊಳಗೆ ಜ್ಯೋತಿರ್ಮಯದಿಂದ ಬೆಳಗುವ ಓಂಕಾರದಲ್ಲಿ ಪಂಚ ಪ್ರಾಣವಾಯುಗಳು ಪೂರಕ ಸ್ವರೂಪದಿಂದ ನಿಶ್ಚಲವಾಗಿ ನಿಂದು ಬೆಳಗುವವೆಂದರ್ಥ. ಕಂಚು ಮಿಂಚಿನ ಸಂಚಲವ ನುಂಗಿ ಕಂಚಿನಲ್ಲಿ ಹೊಳೆದು ತೋರುವ ಬೆಳಗಿನ ಹಾಗೆ ಆತ್ಮಯೋಗಿಗಳ ಧ್ಯಾನ ಸಮಯದಲ್ಲಿ ಇದಿರಿಟ್ಟು ತೋರಿ ಧ್ಯಾನ ನಿಂದಲ್ಲಿ ಅಡಗಿಹೋಗುವಂಥ ಬಿಂದು ಲಕ್ಷಯೋಗವ ಮಿಥ್ಯೆ ಎಂದು ಕಳೆದನೆಂಬುದರ್ಥ. ಪಂಚಸೂತ್ರವು ಮಿಂಚಿ ಸಂಚದೋವರಿಗೊಂಡು ಎಂದಡೆ ಸುಷುಮ್ನಾ ದ್ವಾರದ ಬೆಂಬಳಿ ಎನಿಸುವ ಪಂಚೇಂದ್ರಿಯ ದ್ವಾರಂಗಳಲ್ಲಿ ಆ ಪಂಚ ಪ್ರಾಣ ವಾಯುವಂಗಳು ಆ ಪ್ರಾಣಸಂಬಂಧವಪ್ಪ ಪಂಚಾಕ್ಷರಗಳ ಚೈತನ್ಯಮಯದಿಂದ ಬೆಳಗುವವೆಂಬುದರ್ಥ. ಪಂಚಮುಖ ಪರಮ ಗುರುವಾದ ಶರಣನೆಂದಡೆ ಪಂಚಾಕ್ಷರ ಸಂಬಂಧವಾದ ಚಿತ್ಪ್ರಾಣಾದಿ ವಾಯುಗಳೇ ಪಂಚ ಕಲಾ ಶಕ್ತಿಗಳೆಂದೆನಿಸಿ ಆ ಪಂಚ ಶಕ್ತಿಗಳಲ್ಲಿಪ್ಪ ಶಿವ ಚೈತನ್ಯಂಗಳೇ ಪಂಚಸಾದಾಖ್ಯ ಲಿಂಗಗಳೆನಿಸಿ ಆ ಲಿಂಗಗಳಿಗೆ ಪಂಚೇಂದ್ರಿಯಂಗಳೇ ಸದ್ಯೋಜಾತಾದಿ ಪಂಚವಕ್ತ್ರಂಗಳೆನಿಸಿ ಮಧ್ಯಸ್ಥವಾದ

ಓಂಕಾರವೇ ಸದಾಶಿವನ ದಿವ್ಯ ಶರೀರವೆನಿಸಿತ್ತು. ಅದಾಗಿ ಆ ಓಂಕಾರ ಪ್ರಭೆಯೊಳಗೆ ಮುಳುಗಿಪ್ಪ ಶರಣನು ತಾನೆ ಸದಾಶಿವ ಮೂರ್ತಿಯಾಗಿ ಬೆಳಗುತ್ತಿರ್ದನೆಂಬುದರ್ಥ.

**ತಾತ್ಪರ್ಯ**— ಆದಿಲಿಂಗ ಅನಾದಿ ಶರಣನಾದ್ದರಿಂದ ಅನಾದಿಯೆಂಬ ಚಿತ್ತದ ಬೆಳಗೆನಿಸುವ ಜ್ಯೋತಿರ್ಮಯ ಲಿಂಗದೊಳಗೆ ಬೆರೆದ ಶರಣನು ಜ್ಯೋತಿರ್ಮಯನಾಗುವನು. ಅದು ಆ ಮಹಿಮಂಗೆ ಸಹಜವೆಂಬುದರ್ಥ.

ಅಪ್ಪು ಅಂಬುಧಿಯೊಳಗೆ । ಚಿಪ್ಪು ಮುತ್ತನು ನುಂಗಿ ।
ಬೊಪ್ಪ ಮುಪ್ಪುವ ನುಂಗಿದಾ ತೆರನೊಳು ।
ಸಿಪ್ಪೆ ಹಣ್ಣನೆ ನುಂಗಿ ಇಪ್ಪಂತೆ ಶಿವಯೋಗ ।
ತಪ್ಪದದು ಪರಕೆ ಪರವಾದ ಘನವು ॥ ೨೨ ॥

## ಭಾವಾರ್ಥ

ಅಪ್ಪು ಅಂಬುಧಿಯೊಳಗೆಂದಡೆ ಸಮುದ್ರದೊಳಗೆ ಬೆರೆವ ನದಿ ಜಲಂಗಳು ಸಮುದ್ರಮಯವಾಗಿಪ್ಪಂತೆ, ಅಖಂಡ ಚಿದಾನಂದ ಜಲಮಯವಪ್ಪ ಸಮುದ್ರದೊಳಗೆ ಸಮರಸ–ಭಕ್ತಿ–ಆನಂದ–ಜಲಮಯದಿಂದ ಲಿಂಗವ ಬೆರಸಿದ ಲಿಂಗೈಕ್ಯನು ಆ ಶಿವಸಮುದ್ರಮಯನಾಗಿಹನೆಂದರ್ಥ. ಚಿಪ್ಪು ಮುತ್ತನೆ ನುಂಗಿಯೆಂದಡೆ ಚಿಪ್ಪಿನಲ್ಲಿದ್ದ ಮುತ್ತು ಚಿಪ್ಪಿನಲ್ಲಿಯೇ ತೋರುವಹಾಗೆ ಪ್ರಾಣಲಿಂಗದೊಳಡಗಿ ಮುಕ್ತನಾದ ಶರಣನು ಪ್ರಣವ ಪ್ರಭಾ ಮಂಡಲ ಮರೆಯಲ್ಲಿ ತೋರುವನೆಂಬುದರ್ಥ. ಬೊಪ್ಪ ಮುಪ್ಪುವ ನುಂಗಿದಾ ತೆರನೊಳು ಎಂದಡೆ ಹಿರಿಯರೊಳಡಗಿದ್ದ ಮುಪ್ಪು ಅವರ ಹೆಸರಿನಿಂದಿರುವಹಾಗೆ ಅನಾದಿ ಪರಶಿವನೊಳಗೆ ಅನಾದಿ ಚಿತ್ಪ್ರಭಾಂಗ ಸ್ವರೂಪನಾಗಿ ಬೆರಸಿಪ್ಪ ಶಿವಶರಣನು ಆ ಪರಶಿವನಾಮದಿಂದಲೇ ಒಪ್ಪುತ್ತಿಹನೆಂದರ್ಥ. ಸಿಪ್ಪೆ ಹಣ್ಣನೆ ನುಂಗಿ ಇಪ್ಪಂತೆ ಶಿವಯೋಗವೆಂದಡೆ ಸಿಪ್ಪೆಯೊಳಡಗಿದ್ದ ಹಣ್ಣು ಬೇರೆ ತೋರದೆ ಒಂದೇ ಸ್ವರೂಪವಾಗಿಪ್ಪಂತೆ ಷಡ್ವಿಂಶತಿ ತತ್ತ್ವಾತೀತಮಯವಾಗಿರ್ಪ ಪರತತ್ತ್ವದೊಳಗೆ ಅಡಗಿರ್ದ

ಶರಣನಿಹನೆಂದರ್ಥ. ತಪ್ಪದಿದು ಎಂದಡೆ ಶಿವಯೋಗಕ್ಕೆ ಮಾಯಾ ಹಮ್ಮಿಲ್ಲವಾಗಿ ಒಂದು ತತ್ತ್ವಾಂತರ ಮುಕ್ತಿಪದಂಗಳ ಹಾಗೆ ಕಾಲಾಂತರದ ಮೇಲೆ ತೊಲಗಿಹೋಗುವದಲ್ಲವೆಂಬುದರ್ಥ. ಪರಕೆ ಪರವಾದ ಘನವೆಂದಡೆ ರುದ್ರಾದಿ ಪದವಿಗಳಿಗೆಲ್ಲ ಏಕದೇಶ ಮಾತ್ರ ಸ್ಥಾನವಾದ ಪರಶಿವಯೋಗ ಪದವು ಸರ್ವತ್ರ ಪೂರ್ಣವು ಅಂದರೆ ಎಲ್ಲ ಪದವಿಗಳಿಗಿಂತ ಮೇಲಾದುದೆಂಬುದರ್ಥ.

ಅಗ್ನಿ ವಾಯುವ ನುಂಗಿ ಸಂಜ್ಞೆ ಸಹಜವ ನುಂಗಿ ।
ಮಗ್ನೋಪತಾ ಮನವ ನುಂಗಿದಂತೆ ।
ಯಜ್ಞೋಪವ ಅಗ್ನಿ ನುಂಗಿದಂದದೊಳಿಪ್ಪ ।
ಅಜ್ಞಾನವನು ತಿಮಿರ ನುಂಗಿದಂತೆ ॥ ೨೩ ॥

## ಭಾವಾರ್ಥ

ಅಗ್ನಿ ವಾಯುವ ನುಂಗಿ ಎಂದಡೆ ಅಗ್ನಿಯೊಳಡಗಿದ ವಾಯು ಅಗ್ನಿರೂಪವಾದಂತೆ ಚಿದಗ್ನಿಮಯ ಲಿಂಗದೊಳಡಗಿರ್ದ ಪ್ರಾಣಲಿಂಗಿಯು ಆ ಲಿಂಗ ಸ್ವರೂಪನಾಗಿರುವನೆಂದರ್ಥ. ಸಂಜ್ಞೆ ಸಹಜವ ನುಂಗಿ ಎಂದಡೆ ಒಂದು ಕುರುಹಿನೊಳಡಗಿದ ಸ್ವರೂಪವು ಆ ಕುರುಹಿನಿಂದಲೇ ಒಪ್ಪುವ ಹಾಗೆ ಮಹಾಲಿಂಗದೊಳಗೆ ಚಿದ್ರೂಪನೆನಿಸಿ ಅಡಗಿರ್ದ ಲಿಂಗೈಕ್ಯನು ಆ ಲಿಂಗದ ಕುರುಹಿನಿಂದೊಪ್ಪುವನೆಂದರ್ಥ.ಮಗ್ನೋಪ ತಾ ಮನವ ನುಂಗಿ ದಂತೆ ಎಂದಡೆ ಒಂದು ವಸ್ತುವಿನ ಮೇಲೆ ಧ್ಯಾನವಿಟ್ಟ ಮನವು ಆ ವಸ್ತು ವಿನಲ್ಲಿಯೇ ಪರವಶವಾಗಿ ಬೆರೆದಂತೆ ನಿಜವಸ್ತುವಿನೊಳಗೆ ತೂರ್ಯಾವ ಸ್ಥೆಯ ಚಿಂತನೆಯಿಂದ ಮುಳುಗಿದ ನಿಜೈಕ್ಯನು ಆ ನಿಜವಸ್ತು ಭಾವ ದಿಂದಲಿರುವನೆಂಬುದರ್ಥ. ಯಜ್ಞೋಪವನು ಅಗ್ನಿ ನುಂಗಿದಂತೆ ಎಂದಡೆ ಹೋಮಗೊಂಡದ ಅಗ್ನಿಯೊಳಡಗಿದ್ದ ಯಜ್ಞ ಸಾಧನ ದ್ರವ್ಯಂಗಳೆಲ್ಲವೂ ಅಗ್ನಿಸ್ವರೂಪವಾಗಿ ತೋರುವಹಾಗೆ ತ್ರಿಪುಟಿ ಶೂನ್ಯವಾದ ಮಹಾ ಚಿದಗ್ನಿಮಯ ಲಿಂಗದೊಳಗೆ ಶರಣನ ಸಕಲತತ್ತ್ವ ಕರಣಂಗಳೆಂಬ ಹವಿ ಸ್ಸುಗಳೆಲ್ಲವೂ ಲಿಂಗಾರ್ಪಿತ ಮುಖದಿಂದಡಗಿ ಶಿವನ ಮಹದೈಶ್ವರ್ಯ ವೆಂಬ ಚಿದ್ಭಸ್ಮ ಸ್ವರೂಪವಾಗಿಹವೆಂಬುದರ್ಥ. ಅಜ್ಞಾನವನು ತಿಮಿರ

ನುಂಗಿದಂತೆ ಎಂದಡೆ ಮಾಯಾ ತಮದೊಳಿರ್ಪ ಅಜ್ಞಾನವು ತಮೋಮಯವಾಗಿರುವಂತೆ ತತ್ತ್ವಾತೀತ ಮಹಾ ಶೂನ್ಯಲಿಂಗದೊಳಗೆ ಜ್ಞಾನ ಶೂನ್ಯವಾದರಿವಿನಿಂದ ಬೆರೆದ ಮಹಾಂತನು ಶೂನ್ಯಲಿಂಗಮಯನಾಗಿರ್ಪವನೆಂದರ್ಥ.

**ತಾತ್ಪರ್ಯ**— ಶಿವಶರಣನ ಶಿವಾನುಭಾವ ಪ್ರಸನ್ನತೆ ಎಲ್ಲವು ಜ್ಞಾನದ ಶಬ್ದಗಳಾದುದರಿಂದ ಆತನ ಮನ-ಭಾವ-ಜ್ಞಾನಂಗಳು ಬೇರಿಟ್ಟು ಕಾಣಿಸಲರಿಯವೆಂದು ತಾತ್ಪರ್ಯ.

ಪರಿಮಳವ ಪುಷ್ಪವು ನುಂಗಿ। ಪರಮ ಪರಿಣಾಮವ ನುಂಗಿ।
ಉರಿ ಕರ್ಪೂರವ ನುಂಗಿದಾ ತೆರನೊಳು।
ಸರ, ದಾರವ, ಮಣಿ, ಮಾಲೆಯ ನುಂಗಿದ ತೆರದಿ।
ಗುರು ಗೋಪ್ಯವ ನುಂಗಿದಾ ತೆರನೊಳು ॥ ೨೪ ॥

## ಭಾವಾರ್ಥ

ಪರಿಮಳ ಪುಷ್ಪವ ನುಂಗಿ ಎಂದಡೆ ಗಂಧ ಪುಷ್ಪಗಳೆರಡು ಒಂದಾಗಿ ತೋರುವಂತೆ ಚಿಚ್ಛಕ್ತಿ ಸ್ವರೂಪನಾದ ಪರಶಿವನು ಶರಣನನ್ನೊಡಗೂಡಿಕೊಂಡು ಒಂದೆ ಸ್ವರೂಪಿನಲ್ಲಿರುವನೆಂದರ್ಥ. ಪರಮ ಪರಿಣಾಮವ ನುಂಗಿ ಎಂದಡೆ ಮನದ ಹೆಚ್ಚುಗೆ ಮನದ ಪರಿಣಾಮಗಳೆರಡೂ ಒಂದೇ ಆಗಿ ತೋರುವಂತೆ ಭಕ್ತಿಯೂ, ಭಕ್ತನೂ ಅನನ್ಯ ಸ್ವರೂಪವಾಗಿ ಪ್ರಕಾಶಿಸುವರೆಂದರ್ಥ. ಉರಿ ಕರ್ಪೂರವನು ನುಂಗಿದಾ ತೆರದೊಳು ಎಂದಡೆ ಉರಿ ಕರ್ಪೂರಗಳೆರಡೂ ಕೂಡಿ ಒಂದೆಯಾಗಿ ಬೆಳಗುವ ಹಾಗೆ ಪರಂಜ್ಯೋತಿ ಲಿಂಗವೂ, ಚಿದ್ರೂಪ ಶರಣನೂ ಒಂದೇ ಸ್ವರೂಪವಾಗಿ ಬೆಳಗುವರೆಂದರ್ಥ. ಸರ, ದಾರವನು, ಮಣಿ ಮಾಲೆಯನು, ನುಂಗಿದ ತೆರದಿ ಎಂದಡೆ ಮುತ್ತು ಮಣಿ ಮಾಲೆಗಳಲ್ಲಿ ಸೇರಿದ ದಾರವೂ ಆ ಮಾಲೆಗಳೂ ಒಂದೇ ಆಗಿ ತೋರುವಂತೆ ಸುಜ್ಞಾನ ರತ್ನಗಳೆಂಬ ಆಚಾರಾದಿ ನವಲಿಂಗಗಳೊಳಗೆ ಸ್ವಾನುಭಾವ ಸೂತ್ರದಿಂದ ಏಕಾಕಾರವಾಗಿ ಸೇರಿಪ್ಪ ಶರಣನು ಬೇರೆನಿಸದೆ ಬೆಳಗುವನೆಂದರ್ಥ. ಗುರು ಗೋಪ್ಯವ ನುಂಗಿದ

ತೆರನೊಳು ಎಂದಡೆ ಗಂಭೀರ ಬುದ್ಧಿಯೊಳಿಪ್ಪ ರಹಸ್ಯಾರ್ಥಗಳ, ಬಾಹ್ಯ ರಚನೆಗೆ ತೋರದೆ ಆ ಗಂಭೀರ ಗುಣದಿಂದಲೇ ತೋರುವಹಾಗೆ ನಿರಾಳ ಪರಬ್ರಹ್ಮದೊಳಗೆ ಅಭೇದ್ಯ ಚೈತನ್ಯ ಸ್ವರೂಪಿನಿಂದಡಗಿಪ್ಪ ಶರಣನು ಆ ಪರಬ್ರಹ್ಮದಿರುವಿನಿಂದಲೇ ಒಪ್ಪುತ್ತಿಹನೆಂಬುದರ್ಥ.

ನಿಲವು ನೆಳಲನೆ ನುಂಗಿ ಸೀರೆ ಬಣ್ಣವ ನುಂಗಿ ।
ಫಲ ಪಕ್ವವ ನುಂಗಿದಾ ತೆರನೊಳು ।
ಅಲೆವ ದೀಪವ ಬಯಲಗಾಳಿ ನುಂಗಿದ ತೆರದಿ ।
ಕಳೆಯುಳಿದ ಕೂಡಲ ಚೆನ್ನಸಂಗಯ್ಯನು ॥ ೨೫ ॥

## ಭಾವಾರ್ಥ

ನಿಲವು ನೆಳಲನೆ ನುಂಗಿ ಎಂದಡೆ ದೇಹದ ನೆರಳು ಆ ದೇಹದೊಳಡಗಿದ ಹಾಗೆ ಶಿವನ ಚಿತ್ಕಲಾ ಶಾಂತಿಪ್ರಕಾಶದಿಂದ ತೋರುವ ಶರಣನು ಆ ಶಿವನ ಚಿದಂಗದೊಳಡಗಿಪ್ಪನೆಂದರ್ಥ. ಸೀರೆ ಬಣ್ಣವ ನುಂಗಿ ಎಂದಡೆ ಬಿಳಿ ಬಟ್ಟೆಯೊಳು ಪಂಚವಿಧ ಬಣ್ಣಗಳಡಗಿದಂತೆ ಅನಾದಿ, ನಿರ್ಮಲ, ಚಿದಾಕಾಶಮಯ ಲಿಂಗದೊಳಗೆ ಆ ಲಿಂಗದ ಸ್ವಯಂ ಪ್ರಕಾಶ ಸ್ವರೂಪಿನಿಂದ ಶಿವಶರಣನಡಗಿಹನೆಂಬುದರ್ಥ. ಫಲವು ಪಕ್ವವ ನುಂಗಿದ ತೆರದೊಳು ಎಂದಡೆ ಹಣ್ಣು ಹಣ್ಣಿನ ರಸಗಳು ಏಕಾಕಾರವಿಪ್ಪಂತೆ ಲಿಂಗವೂ ಲಿಂಗೈಕ್ಯನೂ ಏಕಾಕಾರನಾಗಿ ಬೆಳಗುವರೆಂದರ್ಥ. ಅಲೆವ ದೀಪವ ಬಯಲಗಾಳಿ ನುಂಗಿದ ತೆರದಿ ಕಳೆಯುಳಿದ ಕೂಡಲ ಚೆನ್ನಸಂಗಯ್ಯನೆಂದಡೆ ಪ್ರಚಂಡ ವಾಯುವಿನೊಳಗೆ ಜ್ಯೋತಿಯ ರೂಪು ಸ್ಪರ್ಶಂಗಳಳಿದು ವಾಯುವೇ ಆದಹಾಗೆ ಮಹಾನಾದಮಯವಪ್ಪ ಪರಬ್ರಹ್ಮದ ಚೈತನ್ಯ ಸ್ಫುರಣೆಯಿಂದಲೊಂದು ಸುಜ್ಞಾನ ಮೂರ್ತಿಯಾಗಿ ಪ್ರಕಾಶಿಸುತ್ತಿದ್ದ ಶರಣನು ಆ ಪರಬ್ರಹ್ಮದೊಳಗೆ ಅಡಗಿ ಕೇವಲ ಪರಬ್ರಹ್ಮನೇ ಆದನೆಂಬುದರ್ಥ.

ಇಲ್ಲಿಗೆ ಶಿವಾದ್ವೈತ–ಶರಣ–ಪ್ರಕಾಶ–ಸ್ಥಲ ಸಮಾಪ್ತಂ.

## ಮಹಾಲಿಂಗೈಕ್ಯ ಸ್ಥಲ

ಇಂತು ಮಹಾಲಿಂಗದ ಚಿದ್ಬೆಳಗಿನೊಳಗೆ ಬೆರೆದು ಲಿಂಗಾನಂದ ದಲ್ಲಿರ್ದ ಶರಣನ ಸುಖದರಿವು ಲಿಂಗಾರ್ಪಿತವಾಗಿ ಶರಣ ಸತಿ ಲಿಂಗ ಪತಿ ಯೆಂಬ ಭಾವವಳಿದು ಕ್ಷೀರ ಕ್ಷೀರ ಬೆರೆದಂತೆ ಅವಿರಳ ಸಮರಸವನ್ನೈದು ತಿರಲು ಮುಂದೆ ಮಹಾ–ಲಿಂಗೈಕ್ಯ–ಸ್ಥಲವಾದುದು.

ಚಂದ್ರ ಸೂರ್ಯರ ಕಾಂತಿಯಾಕಾರ ಭೇದದ ಪ್ರ ।
ಬಂಧಗಳ ಗೆಲಿದ ನಿಃಕಾಮಿ ಶರಣ ॥

### ಭಾವಾರ್ಥ

ಚಂದ್ರ ಎಂದಡೆ ಶಕ್ತಿ ಸ್ವರೂಪ ಬಿಂದು. ಸೂರ್ಯ ಎಂದಡೆ ಶಿವ ಸ್ವರೂಪನಾದ. ಕಾಂತಿಯೆಂದಡೆ ಶಿವಶಕ್ತಿ ಸಂಯೋಗ ಸ್ವರೂಪ ಕಳೆ. ಆಕಾರವೆಂದಡೆ ಆ ನಾದಬಿಂದು ಕಲಾಮಯ ಶರೀರ. ಭೇದದ ಪ್ರಬಂಧ ಗಳೆಂದಡೆ ಆ ಶರೀರದಲ್ಲಿ ಆಣವಾದಿ ಮಲತ್ರಯರೂಪವಾದ ಮೂರು ಪಾಶಗಳುಂಟೆಂದು ಅರ್ಥ. ಗೆಲಿದ ನಿಃಕಾಮಿ ಶರಣನೆಂದಡೆ ಅಸ್ಥಿರವಾದ ಹಲವು ಪದವಿಗಳಾಶೆಯುಬಿಟ್ಟ ವೀರ ಮಹೇಶ್ವರನು.ಗುರುಕಾರುಣ್ಯವೆಂಬ ವೇಧಾ–ಮಂತ್ರ–ಕ್ರಿಯಾ–ದೀಕ್ಷೆಗಳಿಂದ ಆ ಪಾಶಗಳ ಹರಿದು ಸದ್ಯೋ ನ್ಮುಕ್ತನಾದನೆಂಬುದರ್ಥ.

ಅಂಧಕಾರದ ಊರಿನ ಮಧ್ಯದೊಳಗೊಂದು ।
ಚಂದ್ರಮನ ಉದಯವಾದುದ ಕಂಡೆ ।
ಮಂದ ಮತಿಯಿಂದ ನೋಡಲು ಕಾಣಬಾರದದು ।
ಹೊಂದಿ ಹೊಂದದ ಬೆಳಗಿನ ಪ್ರಭೆಯದು ॥ ೨೬ ॥

### ಭಾವಾರ್ಥ

ಅಂಧಕಾರದ ಊರೆಂದಡೆ ಅಹಂ ಜೀವನೆಂಬ ಅಜ್ಞಾನ ಮಾಯಾ ತಮಸ್ಸು ಮುಸುಕಿರ್ದ ಅಂತರಂಗವೆಂದರ್ಥ. ಊರಿನ ಮಧ್ಯದೊಳಗೊಂ ದು ಚಂದ್ರಮನ ಉದಯವಾದುದ ಕಂಡೆನೆಂದಡೆ ಆ ಅಂತಃಪುರದ

ಮೇಲಣ ಆಕಾಶವೆನಿಸಿಕೊಂಬ ಬ್ರಹ್ಮರಂಧ್ರದೊಳಗೆ ಪರಿಪೂರ್ಣ ಚಿದ ಮೃತ ಕಿರಣಗಳಿಂದ ಬೆಳಗುತ್ತಿರ್ದ ಅಮೃತಲಿಂಗವೆಂಬ ಜ್ಞಾನಚಂದ್ರನು ಮನಶ್ಶಾಂತಿ ಕಲಾ ಚೈತನ್ಯ ಕಿರಣವುಳ್ಳ ಆತ್ಮನ ಹೃದಯಕ್ಕೆ ವೇಧಿಸಲು ಅಂತಃಕರಣ ಶುದ್ಧವಾಗಿ ಸಮ್ಯಕ್‌ಜ್ಞಾನವೆಂಬ ಕಣ್ದೆರೆದು ಮಾಯಾ ತಮಸ್ಸು ಹರಿದು ತಾನಾರೆಂಬ ವಿಚಾರದಿಂದ ಊರ್ಧ್ವ ಮುಖವನೈದಿ ಆ ಮಹಾಜ್ಞಾನ ಚಂದ್ರಮನನ್ನು ಕಂಡು ಅದರ ಬೆಳಗಿನಲ್ಲಿ ಸಮರಸವಾಗಿ ಬೆರೆದನೆಂದರ್ಥ. ಮಂದಮತಿಯಿಂದ ನೋಡಲು ಕಾಣಬಾರದದು ಎಂ ದಡೆ ಆ ಘನಲಿಂಗದ ಬೆಳಗೆಂಬುದು ಶಿವಪ್ರಸಾದ ಕಾಯ ಸಂಬಂಧವಪ್ಪ ಶಿವಜ್ಞಾನಿಯ ದೃಷ್ಟಿಗೆ ಕಾಣಿಸಿಕೊಂಬುದಲ್ಲದೆ ಜಡ ಕಾಯ ಸಂಬಂಧ ವಾದ ಆತ್ಮಯೋಗದರಿವಿನ ದೃಷ್ಟಿಗೆ ಕಾಣಿಸಿಕೊಳ್ಳದೆಂದರ್ಥ. ಹೊಂದಿ ಹೊಂದದ ಬೆಳಗಿನ ಪ್ರಭೆಯದು ಎಂದಡೆ ಆ ಲಿಂಗದ ಶಾಂತಿ ಪ್ರಕಾಶವು ಸಕಲಾತ್ಮರುಗಳಿಗೆ ಚೈತನ್ಯ ಮಾತ್ರವ ಕೊಟ್ಟು ಅವರ ಪ್ರಪಂಚದೊಳಗೆ ಸಿಕ್ಕದೆ ತಾನು ತನ್ನ ಸ್ವಯ ಗುಣದಿಂದ ಬೆಳಗುತ್ತಿಹುದೆಂಬುದರ್ಥ.

**ತಾತ್ಪರ್ಯ—** ಚಂದ್ರಕಾಂತದೊಳಗೆ ಚಂದ್ರ ಕಿರಣ ವೇಧಿಸುವಂತೆ ಆ ಲಿಂಗ ಪ್ರಸನ್ನ ಪ್ರಕಾಶದ ಬೆಳಗು ತನ್ನಂಶನಪ್ಪ ಶರಣನ ಹೃದಯದಲ್ಲಿ ವೇಧಿಸುವದಲ್ಲದೆ ಉಳಿದ ಜಡ ದೇಹಿಗಳಲ್ಲಿ ವೇಧಿಸದೆಂದು ತಾತ್ಪರ್ಯ.

ಮೇರುವಿನ ಊರೊಳಗೆ ಆರೈದು ನೋಡಲ್ಕೆ ।
ಭೇರಿ ನಾದದ ಪ್ರಭೆಯು ಬೆಳಗುದೋರೆ ।
ಊರಳಿದು ಉಲುಹಡಗಿ ಭೇರಿನಾದವು ನಿಲಲು ।
ಆರು ಭೇದಿಸಿ ಕಾಣಲರಿದು ನೋಡಾ ॥ ೨೭ ॥

## ಭಾವಾರ್ಥ

ಮೇರುವಿನ ಊರೆಂದಡೆ ಭ್ರೂಮಧ್ಯ ಸ್ಥಾನವನ್ನು ಆಶ್ರಯಿಸಿರ್ಪ ಪಶ್ಚಿಮದ್ವಾರವು. ಅಲ್ಲಿ ಆರೈದು ನೋಡಲ್ಕೆಂದಡೆ ಮೂಲಾಧಾರದಿಂದ ಊರ್ಧ್ವಮುಖವಾಗಿ ಹುಟ್ಟಿದ ಪ್ರಣವ ಧ್ಯಾನವಿಡಿದು ಆ ಪಶ್ಚಿಮ ದ್ವಾರ ದೊಳಗೆ ಸೋಹಂ ಭಾವವು ನಿಶ್ಚಲವಾಗಿ ನಿಂದು ತನ್ನ ಪ್ರಾಣಲಿಂಗದ

ಸ್ವರೂಪವನ್ನು, ವಿಚಾರಿಸಿ ನೋಡಲೆಂದರ್ಥ. ಭೇರಿನಾದದ ಪ್ರಭೆಯು ಬೆಳಗು ತೋರುವದೆಂದಡೆ ತನ್ನ ಮನೋ ಮೂರ್ತಿಯಪ್ಪ ಪ್ರಾಣಲಿಂಗ ವೆಂಬುದು ಆ ಸೋಹಂ ಎಂಬ ಶಬ್ದವನೊಳಕೊಂಡು ಓಂಕಾರ-ಪರಮ-ಸ್ವರೂಪಿನಿಂದ ಘಟ್ಟಿಗೊಂಡು, ಭೇರಿಯ ಧ್ವನಿಯಂತೆ ಪರಿಪೂರ್ಣವಾದ ಘೋಷವನುಳ್ಳದ್ದಾಗಿ ಬೆಳಗುತ್ತಿಹುದೆಂದರ್ಥ. ಊರಳಿದು ಎಂದಡೆ ಆ ನಾದ-ಬ್ರಹ್ಮ-ಲಿಂಗ-ಪರಿಣಾಮದೊಳಗೆ ತನ್ನ ಅಂತರಂಗದ ಕರಣಂಗಳೆಲ್ಲವು ವಿಶ್ರಾಂತಿಯ ನೈದಿದವೆಂದರ್ಥ. ಉಲುಹಡಗಿ ಎಂದಡೆ ಪರಾ, ಪಶ್ಯಂತಿ, ಮಧ್ಯಮೆ, ವೈಖರಿ ಎಂಬ ಚತುರ್ವಿಧ ಶಬ್ದಜಾಲಂಗಳು ಆ ನಾದಬ್ರಹ್ಮದ ನೆನಹಿನಲ್ಲಿ ನಿಶ್ಚಲವಾಗಿಹವು. ಭೇರಿನಾದವು ನಿಲ್ಲುವದು ಎಂ ದಡೆ ಬಿಂದುಮಯದಿಂದ ಸ್ಥೂಲರೂಪವೆನಿಸಿ ತೊರುವ ಆ ನಾದ-ಬ್ರಹ್ಮ-ಲಿಂಗವೆಂಬುದು ಬ್ರಹ್ಮರಂಧ್ರದಲ್ಲಿ ಕೇವಲ ಪರಮಾನಂದಮಯವಾಗಿ ತೋರುವ ಸೂಕ್ಷ್ಮನಾದವನೊಡಗೂಡಿ ಶತಪತ್ರಕಮಲ ಕುಹರದೊಳ ಗಣ ಚಿದಾಕಾಶ ಮಂಡಲದೊಳಗೆ ನಿಶ್ಶಬ್ದ ಬ್ರಹ್ಮಮಯವಾಗಿ ಪರಿಣಮಿ ಸುವದೆಂದರ್ಥ. ಆರು ಭೇದಿಸಿ ಕಾಣಲರಿದು ನೋಡಾ ಎಂದಡೆ ಆತ್ಮ ಚೈತನ್ಯವ ಬೇರಾಗಿ ತೋರದ ಆ ನಿಶ್ಶಬ್ದ ಬ್ರಹ್ಮದ ನಿಲುಗಡೆ ಎಂಬುದು ಶಿವಯೋಗಿಗಲ್ಲದೆ ಆತ್ಮಯೋಗ ಪರಿಣಾಮವುಳ್ಳವರ ಅರಿವಿಗೆ ಅಸಾಧ್ಯ ಎಂಬುದರ್ಥ.

ಪರಶಿವನ ಸಾಕಾರವೆನಿಸುವ ಲಿಂಗಸಂಯೋಗದಲ್ಲಿ ನಿರ್ವಯಲ ನಿಜ ಸಮಾಧಿ ಸಿದ್ಧಿಸುವದಲ್ಲದೆ ಲಿಂಗ ಚೈತನ್ಯ ಪ್ರವೇಶವಿಲ್ಲದ ಜಡಾತ್ಮಯೋ ಗದಿಂದ ಇದು ಅಸಾಧ್ಯವೆಂದು ತಾತ್ಪರ್ಯ.

ಗಗನ ಮಂಡಲ ಮಂಟಪದ ಮಧ್ಯದ ನಡುವೆ ।
ಮುಗಿಲೊಳಗೆ ಮಿಗೆವರಿದು ಮಿಂಚುದೋರೆ ।
ಜಗದ ಜೀವರು ಜಡರಿಗೆ ಕಾಣಬಾರದು ।
ಸೊಗಸು ಸುಜ್ಞಾನಿಗಳಿಗದು ಸಹಜವು ॥ ೨೮ ॥

## ಭಾವಾರ್ಥ

ಗಗನ ಮಂಡಲವೆಂದಡೆ ಸುಷುಮ್ನಾದ್ವಾರ. ಮಂಟಪವೆಂದಡೆ ಉಭಯ–ವಳಯ–ಸ್ಥಾನ. ಮಧ್ಯದ ನಡುವೆ ಎಂದಡೆ ಅವೆರಡೂ ಸ್ಥಾನಗಳ ನಡುವೆ ಮಧ್ಯವೆನಿಸುವ ತ್ರಿಕೋಣೆಯ ಸ್ಥಾನದಲ್ಲಿ ಸೋಹಂ ಭಾವದಿಂದ ಪ್ರಾಣವಾಯು ಶಿವಾನಂದ ಜಲವ ಧರಿಸಿಕೊಂಡು ನಿಶ್ಚಲವಾಗಿರುತ್ತಿರಲು ಅದೇ ಮುಗಿಲೆನಿಸುವುದು. ಅಂತಪ್ಪ ಮುಗಿಲಿನಲ್ಲಿ ಮಿಗೆವರಿದ ಮಿಂಚು ತೋರುವದೆಂದಡೆ ಆ ಸೋಹಂ ಭಾವದ ಚೈತನ್ಯವಿಡಿದಿಪ್ಪ ಚಿತ್ಪ್ರಾಣ ವಾಯುವಿನೊಳಗೆ ನಿವೃತ್ತಿ ಮುಖವನುಳ್ಳ ಮಹಾ ಜ್ಞಾನಾಗ್ನಿಸ್ವರೂಪಿನಿಂದ ಅಡಗಿದಂಥ ಪ್ರಾಣಲಿಂಗವೆಂಬುದು ಚಿದಾತ್ಮ-ಪ್ರಕಾಶ-ಸಂಪರ್ಕದಿಂದ ತಲೆದೋರಿ ಆ ಚಿತ್ಪ್ರಾಣ ವಾಯುವನೊಳಕೊಂಡು ಮಿಂಚಿನ ಬೆಳಗಿನಂತೆ ಪರಿಪೂರ್ಣ ಪ್ರಕಾಶಮಯವಾಗಿ ತೋರುತ್ತಿಹುದು. ಇದು ಜಗದ ಜೀವರು ಜಡರಿಗೆ ಕಾಣಬಾರದು ಎಂದಡೆ, ಜಡದೇಹಿಗಳಾದ ಕರ್ಮಯೋಗಿಗಳಿಗೆ ಅಂಗದ ಮೇಲೆ ಕ್ರಿಯಾ ಪ್ರಕಾಶವಿಲ್ಲದೆ ಪ್ರಾಣದ ಮೇಲೆ ಜ್ಞಾನ ಪ್ರಕಾಶ ನಿರ್ಧರವಾಗದು. ಹೀಗಾಗಿ ಅವರುಗಳಿಗೆ ತತ್ತ್ವಾಗ್ನಿ ಪ್ರಕಾಶದ ಲಕ್ಷಣವಲ್ಲದೆ ಚಿದಗ್ನಿಮಯ ಲಿಂಗದ ಪ್ರಕಾಶವು ತೋರದು. ಆದರೆ ಇದರ ಸೊಗಸು ಸುಜ್ಞಾನಿಗಳಿಗೆ ಸಹಜವು ಎಂದಡೆ, ಸೊಗಸೆಂಬ ಶಬ್ದವನ್ನುಳ್ಳ ಇಷ್ಟಾರ್ಥ ಜ್ಞಾನಿಗಳಪ್ಪ ಲಿಂಗಾಂಗ ಸಂಗಿಗಳಿಗೆ ಗುರೂಪದೇಶದಿಂದ ಚಿತ್ಪ್ರಾಣವೇ ಒಡುಲಾಗಿತ್ತಾಗಿ ಅವರಿಗೆ ತತ್ತ್ವಾಗ್ನಿ ಪ್ರಕಾಶವು ಲಕ್ಷ್ಯವಾಗಿ ತೋರದೆ ಚಿದಗ್ನಿಮಯವಾಗಿ ತೋರುವದೆಂದರ್ಥ.

ಚತುರ್ವೇದ ಚತುರ್ಯೋಗ ಚತುರ್ವಿಧದ ಮಂತ್ರದಿಂ ।
ದತಿಶಯದಿ ನೋಡಿ ನೋಡಿಯು ಕಾಣರು ।
ಅತಿ ಮೂಢ ಮತಿಹೀನರಿಗೆ ಕಾಣಬಾರದದು ।
ಮತಿ ಸಂಧಾನವ ಬೆರಸಿದಾತ ಬಲ್ಲ ॥ ೨೯ ॥

## ಭಾವಾರ್ಥ

ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಂಗಳು. ಇವುಗಳ ಉತ್ತರ ಭಾಗವೆನಿಸುವ ಉಪನಿಷದ್ವಾಕ್ಯಾರ್ಥಂಗಳಲ್ಲಿ ತತ್ತ್ವಮಸಿ ಪಥವಿಡಿದು ಬ್ರಹ್ಮೋಹಂ ಎಂಬ ಅದ್ವೈತ ಜ್ಞಾನಿಗಳು ನಿರಾಳ ಪರಬ್ರಹ್ಮವ ತಮ್ಮರುವಿನ ಮುಖದಿಂದ ಸಾಧಿಸುವ ಭೇದವೆಂತೆಂದಡೆ,ಇದಕ್ಕೆ ದೃಷ್ಟಾಂತ-ಸೂರ್ಯನ ಸನ್ನಿಧಾನದಲ್ಲಿ ಕಮಲ ಕಮುದಂಗಳು ಸಂಕೋಚವಿಕಾಸಂಗಳೆಂಬ ವಿಕಾರಂಗಳು ಹೇಗೆ ತಮ್ಮಿಂದ ತಾವೇ ತೋರುತ್ತಿಹವೋ ಹಾಗೆ ಸೃಷ್ಟಿ ನಿಮಿತ್ತಾರ್ಥವಾದ ಇಚ್ಛೆ ಅನಿಚ್ಛೆಗಳೆಂಬ ಎರಡಿಲ್ಲದೆ ಸ್ವಭಾವಸಿದ್ಧವಾಗಿದ್ದಂಥ ಪರಬ್ರಹ್ಮದ ಸನ್ನಿಧಾನ ಪ್ರಕೃತಿಯಲ್ಲಿ ಆ ಬ್ರಹ್ಮ ಚೈತನ್ಯ ಪ್ರತಿಬಿಂಬಿಸಲು ಆ ಪ್ರಕೃತಿಯ ವಿಕಾರದಿಂದ ಮಿಥ್ಯಾ ರೂಪವಾದ ಜಗತ್ತಾಯಿತ್ತು. ಆ ಜಗದ್ರೂಪವಾದ ದೃಶ್ಯ ಪದಾರ್ಥಂಗಳ ಕಾಣುವದಕ್ಕೆ ಆತ್ಮನು ಅಂತಹ ಶರಣ ಸಂಚಲ ವ್ಯವಹಾರಕ್ಕೆ ಸಾಕ್ಷಿಕನಪ್ಪುದದರಿಂದ ಬ್ರಹ್ಮವೆಂದರಿದು ಸಾಧಿಸುತ್ತಿಹರು. ಹೀಗೆಂದು ಅರಿದಲ್ಲಿ ಅಹಂ ಬ್ರಹ್ಮವೆಂಬದು ಶಬ್ದ ಸುಖ ಮಾತ್ರವಲ್ಲದೆ ಬ್ರಹ್ಮ ಸಾಧ್ಯವಾಗಲರಿಯದು. ಅದು ಹೇಗಂದಡೆ, ಪ್ರಕೃತಿಮಯುವಪ್ಪ ಜಡತತ್ತ್ವ ಕರಣಂಗಳಿಗೆ ಸಂಚಲ ವ್ಯವಹಾರವಲ್ಲದೆ ಚೈತನ್ಯನಾದ ಆತ್ಮಂಗೆ ಸಂಚಲ ವ್ಯವಹಾರವಿಲ್ಲ. ಇದಕ್ಕೆ ದೃಷ್ಟಾಂತ-ಜಡರೂಪಂಗಳಪ್ಪ ಧಾನ್ಯವ ಬೀಸುವದಕ್ಕೆ ಬೀಸುವ ಕಲ್ಲು, ಕಾಷ್ಟವ ಕಡಿಯುವುದಕ್ಕೆ ಕೊಡಲಿ, ಕರಗಸ ಇವುಗಳನ್ನು ಹಿಡಿಯಲಿಕ್ಕೆ ಒಬ್ಬ ಪುರುಷನ ಚೈತನ್ಯ ಶಕ್ತಿಯಿಲ್ಲದೆ ಸಂಚಲ ವ್ಯವಹಾರಂಗಳು ಹುಟ್ಟಲಿಲ್ಲವಾಗಿ ಅದರಂತೆ ಆತ್ಮ ಚೈತನ್ಯವಿಲ್ಲದೆ ಕರಣಂಗಳಿಗೆ ಸಂಚಲ ವ್ಯವಹಾರಂಗಳು ತಮ್ಮಿಂದ ತಾವೇ ಹುಟ್ಟಲರಿಯವು. ಇಂತೀ ವಿಚಾರ ಮುಖದಿಂದ ನೋಡಲು ಶರೀರವೆಂಬ ಉಪಾಧಿಯೊಳಗಿಪ್ಪ ಆತ್ಮಂಗೆ ಪ್ರೇರಕವಾಗಿ ಶಿವನೇ ಪತಿಯೆನಿಸುವನು. ಇದು ಕಾರಣ ಶಿವಪ್ರಸಾದದಿಂದ ಹುಟ್ಟುವ ಶಿವಜ್ಞಾನಕ್ಕೆ ಪರಬ್ರಹ್ಮವೆನಿಸಿಕೊಂಬ ಪರಶಿವನು ಸಾಧ್ಯನಹನಲ್ಲದೆ ಮಾಯಾಹಮ್ಮಿನಿಂದ ಹುಟ್ಟುವ ಆತ್ಮಜ್ಞಾನಕ್ಕೆ ಅಸಾಧ್ಯವೆಂಬುದರ್ಥ.

ಮುಂದೆ ರಾಜಯೋಗ, ಮಂತ್ರಯೋಗ, ಹಠಯೋಗ ಮತ್ತು ಲಯಯೋಗವೆಂಬ ಚತುರ್ವಿಧ ಯೋಗ ಲಕ್ಷಣವೆಂತೆಂದಡೆ–ತನ್ನ ಹೃದಯದಲ್ಲಿ ಪರಮಾತ್ಮನ ಧ್ಯಾನಿಯಾಗಿ, 'ಓಂ ಪರಮ ಹಂಸಾಯ ನಮಃ' ಎಂಬ ಮಂತ್ರವಿಡಿದು ಪ್ರಣಮ ಪೂರ್ವಕವಾಗಿ ಆ ಹಂಸ ಮಂತ್ರವನ್ನು ಪುನಶ್ಚರಣೆಯ ಜಪ ಮಾಡಿದಬಳಿಕ ಈಡಾ ಪಿಂಗಳದಗ್ರದ ತ್ರಿಕೋಣೆಯ ಸ್ಥಾನದ ಶಿವಬೀಜಾಕ್ಷರದಲ್ಲಿ ' ಓಂ ' ಎಂದು ಒಂದೇ ವರ್ಣ ಸ್ವರೂಪಿನಿಂದ ನಿಲ್ಲಿಸುವದೇ **ಮಂತ್ರಯೋಗ.** ಆ ತ್ರಿಕೋಣೆಯ ಸ್ಥಾನದಲ್ಲಿ ಮೇಘನಾದ, ಭೇರಿನಾದ, ಘಂಟಾನಾದಂಗಳು ಪ್ರತ್ಯಕ್ಷವಪ್ಪವವು. ಮತ್ತಾ ಕಾಯಕ್ಕೆ ಕಾಂತಿ, ಮುಖಕ್ಕೆ ಪ್ರಸನ್ನತೆ, ನೇತ್ರಂಗಳಿಗೆ ನಿರ್ಮಲತೆ, ಘ್ರಾಣಕ್ಕೆ ಸುಗಂಧ ತೋರುವದೇ **ಮಂತ್ರಯೋಗಸಿದ್ಧಿ** ಯೆನಿಸುವದು. ಮತ್ತಾ ಮಂತ್ರಯೋಗಿಯಾದಾತನ ಪರಮಾತ್ಮ ಚೈತನ್ಯವೆನಿಸುವ ವಿದ್ಯಾಕರಣವೆಂಬುದು ಮನ ಮಾರುತಂಗಳೊಡನೆ ಕೂಡಿ ಸುಷುಮ್ನಾ ದ್ವಾರದೊಳಗೆತ್ತಿಸುವದೇ **ಲಯಯೋಗ** ವೆನಿಸುವದು. ಆ ಲಯಸ್ಥಾನದಲ್ಲಿ ಗಂಭೀರವಾದ ದುಂದುಭಿಯ ನಾದಂಗಳನು ಪ್ರತ್ಯಕ್ಷವಪ್ಪದೇ **ಲಯಯೋಗ ಸಿದ್ಧಿ** ಯೆನಿಸುವದು. ಇನ್ನು ಹೃದಯಾಸ್ಥಾನದಲ್ಲಿ ಪ್ರಾಣವಾಯುವನ್ನು, ನಾಶಿಕ ದ್ವಾರದಲ್ಲಿ ಸೂಸಲೀಯದೆ ಊರ್ಧ್ವಗತಿಯನ್ನೈದಿಸುವ ಸುಷುಮ್ನಾ ಸ್ಥಾನದಲ್ಲಿ ಪೂರ್ಣ ಕುಂಭದಂತೆ ಆ ಪ್ರಾಣವಾಯುವ ತನ್ನ ವಶಗತವಾಗಿ ನಿಲಿಸುವದೇ **ಹಠಯೋಗ** ಎನಿಸುವದು. ಇಂತು ವಾಯು ನಿಂದಲ್ಲಿ ಶರೀರ ಸಿದ್ಧಿಯಾಗಿ ಅಣಿಮಾದಿಗಳು ಫಲಿಸುವದೇ **ಹಠ-ಯೋಗ-ಸಿದ್ಧಿ** ಎನಿಸುವದು. ಇನ್ನು ಅಂತರ್ಬಾಹ್ಯ ದೃಷ್ಟಿ ಮನಸುಗಳ ಹೊರಹೊಮ್ಮಲೀಯದೆ ಸುಷುಮ್ನಾ ದ್ವಾರದಲ್ಲಿ ತಡೆದು ನಿಲ್ಲಿಸುವಂಥ ಮುದ್ರಾಜ್ಞಾನದಿಂದ ನಾದಬ್ರಹ್ಮ ಸಾಕ್ಷಾತ್ಕಾರಮಂ ಕಂಡು ಕೂಡುವದೇ **ರಾಜಯೋಗ** ಎನಿಸುವದು. ಆ ನಾದ-ಮಧ್ಯ-ಗತವಾದ ಮನೋನ್ಮನಿಯೆಂಬ ಶಿವಶಕ್ತಿಯಲ್ಲಿ ಆಕಾಶ ಪ್ರಕಾಶ ಯೋಗದಂತೆ ಜೀವನ್ಮುಕ್ತಿ ಫಲಿಸಿಪ್ಪುದೇ **ರಾಜಯೋಗ-ಸಿದ್ಧಿ** ಎನಿಸುವದು. ಇಂತೀ ಕ್ರಮವ ಒಳಗೆ ಸಾಧಿಸಿ ಕಂಡಿಹೆನೆಂದಡೆ ಧ್ಯಾನಾನಂದ ಮಾತ್ರಕ್ಕೆ ಅದು ಸಾರುವದಲ್ಲದೆ ವಸ್ತುಸಿದ್ಧಿಯಾಗದು. ಅದು

ಹೇಗಂದಡೆ–ನಿರಾಕಾರ ವಸ್ತುವೆಂಬುದು ತನ್ನ ಸ್ವರೂಪವೆನಿಸುವ ಶಿವ ಲಿಂಗ ಧಾರಣ, ಶಿವಪೂಜೆ, ಶಿವಭಕ್ತಿ, ಶಿವಜ್ಞಾನ, ಶಿವಧ್ಯಾನವೆಂಬ ಶಿವ ಯೋಗ ಪಂಚಕದಿಂದ ಸಾಧ್ಯವಪ್ಪುದು ಸತ್ಯವಲ್ಲದೆ, ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತಾಗಿದ್ದಂಥ ಪೂರ್ಣವಸ್ತುವೆಂಬುದು ನಾದ ಬಿಂದುಗಳ ಉಪಾಧಿಯಲ್ಲಿ ತೋರಿದಡೆಯೂ ಅದು ಕನಸಿನ ಸಿರಿಯಂತೆ ಮರಳಿ ಅಡಗಿ ಹೋಗುವದೆಂಬುದರ್ಥ.

ಮುಂದೆ ಚತುರ್ವಿಧ ಮಂತ್ರಲಕ್ಷಣವೆಂತೆಂದಡೆ–ಪರಾ, ಪಶ್ಯಂತಿ, ಮಧ್ಯಮೆ, ವೈಖರಿ ಎಂಬ ನಾಲ್ಕು ತರದ ಮಂತ್ರಗಳು. ಓಂ ಎಂಬ ಏಕಾಕ್ಷರ ಮಂತ್ರ, ಹಂಸಃ ಎಂಬ ಆತ್ಮ ಪ್ರಸಾದ ಮಂತ್ರ, ಓಂ ನಮಃ ಶಿವಾಯ ಎಂಬ ಷಡಕ್ಷರ ಮಂತ್ರ, ಓಂ, ಹ್ರಾಂ, ಹ್ರಿಂ ನಮಃಶಿವಾಯ ಎಂಬ ಅಷ್ಟಾಕ್ಷರ ಮಂತ್ರವೆಂದು ನಾಲ್ಕು ತೆರನಾದ ಮಂತ್ರಂಗಳಿಹವು. ಇವುಗಳ ಮುಖದಿಂದ ಮಂತ್ರ ಮೂರ್ತಿ ಧ್ಯಾನಂಗಳು ಪರಶಿವನ ಸಾಧಿಸುವ ಕ್ರಮವೆಂತೆಂದಡೆ– ಲೋಕದ ದೃಷ್ಟಾಂತರದೊಳು ಒಬ್ಬನ ಹೆಸರುಗೊಂಡು ಕರೆಯಲ್ಕೆ ಅತನು ಸಮೀಪಕ್ಕೆ ಬಪ್ಪಂತೆ ಮಂತ್ರಂಗಳು ಶಿವನ ನಾಮವಾದುದರಿಂದ ಮಂತ್ರ ಧ್ಯಾನದಲ್ಲಿ ಶಿವನು ನೆಲೆಗೊಂಡಿಪ್ಪ ನೆಂದು ಭಾವಿಸಿಕೊಂಡು ಬಳಿಕ ಆಯಾ ಮಂತ್ರಂಗಳಲ್ಲಿ ಕಲ್ಪಿಸಿ ಹೇಳ ಲ್ಪಟ್ಟ ಕ್ರಿಯಾ ವಿಧಾನಂಗಳಿಂದ ಪುನಶ್ಚರಣೆಯ ಜಪಂಗಳ ಮಾಡಿ ಆಯಾ ಧ್ಯಾನ ಮೂರ್ತಿಗಳಲ್ಲಿ ತನ್ನ ಚಿತ್ತವ ಕರಿಗೊಳಿಸಿ ಭಾವ ಸಮ ರಸವಾಗಿಪ್ಪುದೇ ಮೋಕ್ಷವೆಂದು ಸಾಧಿಸುತ್ತಿಹರು. ಹೀಗೆ ಸಾಧಿಸಿ ಕಂಡಿ ಹೆನೆಂಬವರಿಗೆ ಶಿವನು ಅಸಾಧ್ಯವಾಗಿಪ್ಪನು. ಅದು ಹೇಗೆಂದಡೆ–ಮಹಾ ಲಿಂಗ ಮಧ್ಯದಲ್ಲಿಯೆ ಮಂತ್ರ, ಆ ಮಂತ್ರದ ಮಧ್ಯದಲ್ಲಿ ಶಿವನಿರುತಿಹ ನಾಗಿ ಆ ಲಿಂಗ ಮಂತ್ರಂಗಳೆರಡರ ಏಕ ಸ್ವರೂಪವಪ್ಪ ಇಷ್ಟಲಿಂಗವನಂ ಗೀಕರಿಸಿದೊಡೆ ಆ ಇಷ್ಟಲಿಂಗದೊಳಗೆ ಚಿತ್ಕಲಾ ಸ್ವರೂಪನಾಗಿ ಬೆರೆದು ಮನದೊಳಗೆ ಮಂತ್ರ ಮೂರ್ತಿಯಾಗಿ ತೊಳಗಿ ಬೆಳಗಿ ಒಳಹೊರಗೆ ಭರಿ ತನಾಗಿಪ್ಪನು. ಇಂತಲ್ಲದೆ ವಾಙ್ಮನಕ್ಕಗೋಚರನಾದ ಪರಶಿವನು ವಿಶ್ವಾಸ ಹೀನರಿಗೆ ತೋರದೆ ಜಾರಿ ಹೋಗುವನೆಂಬುದರ್ಥ.

ಅತಿ ಮೂಢರೆಂದರೆ—ಕರ್ಮಕಾಂಡಿಗಳು. ತಾವು ಅನಾದಿ ನಿರ್ಮಲ ಲಿಂಗವ ಮುಟ್ಟಿ ಮತ್ತೆ ಮಲಿನ ಭಾವಿಗಳಾಗುತ್ತಿದ್ದ ಕಾರಣ ಅವರು ಅತ್ಯಂತ ಹೆಡ್ಡರುಗಳೆನ್ನಿಸಿಕೊಳ್ಳುವರು. ಇನ್ನು ಮತಿಹೀನರೆಂದರೆ –ಆತ್ಮನು ಶಿವಾಂಶಿಕನಲ್ಲದೊಡೆ ಶಿವಲಾಂಛನ ಸಂಬಂಧವಪ್ಪುದೇ ಎಂಬ ಸೂಕ್ಷ್ಮ ವಿಚಾರ ಬುದ್ಧಿ ಅವರುಗಳಿಗೆ ಇಲ್ಲವೆಂಬುದರ್ಥ. ಇದಾಗಿ ಆವರುಗಳಿಗೆ ಮುಕ್ತಾತ್ಮರೆಂದು ಆತ್ಮಸ್ವರೂಪಕ್ಕೆಡೆ ತೋರುವ ಭಿನ್ನ ಮೋಕ್ಷ ಪದವಲ್ಲದೆ ಆ ಅವಿರಳ ಪರಮ ಶಿವೈಕ್ಯ ಪದವು ಸಾಧ್ಯವಾಗದೆಂಬುದೀಗ ಅತಿ ಮೂಢ ಮತಿಹೀನರಿಗೆ ಅದು ಕಾಣಬಾರದೆಂಬ ಶಬ್ದಕ್ಕರ್ಥ. ಇನ್ನು ಮತಿ ಸಂಧಾನವೆಂದಡೆ–ಶರಸಂಧಾನದ ಹಾಗೆ. ಇಷ್ಟಲಿಂಗದಾದಿವಿಡಿದು ಶಿವತತ್ತ್ವಕ್ಕೂ ತನಗೆಯೂ ಹರುಕಿಲ್ಲದೆ ನೋಡುವಂಥ ಮಹಾಜ್ಞಾನ ದೃಷ್ಟಿಯು ವಿವೇಕವೆಂಬುದರ್ಥ. ಇಂತಪ್ಪ ಸದ್ವಿವೇಕದಲ್ಲಿ ತತ್ಪರನಾದ ಶಿವಶರಣನು ಶಿವತತ್ತ್ವದ ನಿಜವನರಿದು ಬೆರಸುತ್ತಿಹನು. ಅದು ಹೇಗೆಂದಡೆ– ಆ ಶಿವತತ್ತ್ವವೆಂಬುದು ತಾನೊಂದೇ ಪಂಚಸಾದಾಖ್ಯ ಲಿಂಗಸ್ವರೂಪವಾಗಿರುತ್ತಿರಲು ಇಷ್ಟಲಿಂಗದಾದಿವಿಡಿದು ನೋಡುವ ಶರಣನ ಚೈತನ್ಯ ದೃಷ್ಟಿಯೆಂಬುದು ಆಯಾ ಲಿಂಗದಲ್ಲಿ ಬೆರೆದು ಹೋಗಿ ಶಿವತತ್ತ್ವವನಾಶ್ರಯಿಸಿಹುದು. ಇದಾಗಿ ಅಂಗದ ಕಳೆಗಳು ಲಿಂಗದೊಳಡಗಿ ಶಿವತತ್ತ್ವವನೈದುವನೆಂಬುದರ್ಥ.

ಆತ್ಮಾರ್ಥವಾದ ಕ್ರಿಯಾ-ಜ್ಞಾನ-ಯೋಗ-ಮಂತ್ರ ಸಾಧಕರುಗಳಿಗೆ ತತ್ತ್ವಾಂತರದ ಪದ-ಸ್ಥಾನ-ಫಲ-ಪ್ರಾಪ್ತಿಗಳಲ್ಲದೆ ಮೇಲಣ ಶಿವಪದವಿಲ್ಲವೆಂಬುದು ಈ ಸೂತ್ರದ ತಾತ್ಪರ್ಯಾರ್ಥ.

ಮಾತು ಮಥನವ ನುಂಗಿ । ನೀತಿ ನಿಜದಲಿ ನಿಂದು ।
ಭ್ರಾಂತು ಭ್ರಮೆಗಳನಳಿದಡಾತ ಯೋಗಿ ।
ಓತು ನಿಬ್ಬೆರಗಾಗಿ ನಿರ್ವಯಲ ನಿರ್ದೇಹಿ ।
ನಿಜಾರ್ತ ಕೂಡಲ ಚೆನ್ನಸಂಗಯ್ಯನು ॥ ೩೦ ॥

## ಭಾವಾರ್ಥ

ಮಾತು ಮಥನವ ನುಂಗಿ ಎಂದಡೆ, ಅಹಂ ಬ್ರಹ್ಮವೆಂದುಲಿವ ಶಬ್ದಾಡಂಬರದ ನುಡಿಗಳು ಮಿಥ್ಯವೆಂದು ಕಳೆದು ಶಿವಾದ್ವೈತ ಜ್ಞಾನಿಯಾಗಿ ಸುಸ್ಥಿರವಾಗಿಪ್ಪದು. ನೀತಿ ನಿಜದಲಿ ನಿಂದು ಎಂದಡೆ, ಉಪಾಧಿವಿಡಿದರ್ಚಿಸುವ ದ್ವೈ—ಕ್ರಿಯಾ ಮಾರ್ಗವಳಿದು ಸಹಜ ಭಕ್ತಿ ಕ್ರಿಯೆಯಲ್ಲಿ ತರಹರವಾಗಿ ಎಂಬುದರ್ಥ. ಭ್ರಾಂತಿ ಎಂದಡೆ ತನ್ನನಿದಿರಿಟ್ಟು ಅರಿಯಬೇಕೆಂಬ ಮನೋಚಿಂತನೆಯಲ್ಲಿ ಮುಳುಗಿಪ್ಪುದು. ಭ್ರಮೆ ಎಂದಡೆ ಭಾವ ತೊಳಲುತ್ತಿಪ್ಪುದೇ ಭ್ರಮೆ ಎನಿಸುವದು. ಇಂತು ಅಜ್ಞಾನ-ವೃತ್ತಿ-ಭೇದವುಳ್ಳನ್ನಕ್ಕ ತನ್ನ ನಿಜವನರಿಯಬಾರದಾಗಿ ಆ ಎರಡೂ ಭೇದವನು ಶಿವಾದ್ವೈತ-ಜ್ಞಾನ-ಮುಖದಿಂದ ನಿವೃತ್ತಿಯ ಮಾಡಿದಡೆ ಅವಿರಳ ಶಿವಯೋಗ ಸಂಪನ್ನನಹನೆಂಬುದೀಗ ಭ್ರಾಂತು ಭ್ರಮೆಗಳ ನಳಿದಡಾತ ಯೋಗಿ ಎಂಬ ಶಬ್ದಕ್ಕರ್ಥ. ಇಂತು ವಾಗದ್ವೈತ ಭಿನ್ನ-ಕ್ರಿಯಾ-ಸಂಕಲ್ಪದರಿವೆಂಬುದನತಿಗಳೆದಾತನು ನಿಜವನೈದುವ ತೆರನೆಂತೆನಲು ಭಾವಾದಿ ತತ್ತ್ವಾತ್ಮಕ ಗುಣಂಗಳು ಮಹಾಲಿಂಗದೊಳಗೆ ಬೆಂಬಳಿವಿಡಿದೈದು ತಮ್ಮ ತಮ್ಮಿರವ ಅರಿತು ಪರವಶವಾಗಿ ನಿಂದು ಮತ್ತಂ ದಗ್ಧಪಟನ್ಯಾಯದಂತೆ ಅವಯವಂಗಳಾಕಾರ ಗುಣ ನಷ್ಟವಾಗಿ ತೋರುತ್ತ ಹುರಿದ ಬೀಜದಂತೆ ಶಿವಜ್ಞಾನಾಗ್ನಿಯಲ್ಲಿ ಪ್ರಾಣಗುಣವ ದಹಿಸಿ ಜನನಾಂಕುರವು ನಾಶವಾಗಿ ತನ್ನ ಮಹಾಲಿಂಗದೊಳಗೆ ಬೆರೆದ ಲಿಂಗೈಕ್ಯನು ಉರಿಯುಂಡ ಕರ್ಪುರದಂತೆ ಆ ಲಿಂಗವೇ ನಿಜವಾದನೆಂಬುದೀ ವಚನಾರ್ಥ.

ಇಲ್ಲಿಗೆ ಮಹಾ—ಲಿಂಗೈಕ್ಯ—ಸ್ಥಲ ಸಮಾಪ್ತಂ.

## ಜ್ಞಾನಶೂನ್ಯ ಸ್ಥಲ

ಇಂತು ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವೆಂಬ ಪರಬಿಂದುವಿನೊಡನೆ ಸಚ್ಚಿದಾನಂದ ಲಕ್ಷಣದಿಂದ ಬೆರದು ಬೆಳಗುವ ಮಹಾಲಿಂಗ

ದಲ್ಲಿ ಷಟ್‌ಸ್ಥಲದ ಜ್ಞಾನಾನುಭಾವ ಸಮರಸದಿಂದ ಐಕ್ಯವಾದ ಶರಣಂಗೆ ಸದ್ರೂಪಿನ ಭಾವ ಅಸದ್ರೂಪಿನ ಭಾವವೆಂಬವೆರಡೂ ಆ ಲಿಂಗದಲ್ಲಿ ನಷ್ಟವಾದವಾಗಿ ಅರಿವಿನ ಜ್ಞಾನ ಅರುಹಿಸಿಕೊಂಬ ವಸ್ತುವೆಂಬೆರಡಿಲ್ಲದೆ ಕೇವಲ ಚಿದಾಕಾಶಮಯವನೈದುತ್ತಿರಲು ಮುಂದೆ ಜ್ಞಾನ-ಶೂನ್ಯ-ಸ್ಥಲ ವಾದುದು.

ಎಲೆಯಿಲ್ಲದ ವೃಕ್ಷ ಫಲವಿಲ್ಲದ ಹಣ್ಣು ।
ಮೆಲಲ್ಲಿದ ರುಚಿಯು ಸವಿದು ಸವಿದು ॥

## ಭಾವಾರ್ಥ

ಎಲೆಯಿಲ್ಲದ ವೃಕ್ಷ ಎಂದಡೆ, ನಾದಬಿಂದು, ಕಲಾತೀತ, ನಿಶ್ಶಬ್ದ, ಸಚ್ಚಿದಾನಂದ ಬ್ರಹ್ಮವೆಂಬುದೊಂದು ಕಲ್ಪವೃಕ್ಷವಿಹುದೆಂದರ್ಥ. ಫಲವಿಲ್ಲದ ಹಣ್ಣು ಎಂದಡೆ ಆ ವೃಕ್ಷದಲ್ಲಿ ಸಮಸ್ತ ಫಲ ಪದಂಗಳೆಂಬ ಕಾಮಿಗಳ ತೋರಿಕೆ ಏನೂ ಹೊದ್ದದೆ ನಿತ್ಯ ನಿಜ ಮೋಕ್ಷವೆಂಬದೊಂದು ಹಣ್ಣು ಉಂಟೆಂಬುದರ್ಥ. ಮೆಲಲಿಲ್ಲದ ರುಚಿಯು ಎಂದಡೆ, ಬ್ರಹ್ಮಾದಿಗಳು ಸ್ವೀಕರಿಸುವದಕ್ಕೆ ಅಸಾಧ್ಯವಾಗಿದ್ದ ಚಿತ್ಸುಖಾಮೃತ ರಸದ ರುಚಿಯು ಆ ಮೋಕ್ಷ ಫಲದಲ್ಲಿ ಭರಿತವೆಂದರ್ಥ. ಸವಿದು ಸವಿದು ಎಂದಡೆ ಅಮೃತವೇ ರುಚಿ, ರುಚಿಯೇ ಅಮೃತವಾಗಿಪ್ಪಂತೆ, ಚಿತ್‌ಸ್ವರೂಪನಾದ ಲಿಂಗೈಕ್ಯನು ತನ್ನ ಚಿತ್ಸುಖಾಮೃತ ರಸವನು ಸ್ವೀಕರಿಸಿ ನಿತ್ಯತೃಪ್ತನಾಗಿ ಹನೆಂಬುದರ್ಥ.

**ತಾತ್ಪರ್ಯ**— ಸುಖರೂಪವೇ ಲಿಂಗ, ಸುಖವೆಂಬ ಶರಣನೇ ಆ ಲಿಂಗದ ಚಿದಂಗ, ಸುಖದನುಭಾವವೆಂಬುದೇ ಆ ಲಿಂಗದೊಳಗಣ ಸಮರಸ ಸದ್ವಾಸನೆ ಎನಿಸಿತ್ತಾಗಿ ಅಲ್ಲಿ ಸುಖಿ ನಾನೆಂಬುದಕ್ಕೆ ಕಿಂಚಿತ್ತಾದರೂ ತೆರಪಿಲ್ಲೆಂದು ಲಿಂಗೈಕ್ಯರ ವಿಚಾರವೆಂದು ತಾತ್ಪರ್ಯ.

ಸುಲಲಿತ ಸೂಕ್ಷ್ಮದ । ನಿಲವು ನಿಜದೊಳಡಗಿ ।
ಉಲುಹಡಗಿ ಉನ್ಮನಿಯ ಸ್ಥಾನದೊಳಗೆ ।
ನೆನಹಳಿದು ಮನವಳಿದು ತಾನು ತಾನಾದಲ್ಲಿ ।
ವಾಙ್ಮನಕಗೋಚರವು ನಿರ್ವಯಲಾದುದು ॥ ೩೧ ॥

## ಭಾವಾರ್ಥ

ಸುಲಲಿತ ಸೂಕ್ಷ್ಮದ ನಿಲವೆಂದಡೆ, ಸೂಕ್ಷ್ಮ ತನುವೆಂಬ ಅಂತರಂಗದಲ್ಲಿ ಅಜ್ಞಾನ–ಸಂಶಯ–ವಿಪರೀತಗಳೆಂಬ ಕಳಂಕ ಹೊದ್ದದೆ ಸ್ವಯಂ ಭಾವ ಪ್ರಕಾಶದಿಂದೊಪ್ಪುತ್ತಿದ್ದಂಥ ತನ್ನ ಸಮ್ಯಕ್ ಜ್ಞಾನದ ನಿಲುಗಡೆಯು ಎಂದರ್ಥ. ಉನ್ಮನಿ ಸ್ಥಾನದ ನಿಜದೊಳಗೆ ತಾನಡಗಿ ಎಂದಡೆ, ಮನದಿಂದುತ್ತರವಾಗಿ ಉನ್ಮನಿಯ ಸ್ಥಾನವೆನಿಸಿಕೊಂಬ ಬ್ರಹ್ಮರಂಧ್ರದಲ್ಲಿ ಬೆಳಗುವ ಚಿದ್ಘನಲಿಂಗದೊಳಗೆ ತನ್ನ ಸಮ್ಯಕ್ ಜ್ಞಾನದ ನಿಲುಕಡೆಯೆಂಬುದು ನಿರ್ವಿಕಲ್ಪ ಚಿತ್ತಿನ ದೃಷ್ಟಿವಿಡಿದು ನಿಷ್ಪತ್ತಿಯಾಯಿತ್ತೆಂದರ್ಥ. ಉಲುಹಡಗಿ ನೆನಹಳಿದು ಮನವಳಿದು ಎಂದಡೆ ವಾಚ್ಯರೂಪವಾದ ಶಬ್ದಗಳು ಆ ಶಬ್ದಾರ್ಥಂಗಳ ಚಿಂತಿಸುವ ನೆನಹು ಆ ಚಿಂತಿಸಿದರ್ಥವ ಕಲ್ಪಿಸಿ ಹಿಡಿವ ಮನಸ್ಸುಗಳೆಂಬ ತ್ರಿವಿಧವು ಉನ್ಮನಿಯ ಚಿತ್ತವನೊಡಗೂಡಿ ಆ ಚಿದ್ಘನಲಿಂಗದೊಳಗೆ ವಿಶ್ರಾಂತಿಯನ್ನೈದಿದವೆಂದರ್ಥ. ತಾನು ತಾನಾದಲ್ಲಿ ಎಂದಡೆ, ಕ್ಷೀರ ಕ್ಷೀರ ಬೆರೆದು ಏಕ ರಸಮಯವಾದಂತೆ ತನ್ನ ಮನ, ಭಾವ, ಜ್ಞಾನ, ಚೈತನ್ಯಂಗಳೆಲ್ಲವೂ, ಆ ಚಿದ್ಘನಲಿಂಗದೊಳಗೆ ಬೆರೆದು ಕೇವಲ ಚಿದಾನಂದ ರಸಮಯವಾದ ನಿಲುಕಡೆಯೆಂದರ್ಥ. ವಾಙ್ಮನಕ್ಕಗೋಚರವು ನಿರ್ಣಯಿಲಾದುದು ಎಂದಡೆ, ಆ ಸಮರಸೈಕ್ಯದ ನಿಲುಕಡೆಯೆಂಬುದು ವಾಙ್ಮನಸ್ಸುಗಳ ಕಲ್ಪಿತದ ಅರಿವಿಂಗೆ ಅಭೇದ್ಯವೆನಿಸಿ ಬಚ್ಚ ಬರಿಯ ಆಕಾಶದಂತೆ ಪರಿಪೂರ್ಣ ಚಿದಾಕಾಶಮಯವನ್ನೈದಿತ್ತಿಹುದೆಂಬುದರ್ಥ.

ಸುಜ್ಞಾನದ ಪ್ರಭೆಯ ಪ್ರಕಾಶದ ಭೇದದೊಳು ।
ಪ್ರಜ್ಞಾನದ ಪ್ರಭೆಯ ಬೆಳಗುದೋರೆ ।
ಅಜ್ಞಾನ-ತಿಮಿರ-ಹರ ಅಂಜನದ ಭೇದದೊಳು ।
ಪ್ರಜ್ಞಾನ ತಾ ಮನವ ನುಂಗಿತಲ್ಲಿ ॥ ೩೨ ॥

## ಭಾವಾರ್ಥ

ಮನವಳಿದು ಮನೋಮೂರ್ತಿ ಲಿಂಗ ಪ್ರಕಾಶದೊಳಗೆ ನಿಂದ ಶರಣಂಗೆ ಶಂಕಾವೃತ್ತಿಯ ತಮಸ್ಸು ಹೋಯಿತ್ತು. ಹೇಗಂದಡೆ–ತೀಕ್ಷ್ಣ

ವಾದ ಅಂಜನದ ಭೇದಕತ್ವದಿಂದ ಕಣ್ಣೊಳಗಣ ತೇಜ ದೀಪ್ತಿಯನ್ನೈದು ಮುಂದೆ ಕವಿದಿರ್ದ ಮಂಜು ಹರಿದು ಹೋದ ಹಾಗೆ ಸದ್ಗುರು ಕಾರುಣ್ಯ ವೆನಿಸುವ ಸಮ್ಯಕ್ ಜ್ಞಾನದ ಪ್ರಕಾಶದ ಬೆಳಗಿನ ವಿಚಾರದಿಂದ ಪರಶಿವ ತತ್ತ್ವವನವಲಂಬಿಸಿಕೊಂಡು ತೋರುವ ಅಖಂಡ-ಪರಿಪೂರ್ಣ-ಜ್ಞಾನ-ಪ್ರಕಾಶದ ಬೆಳಗು ಉದಯವಾಗಲಾಗಿ ಸಂಜೆಯ ಮಂಜಿನ ಕಪ್ಪಿನಂತೆ ಮನವ ಮುಸುಕಿಕೊಂಡಿರ್ದ ಅವಿದ್ಯಾ–ಶಕ್ತಿಯೆಂಬ ತಮಸ್ಸು ಆ ಕ್ಷಣದಲ್ಲಿ ತೊಲಗಿ ಹೋಗಿ ನಿಜ ಭಾವ ಪ್ರಕಾಶವೇ ನಿರ್ಧರವಾಗಿತ್ತೆಂಬುದೀಗ–ಸುಜ್ಞಾನದ ಪ್ರಭೆಯ ಪ್ರಕಾಶದ ಭೇದದೊಳು ಎಂಬ ಶಬ್ದಕ್ಕರ್ಥ. ಪ್ರಜ್ಞಾನ ತಾ ಮನವ ನುಂಗಿತಲ್ಲಿ ಎಂದಡೆ–ತಾನಾರೆಂಬ ಸಂಶಯವಳಿದು ನಿಜ ಭಾವ ಪ್ರಕಾಶದ ನೆನಹಿನ ಪೂರ್ಣದೊಳಗಿಪ್ಪ ಮನಸ್ಸನ್ನು ಆ ಪರ ಶಿವ ಜ್ಞಾನವೆಂಬುದು ತನ್ನೊಳಗೆ ಅಡಗಿಸಿಕೊಂಡಿರ್ಪುದೆಂಬುದರ್ಥ.

ಮರು ಜೀವಣಿಯ ಹಣ್ಣು ಕುರುಹಳಿದ ಬೀಜವನೊಂ ।
ದಿರುಹೆ ನುಂಗಿದ ಕಂಡು ಬೆರಗಾದೆನು ।
ಸೆರಗ ಸೀಳಿದ ಅರುವೆ ಬರಿಯ ಕುರುಹನೆ ಕಟ್ಟಿ ।
ಬರಿದಾದ ಬರು ಮನದಿ ಮರಗುತಿರ್ದೆ ॥ ೩೩ ॥

## ಭಾವಾರ್ಥ

ಮರುಜೀವಣಿಯ ಹಣ್ಣೆಂದಡೆ– ಸಂಸಾರದ ಮರವೆಯಿಂದ ಜೀವನ್ಮೃತನಾದ ದೇಹಿಗೆ ಮರಳಿ ನಿತ್ಯಾನಿತ್ಯ ವಿವೇಕವೆಂಬ ಚೈತನ್ಯವ ಕೊಡುವಂಥ ಮಹಾ ಪ್ರಸಾದವೆನಿಸಿಹುದು. ಕುರುಹಳಿದ ಬೀಜವೆಂದಡೆ–ದೃಕ್ಕು ಮನಸಂಗಳ ಲಕ್ಷ ಮಾತ್ರಕ್ಕೆ ಬಾರದಂಥ ಚಿದ್ಘನಲಿಂಗವೆಂಬುದು ಅಮೃತ ಪ್ರಸಾದದೊಳಡಗಿಹುದೆಂಬುದರ್ಥ. ಒಂದಿರುಹೆ ನುಂಗಿತ್ತೆಂದಡೆ–ಅಂತರಂಗದ ಸೂಕ್ಷ್ಮ ವಿಚಾರದಿಂದ ಕಾಣಿಸಿಕೊಂಬ ಮಹಾಜ್ಞಾನವೆಂಬುದು ಆ ಪ್ರಸಾದಲಿಂಗವೆಂಬ ಎರಡನ್ನೂ ತನ್ನೊಳಗೆ ಅಡಗಿಸಿಕೊಂಡಿತ್ತು. ಅದು ಹೇಗೆಂದಡೆ–ನಾದ ಬಿಂದು ಕಳಾತೀತವಾದ ಪರಮಾನಂದ ಪ್ರಕಾಶವೇ ಚಿಘನಲಿಂಗ. ಆ ಲಿಂಗದಲ್ಲಿ ಉನ್ಮನಿಯ

ನೆನಹು ನಿಂದು ಆ ಮಹಾ ಪ್ರಸಾದವನವಗ್ರಹಿಸಿಪ್ಪ ಪರಿಪೂರ್ಣ-ಭಾವ-ದೃಷ್ಟಿಯೇ ಮಹಾ ಜ್ಞಾನಪಾದುದರಿಂದ ಶಿವ ಶರಣಂಗೆ ತನ್ನಾದಿಯ ಅಭೇದ್ಯ ಪ್ರಸಾದವು ಸಾಧ್ಯವಾಯಿತ್ತೆಂಬುದರ್ಥ. ಇನ್ನು ಕಂಡು ಬೆರಗಾದೆನೆಂದಡೆ—ತನ್ನ ಮಹದರಿವಿನೊಳಗೆ ಅರಿವಿನ ಅನುಭಾವಾರ್ಥವೆಂಬ ನಿಜಲಿಂಗವಿಪ್ಪುದ ಕಂಡು ನೋಡುತ್ತಿರಲು ಆ ನೋಟಕ್ಕೆ ಬೇರೊಂದು ಲಕ್ಷಣವಿಲ್ಲವಾಗಿ ಆ ನಿಜಲಿಂಗದಲ್ಲಿಯೇ ನೋಟವು ನಿಬ್ಬೆರಗಾಯಿತ್ತೆಂಬುದರ್ಥ. ಇನ್ನು ಸೆರಗ ಸೀಳಿದ ಅರಿವೆ ಎಂದಡೆ-ಮಾರ್ಗ ಕ್ರಿಯೆಮೀರಿದ ಕ್ರಿಯೆಗಳು ನಿಷ್ಪತ್ತಿಯನ್ನೈದು ಉಳುಮೆಯಾಗಿ ಉಳಿದಂಥ ಮೂಲಜ್ಞಾನದ ಬೆಳಗೆಂಬುದರ್ಥ. ಬರಿಯ ಕುರುಹನೆ ಕಟ್ಟಿ ಎಂದಡೆ—ಸಮಸ್ತ ಪೂಜಾ ಫಲಂಗಳೆಲ್ಲವ ಇತ್ತಲೇ ಬಿಟ್ಟು ತನ್ನಿಷ್ಟ-ಲಿಂಗ ಒಂದನ್ನೇ ಸಚ್ಚಿದಾನಂದ ಸ್ವರೂಪಿನಿಂದ ತನ್ನ ಮೂಲ ಜ್ಞಾನದ ಬೆಳಗೆಂಬ ವಸ್ತ್ರದಲ್ಲಿ ಅಡಗಿಸಿಕೊಂಡನೆಂಬುದರ್ಥ. ಬರಿದಾದ ಬರುಮನದಿ ಎಂದಡೆ—ಸರ್ವಾಚಾರ ಸಂಪನ್ನತೆ ಎಂಬ ಲಿಂಗ ತಾದಾತ್ಮ್ಯದಲ್ಲಿ ಅಂಗಗಳೆಲ್ಲವು ಸವಿದುಹೋಗಿ ಕೇವಲ ಶಿವಾನಂದಮಯದಿಂದ ತನ್ನಂತರಂಗದಲ್ಲಿ ಒಪ್ಪುತ್ತಿಹನೆಂಬುದರ್ಥ. ಇನ್ನು ಮರಗುತ್ತಿರ್ದೆನೆಂದಡೆ—ತನ್ನರಿವಿನೊಳಗೆ ತನ್ನಿಷ್ಟ-ಲಿಂಗವನಡಗಿಸಿಕೊಂಡು ಮೇಲಣ ನಿರಾಲಂಬ ಸ್ಥಲದಲ್ಲಿ ನಿರ್ವಯಲ ಸಮಾಧಿಯನ್ನೈವಬೇಕೆಂದು ಅಂತರಂಗದಲ್ಲಿ ಮಮಕಾರದಿಂದ ಮುಂದುಗೊಂಡಿರುತಿರ್ದನೆಂಬುದರ್ಥ.

**ತಾತ್ಪರ್ಯ**— ಆದಿಯ ಸಂಬಂಧವಿಡಿದು ಬಂದ ಶರಣಂಗೆ ತನ್ನ ಶಿವ ಭಕ್ತಿ ಚಾರಿತ್ರ್ಯವನ್ನೈದಲಾಗಿ ತನ್ನಾದಿಯ ನೊಡಗೂಡಬೇಕೆಂಬ ತೂರ್ಯ ಮಮಕಾರವು ಆತಂಗೆ ಸಹಜವೆಂಬುದೀ ವಚನದ ತಾತ್ಪರ್ಯ.

ಆಗು ಹೊಗನೆ ಹರಿದು ಈಗ ಮೂಗನು ಆಗಿ ।
ಸಾಗರದ ಕೋಗಿಲೆಯು ನೀಗಿ ನಿಂದೆ ।
ಮೇಘದೊಳು ಬಲಿದ ಬಾಗಿಲ ಬೀಗವನು ತೆಗೆದು ।
ಹೋಗಿ ಹೊಕ್ಕೆನು ಮಹಾ ಘನ ಲಿಂಗದೊಳಗೆ ॥ ೩೪ ॥

## ಭಾವಾರ್ಥ

ಆಗು ಹೋಗನೆ ಹರಿದು ಎಂದಡೆ– ಜಪ–ತಪ–ಕೃತ್ಯಂಗಳಾ ಯಾಸದಿಂದ ಉಂಟಾಗುವಂಥ ತತ್ತ್ವಾಂತರ ಸ್ಥಾನಂಗಳ ಖಂಡಿತ ಮೋಕ್ಷ. ಅಂದಡೆ ಇಂತಹ ಮೋಕ್ಷ ನಿಮಿತ್ತವಾಗಿ ಮಾಡುವ ತನುದಂಡನೆ ಕರ್ಮಯೋಗಂಗಳಿಂದ ನಷ್ಟವಾಗಿ ಹೋಗುವಂಥ ಸಂಸಾರ ಬಂಧನ. ಇಂತೀ ಎರಡನೂ ಹರಿದು ಎಂದಡೆ– ಲಿಂಗದೇಹಿಯಾದನಾಗಿ ಇಹದಲ್ಲಿ ತೋರುವ ಸಂಸಾರ ಬಂಧನವ ತೊಡರಿಲ್ಲದೆಯೂ ಮತ್ತಂ ಲಿಂಗಪ್ರಾಣಿಯಾದನಾಗಿ ಪರದಲ್ಲಿ ಉಂಟಾಗುವ ಮೋಕ್ಷಾಪೇಕ್ಷೆಯ ಭಾವವಿಲ್ಲದೆಯೂ ಹೋಯಿತ್ತೆಂಬುದರ್ಥ. ಈಗ ಮೂಗನು ಆಗಿ ಎಂದಡೆ–ಇಂತು ಬಂಧ ಮೋಕ್ಷಂಗಳಳಿದ ಪಕ್ಷದಲ್ಲಿ ತನಗೆ ತುಟ್ಟತುದಿಯಲ್ಲಿಪ್ಪ ನಿತ್ಯ ನಿಜಲಿಂಗೈಕ್ಯ ಒಂದೇ ಸುಸ್ಥಿರವಾಯಿತ್ತಾಗಿ ಅಹುದಲ್ಲವೆಂಬ ನುಡಿಗೆ ಎಡೆಯಿಲ್ಲದೆ ತನ್ನ ನಿಜಾಂತರಂಗದೊಳು ಶಬ್ದಮುಗ್ಧನಾಗಿರ್ದನೆಂಬುದರ್ಥ. ಸಾಗರದ ಕೋಗಿಲೆ ಎಂದಡೆ–ತನು ಕರಣೇಂದ್ರಿಯ ವಿಷಯ ಪ್ರವಾಹ ಸಂಸಾರವೆಂಬ ಸಮುದ್ರದ ಮಧ್ಯದಲ್ಲಿ ಅವಿದ್ಯೆ ಎಂಬ ಮಾಯಾ ಶಕ್ತಿ ತಮೋರೂಪಿಣಿಯಾಗಿ, ಆಶೆ ಎಂಬ ಕೋಗಿಲೆಯ ಸ್ವರ ಸೂಚನೆಯಿಂದ ತೋರುತ್ತಿಹುದೆಂಬುದರ್ಥ. ನೀಗಿ ನಿಂದೆನೆಂದಡೆ– ತಾನು ನಿಶ್ಶಬ್ದ ಜ್ಞಾನಿಯಾದ ಕೂಡಲೇ ಮನದಿಂದ ತೋರುವ ವಿಷಯ ರಸಂಗಳರಿತು ಹೋಗಿ ಅಲ್ಲಿಪ್ಪ ಮಾಯಾ ವೃತ್ತಿಯು ನಷ್ಟವಾಗಿ ಮುಕ್ತಿ ಮಾರ್ಗವೆಂಬ ಪಶ್ಚಿಮ ದ್ವಾರದ ನೆನಹಿನಲ್ಲಿ ನಿಂದನೆಂಬುದರ್ಥ. ಮೇಘದೊಳು ಬಲಿದ ಬಾಗಿಲೆಂದಡೆ–ಪ್ರಾಣವಾಯುವಿನ ಸಂಚಲ ದ್ವಾರವೆನಿಸಿಕೊಂಬ ಸುಷುಮ್ನಾ ದ್ವಾರ. ಬೀಗವೆಂದಡೆ–ಜೀವ ಹಂಸನ ಆವರಿಸಿಕೊಂಡಿಪ್ಪ ಮಾಯಾ ತಮಸ್ಸೆಂಬುದು ಮೇಲಣ ಮುಕ್ತಿ ಎಂಬ ಗೃಹವು ಕಾಣಬಾರದ ಹಾಗೆ ಆ ಸುಷುಮ್ನಾ ದ್ವಾರದಲ್ಲಿ ಬಂಧಿಸಿಕೊಂಡಿಹುದೆಂಬುದರ್ಥ. ಬೀಗದ ತೆಗೆದು ಹೋಗಿ ಎಂದಡೆ–ಹಂಸೋಭಾವದರಿವಿನ ಬೆಳಗಿನ ಕೈಯಿಂದ ಆ ಮಾಯಾ ತಮಸ್ಸಿನ ಬಂಧನವ ಕಳೆದು ಹೊಕ್ಕು ಅಲ್ಲಿಂದಲೆ ಉನ್ಮನೀ–ಜ್ಞಾನ–ದೃಷ್ಟಿ–ಸೂತ್ರವಿಡಿದು ಬ್ರಹ್ಮರಂಧ್ರವೆಂಬ

ತನ್ನಾದಿಯ ಮುಕ್ತಿ ಗೃಹದೊಳಗೆ ಹೊಕ್ಕು ನಿಂದನೆಂಬುದರ್ಥ. ಇನ್ನು ಹೊಕ್ಕೆನು ಮಹಾ ಘನಲಿಂಗದೊಳಗೆ ಎಂದಡೆ- ಆ ಸ್ಥಾನದಲ್ಲಿ ಪರಂಜ್ಯೋತಿ ಸ್ತಂಭಾಕಾರವಾಗಿ ಬೆಳಗುವ ಮೂಲ ಪ್ರಣವ ಪ್ರಭಾಮಂಡಲದ ಮಧ್ಯದಲ್ಲಿ ಷಡ್ವಿಧ ಲಿಂಗ-ಸ್ಥಲಂಗಳಿಗೆ ಲಯ–ಗಮನ–ಸ್ಥಾನವೆನಿಸಿ ಒಪ್ಪುತ್ತಿದ್ದಂಥ ಮಹಾ–ಘನ–ಮೂಲ–ಲಿಂಗದೊಳಗೆ ಉನ್ಮನೀ–ಜ್ಞಾನ–ದೃಷ್ಟಿವರಿದು ಶಿವಶರಣನು ಮುಳುಗಿ ಸಮರಸ ಭಾವದಿಂದ ಐಕ್ಯವಾದನೆಂಬುದರ್ಥ.

ಸೊಡರಿಲ್ಲದ ಬೆಳಗು ಕುಡಿವರಿದ ಪ್ರಭೆಯೊಳಗೆ ।
ಪಿಡಿದ ಕರ್ಪುರದುರಿಯು ಮರದೊರಗಿತು ।
ಗಡಣವಿಲ್ಲದ ಪ್ರಭೆಯ ಕುಡಿಯ ಬೆಳಗಿನ ನಡುವೆ ।
ಹಿಡಿ ಹಿಡಿಯೆ ಬಯಲಾದ ಕೂಡಲ ಚೆನ್ನಸಂಗಯ್ಯನು ॥ ೩೫ ॥

## ಭಾವಾರ್ಥ

ಸೊಡರಿಲ್ಲದ ಬೆಳಗು ಕುಡಿವರಿದ ಪ್ರಭೆಯೊಳಗೆ ಎಂದಡೆ–ಷಟ್‌ತ್ರಿಂಶತಿ (೩೬) ತತ್ತ್ವಂಗಳಿಗೆ ಮೂಲಸ್ತಂಭವೆನಿಸಿಕೊಂಡು ಓಂಕಾರ ಪ್ರಣವುದುಪಾಧಿವಿಡಿದು ಪ್ರಕಾಶಿಸುವಂಥ ಪರಂಜ್ಯೋತಿಯನ್ನು ಮಿಕ್ಕು ಮೀರಿ ತನ್ನ ಸ್ವಯಗುಣದಿಂದ ವಿರಾಜಿಸುವ ಮೂಲ ಚಿತ್ತಿನ ಬೆಳಗೆಂಬುದು ತುಟ್ಟ ತುದಿಯ ಪರಿಪೂರ್ಣ ಚಿದಾಕಾಶ ಮಂಡಲದೊಳಗೆ ಪಸರಿಸಿಕೊಂಡು ತನ್ನೊಳು ಹೊರಗೆ ದಿವ್ಯಾನಂದಮಯದಿಂದ ತನ್ನ ತಾನೇ ಪ್ರಕಾಶಿಸುತ್ತಿಹುದೆಂಬುದರ್ಥ. ಪಿಡಿದ ಕರ್ಪುರದುರಿಯು ಮರದೊರಗಿತ್ತೆಂದಡೆ–ಹಿಂದೆ ಹೇಳಿದ ಪರಂಜ್ಯೋತಿಯ ಪ್ರಕಾಶ ಮಧ್ಯದಲ್ಲಿ ಕರ್ಪುರವೆಂಬ ನಿಜ್ವೈಕ್ಯನನ್ನು ಅವಗ್ರಹಿಸಿಕೊಂಡು ಊರ್ಧ್ವ ಮುಖವಪ್ಪ ಸೂಕ್ಷ್ಮ–ನಾದ–ಮಯದಿಂದ ಬೆಳಗುತ್ತಿದ್ದಂಥ ಮಹಲಿಂಗವೆಂಬುದು ತನ್ನ ಸ್ವಲೀಲಾನಂದ ಭಕ್ತಿ ಸಮಾಪ್ತಿಯ ಕಡೆಯಲ್ಲಿ ಮೇಲಣ ಚಿದಾಕಾಶ ಮಂಡಲದ ಚಿತ್ತಿನ ಸ್ವಯಂ ಪ್ರಕಾಶದೊಳಗೆ ಚಿದಾನಂದ ಮಯದಿಂದ ಬೆರೆದು ಆ ಲಿಂಗದ ಜ್ಯೋತಿರ್ಮಯದಾಕಾರವೇ ನಿರ್ವಯ

ಲೆನಿಸಿತ್ತೆಂಬುದರ್ಥ. ಇನ್ನು ಗಡಣವಿಲ್ಲದ ಪ್ರಭೆಯ ಕುಡಿಯ ಬೆಳಗೆಂದಡೆ– ಆ ಚಿದಾಕಾಶ ಮಂಡಲದ ಸ್ವಯಂ ಪ್ರಕಾಶವೆಂಬುದ ವರ್ಣಿಸಿ ಹೇಳಿ ಹೀಗೆಂಬ ನುಡಿ ಗಡಣಕ್ಕೆ ಬಾರದೆಂಬುದರ್ಥ. ಇನ್ನು ಆ ಬೆಳಗಿನ ನಡುವೆ ಹಿಡಿ ಹಿಡಿಯೆ ಬಯಲಾದ ಕೂಡಲ ಚೆನ್ನಸಂಗಯ್ಯನೆಂದಡೆ– ಜ್ಯೋತಿಯೊಡನೆ ಬೆರೆದ ಕರ್ಪುರವೆಂಬುದು ಮರಳಿ ಸಾಕಾರದ ಹಿಡಿತೆಗೆ ಸಿಕ್ಕದೆ ಆ ಜ್ಯೋತಿಯೊಡನೆ ತಾನು ಬಯಲಾದ ಹಾಗೆ ಮಹಾಲಿಂಗದೊಳು ಬೆರೆದ ನಿಜೈಕ್ಯನು, ಭಿನ್ನ ಭಾವ ದೃಷ್ಟಿಗೆ ತನ್ನ ಸ್ವರೂಪ ಬೇರಾಗಿ ಸಿಕ್ಕದೆ ತನ್ನ ಲಿಂಗದೊಳಗೆ ತಾನು ನಿರ್ವಯಲಾದನೆಂಬುದರ್ಥ. ಅಂತರೆ ಓಂ ಪ್ರಥಮದಲ್ಲಿ ಏಕಮೇವಾದ್ವಿತೀಯನೆನಿಸಿಕೊಂಡು ಒಪ್ಪುತ್ತಿದ್ದ ನಿರಾಳ ಪರಶಿವನ ಅನಾದಿ ಸಂಸಿದ್ಧವಪ್ಪ ನಿಜಸ್ವರೂಪವೆಂಬ ಸಚ್ಚಿದಾನಂದ ಲಕ್ಷಣ ಭೇದದಿಂದ ಷಡ್ವಿಧ ಲಿಂಗಾಂಗ-ಸ್ಥಲಂಗಳು ಪ್ರಕಾಶಿಸಿ ಬಳಿಕ ಮತ್ತವೇ ಏಕೀಭಾವಿಸಿ ನಿಂದವಾಗಿ ಶಿವಶರಣಂಗೆ ಭಿನ್ನ ಭಾವವೆಂಬುದು ಒಪ್ಪಚಿಯೂ ತಲೆದೋರಲಿಲ್ಲವೆಂದು ತಾತ್ಪರ್ಯ.

ಇಲ್ಲಿಗೆ ಜ್ಞಾನ–ಶೂನ್ಯ–ಸ್ಥಲ ಸಮಾಪ್ತಂ.

ಈ ಟೀಕಿನ ಸಮಾಪ್ತ ಮುದ್ರೆಯೆಂತೆಂದಡೆ– ಶ್ರೀಮದ್ದನೇಕ ಬ್ರಹ್ಮಾಂಡ ಲಯ ಸ್ಥಾನ ಭೂತ ಪರಶಿವ ತತ್ತ್ವ ಪ್ರಸಾದ ನಿಜಸ್ವರೂಪ ಅಖಿಳ ತತ್ತ್ವ ಶಿವಾರ್ಪಿತ ಚಿದ್ಭಾಜನ ಪ್ರಮಥ ಗಣ ಹೃತ್ಸರೋಜ ಸುಜ್ಞಾನ ಜ್ಯೋತಿ ಶ್ರೀಮದ್ಗುರು ವಿರೂಪಾಕ್ಷನವತಾರ ಸದ್ಗುರು ಭಾವಗಮ್ಯ, ಶಿವಲಿಂಗ ಚೈತನ್ಯ, ಜಂಗಮಮೂರ್ತಿ, ಷಟ್‌ಸ್ಥಲ–ಜ್ಞಾನ–ಚಕ್ರವರ್ತಿಯಪ್ಪ ಚೆನ್ನಬಸವರಾಜ ದೇವರು ತಮ್ಮ ಅಗಮ್ಯ ದಿವ್ಯ ನಿರಾಲಂಬ ಸ್ಥಾನದೊಳು ಸಮರಸ ಸಂಭಾಷಣೆಯ ಮೌನ ಮುದ್ರೆಯೊಡೆಯದಂತೆ ಅಖಂಡ ಪರಿಪೂರ್ಣ ಸಚ್ಚಿದಾನಂದ ಪ್ರಕಾಶಮಯದಿಂದ ಬೆಳಗುವಂಥ ಲಿಂಗಾಂಗ ಸಂಯೋಗ ಸಮರಸವೆಂಬ ನಿರ್ವಯಲ ನಿಜ ಸಮಾಧಿಯ ಸರೂಪಾರ್ಥಂಗಳನು ಪರಶಿವ-ಯೋಗಿ-ರಾಜ ಸಿದ್ಧರಾಮೇಶ್ವರ ದೇವರಿಗೆ ಪೇಳಿದುದನು ತಮ್ಮ ಅಂಶೀ ಭೂತರಪ್ಪ ಮರ್ತ್ಯಲೋಕದ ಮಹಾ ಗಣಂಗಳು ಸ್ವೀಕರಿಸಿ ನಿಜಲಿಂಗೈಕ್ಯರಾಗಲೆಂದು ತಮ್ಮ ಸ್ವಾನು

ಭಾವ ಪ್ರಸನ್ನ ಪ್ರಸಿದ್ಧವಾದ ಪರಮಾಮೃತ ವಾಕ್ಯಂಗಳಿಂದ ಪದವಿಟ್ಟು ನಿರೂಪಿಸಿದ ಮಂತ್ರಗೋಪ್ಯ ಶಿವಶಾಸ್ತ್ರದಲ್ಲಿ ಸಂಪೂರ್ಣವಾಗಿಪ್ಪ ಶಿವಾನುಭಾವಾರ್ಥಂಗಳೊಳಗೆ ಆ ಸುಜ್ಞಾನ ಗುರು ಚೆನ್ನ ಬಸವಣ್ಣನವರು ಕರುಣಿಸಿದಷ್ಟು ಅರ್ಥವುಂ ಅರಿದು ಎರಡನೆಯ ಚೆನ್ನಬಸವಣ್ಣನಾದ ಷಟ್‌ಸ್ಥಲಾನುಭಾವಜ್ಞರು ಪೇಳ್ದ ಪ್ರಸಾದ ವಾಕ್ಯಂಗಳ ಸನ್ಮತಿಯಿಂದ ನಾನು ಬಲ್ಲಂತೆ ಕನ್ನಡಿಸಿಹೆನು. ಈ ನುಡಿಗಳೊಳಗೆ ತಪ್ಪುಳ್ಳೊಡೆ ನಿಮ್ಮ ಪ್ರೇರಕತ್ವದ ನುಡಿಗಳ ಒಪ್ಪವಿಟ್ಟುಕೊಂಡು ಕೈಮಿಕ್ಕಿ ಅರಿಪದ ಪದಗಳ ಸತ್ಪ್ರೇಮದಿಂದ ಚಿತ್ತೈಸಿ.

ಪರಮಾವತಾರ ಶರಣಾಗತ ಜನರಕ್ಷಕ ಶಿವಗಣ ಕೋವಿದರುಗಳ ಪವಿತ್ರ ಪಾದಂಗಳಿಗೆ ಶರಣು ಶರಣಾರ್ಥಿ. ಚೆನ್ನ ಬಸವೇಶ್ವರ ದೇವರು ಸಿದ್ಧರಾಮೇಶ್ವರ ದೇವರಿಗೆ ನಿರೂಪಿಸಿದ ಪದ ಮಂತ್ರಗೋಪ್ಯ ಸಮಾಪ್ತಂ ಮಂಗಳ ಮಹಾ.

---

ಶ್ರೀ ಚೆನ್ನಬಸವೇಶ್ವರ ದೇವರು ನಿರೂಪಿಸಿದ

# ಹಿರಿಯ ಮಂತ್ರಗೋಪ್ಯ

ರಾಗ – ಬಹುಳಿ, ತಾಳ–ರಚನಾ.

**ನೋಡಲಿಲ್ಲ, ನುಡಿಯಲಿಲ್ಲ, ಕೂಡಲಿಲ್ಲ**
**ಅಪ್ರತಿಮಂಗೊಡಲು ಇಲ್ಲ.** || ಸೂತ್ರ ||

## ಭಾವಾರ್ಥ

ಸತ್ಕ್ರಿಯಾ ಜ್ಞಾನಯೋಗದಿಂದ ಲಭ್ಯವಾಗುವ ಶಿವಪ್ರಸಾದತ್ವವು ಜೀವಂಗೆ ದೊರಕೊಳ್ಳದಾಗಿ, ಸಾಮಾನ್ಯ ಕಾಣಿಕೆಯಿಂದಲೂ ಕಾಣಲಿಲ್ಲ. ಆ ವೀರಮಾಹೇಶ್ವರವನಾಚರಿಸಿದ ಜೀವಂಗೆ, ಶಿವಪ್ರಸಾದತ್ವವು ದೊರಕೊಂಡ ಪರಮ ಸೌಖ್ಯವನ್ನು ಇತರರ್ಗೆ ಶಾಸ್ತ್ರ ಪ್ರಮಾಣಗಳಿಂದ ಪ್ರಮಾಣಿಸಿ, ಹೀಗಿದ್ದಿತೆಂದು ವಾಙ್ಮೂಲಕವಾಗಿ ನುಡಿಯಲಿಲ್ಲ. ಶುದ್ಧವಲ್ಲದೆ ಇರುವ ಜೀವ ಘಟಾಳಿಗೆ ಯೋನಿ ಚಕ್ರದಲ್ಲಿ ಪರಿಭ್ರಮಣವಲ್ಲದೆ ಆ ಶಿವಪ್ರಸಾದತ್ವವನ್ನು ಕೂಡಲಿಲ್ಲ. ದೇಹೇಂದ್ರಿಯಮನಃ ಪ್ರಾಣಾದಿಗಳನ್ನುಳ್ಳ ದೇಹಿಕನೆ ಜೀವನು. ಇಂತೀ ಜೀವರಿಗೆ ಗೋಚರವಲ್ಲದಿಹುದೇ ಶಿವಪ್ರಸಾದತ್ವವು. ಈ ಪ್ರಸಾದತ್ವಕ್ಕೆ ದೇಹಾದಿ ಜಡತ್ವವಿಲ್ಲ. ಆ ಶಿವಪ್ರಸಾದತ್ವಕ್ಕೆ ಏಕತ್ವವು ಸಮನಿಸಿತ್ತಾಗಿ ಒಡಲಿಲ್ಲ– ಎಂಬುದೇ ಈ ಸೂತ್ರಕ್ಕೆ ವಾಚ್ಯಾರ್ಥ.

ಇನ್ನು ನೋಡಲಿಲ್ಲ ಎಂದಡೆ, ಇಂತಹ ಮಹವನಿಂಬುಗೊಂಡ ಶರಣಂಗೆ ತನ್ನಿಂದನ್ಯವಾಗಿ ತೋರುವ ದೃಶ್ಯಕ್ಕೆ ಇಂಬಿಲ್ಲವಾಗಿ ನೋಡಲಿಲ್ಲ. ನುಡಿಯಲಿಲ್ಲ ಎಂದಡೆ, ಆ ಶರಣಂಗೆ ಅನುಭಾವಕ್ಕೆಡೆಯಿಲ್ಲದೆ "ನಿಶ್ಶಬ್ದಂ ಬ್ರಹ್ಮೋಚ್ಯತೆ" ಎಂಬುದಾಗಿ ಶಬ್ದಮುಗ್ಧವಾಯಿತ್ತಾಗಿ ನುಡಿಯಲಿಲ್ಲ. ಕೂಡಲಿಲ್ಲ ಎಂದಡೆ, ಆ ಮಹಿಮಂಗೆ ಅನಾದಿ ಸಂಸಿದ್ಧವಹ ಮಹಾ ಘನಲಿಂಗವೇ ತಾನೆಂಬ ನಿಜಭಾವವು ದ್ವೈತಾದ್ವೈತವೆಂಬ ಉಭಯ ಕಲ್ಪನೆಯ ಮೀರಿ ನಿಂದುದಾಗಿ ಕೂಡಲಿಲ್ಲ. ಅಪ್ರತಿಮ ಲಿಂ

ಗಕ್ಕೆ ಕಡೆ, ರೂಹಿಲ್ಲವಾಗಿ ಒಡಲಿಲ್ಲ. ಒಡಲಿಲ್ಲದ ಮಹಾ ಘನಲಿಂಗವು ತಾನೇಯಾಗಿ ನಿಂದ ಶರಣಂಗೆ ಎರಡಿಟ್ಟು ತೋರುವ ಅವಿದ್ಯೆ ಸಂಬಂಧಿಗಳಹ ಅನಂತ ಕಲ್ಪಂಗಳು, ಹೋಗುತ್ತ ಬರುತ್ತವಿಹವು. ಆದರೂ ನಿಜಭಾವಕ್ಕೆ ತೋರುವ ತೋರಿಕೆಗೆ ಆಶ್ರಯವಿಲ್ಲವಾಗಿ 'ಒಡಲಿಲ್ಲ'ವೆಂದು ಶ್ರೀ ಚೆನ್ನಬಸವೇಶ್ವರ ದೇವರು ನಿರೂಪವುಂ ಕೊಡುತ್ತಿಹರು.

ಶಿವಜೀವರಿಗೆ ಏಕಾರ್ಥವೆಂಬುದನು ಇತರ ಮಾರ್ಗಂಗಳಲ್ಲಿ ಶಬ್ದಾಡಂಬರದಿಂದುಲಿದು, 'ತತ್ತ್ವಮಸಿ' ವಾಕ್ಯಾರ್ಥಂಗಳಲ್ಲಿ ಸಂಬಂಧಿಸಿ ಆ ಶಬ್ದ ಸುಖದಿಂದ ಪರಿಣಾಮಿಸುವರಲ್ಲದೆ, ಸತ್ಕ್ರಿಯಾ ಸಂಬಂಧವಹ ವರ್ತನೆಯಿಲ್ಲ. ಆ ಸತ್ಕ್ರಿಯೆಯಿಂದಲ್ಲದೆ ಬಾಹ್ಯ ಕರಣಂಗಳು ಶಿವನಲ್ಲಿ ಸಮಾಧಾನಗಳಾಗವು. ಆ ಕರಣಂಗಳ ಸಮಾಧಾನವು ಮೂರುಲಿಂಗಕ್ಕೆ ಮೂಲಸೂತ್ರವಹ ಇಷ್ಟಲಿಂಗದಲ್ಲಿ ನಿಷ್ಠೆ ನಿಬ್ಬೆರಗಾದಲ್ಲದೆ ಜೀವಭಾವ ಹಿಂಗದು.

**ದೃಷ್ಟಾಂತ—** ದೂರದೂರಿಂಗೆ ಪೋದೆಪನೆಂದು ನೆನೆದಡೆ, ಆ ಊರ ಸುದ್ದಿಯನು ಪೂರ್ವದಲ್ಲಿ ಕೇಳಿದ ಭಾವಕ್ಕೆ ಆ ಊರೊಳಗೆ ಪೋಗುವಿಕೆಯು ಇರುವದಲ್ಲದೆ, ಗಮನಾದಿಗಳಿಂದ ಆ ಊರ ಪೋಗಲರಿಯ. ಅದು ಕಾರಣ ಸತ್ಕ್ರಿಯಾ ಜ್ಞಾನಯೋಗವೆಂಬುದು ವೀರಮಾಹೇಶ್ವರಾಚಾರ ಸಿದ್ಧಾಂತದಲ್ಲಿಯಲ್ಲದೆ ಇತರ ಮಾರ್ಗಂಗಳಲ್ಲಿಲ್ಲ. ಆ ವೀರಮಾಹೇಶ್ವರ ಸಿದ್ಧಾಂತವೆಂಬುದು ಮಾಯಾತೀತವಾಗಿಹುದಾದ ಕಾರಣ ಮಾಯಾತಂತ್ರವಹ ಇತರ ಮಾರ್ಗಂಗಳಿಗೆ ವರ್ತಿಸಲಿಕ್ಕೆ ಬಾರದು. ಮಾಯಾವಾದವೆಂಬುದು ಶೂನ್ಯವಾದ. ಶೂನ್ಯವಾದವೆಂಬುದು ಶುಷ್ಕತರ್ಕ.

**ಆಕಾರವಿಡಿದು ಅರ್ಚನೆ ಪೂಜೆಯಂ ಮಾಡಿ**
**'ಏಕೋದೇವನದ್ವಿತೀಯ' ಎಂದುದು ಶೃತಿ**
**ಯಾಕೆ ವೃಥಾ ಬೊಮ್ಮದ ಮಾತು ಆತ್ಮನೇ ದೈವವೆಂಬ**
**ಹೋಕ ಯೋಗಿ ಕೇಳು ವೀರಮಾಹೇಶ್ವರವಾ ೧**

## ಭಾವಾರ್ಥ

ಆಕಾರವೆಂದಡೆ ಕ್ರಿಯಾಲಿಂಗ. ಕ್ರಿಯಾಲಿಂಗವೆಂದಡೆ, ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃಸಾದಾಖ್ಯ, ಕರ್ಮಸಾದಾಖ್ಯವೆನಿಸುವ ಪಂಚ ಸಾದಾಖ್ಯಂಗಳ ಗರ್ಭೀಕರಿಸಿಕೊಂಡು ಇರುತ್ತಿಹ ಲಿಂಗವು. ಆಚಾರಲಿಂಗವು ಎಂದಡೆ, ಆ ಪಂಚಸಾದಾಖ್ಯವೆ ನಿಷ್ಕಲ ಪಂಚಶಕ್ತಿಯ ಸಂಬಂಧವು. ಇಂತಿವೆಲ್ಲವಕ್ಕೂ ಆಶ್ರಯ ಕಾರಣವೇ ಶುದ್ಧ ಶಿವತತ್ತ್ವವು. ಇದು ಕಾರಣ ಕ್ರಿಯಾಲಿಂಗವೆಂದರೆ ಇಷ್ಟಲಿಂಗವು. ಇಷ್ಟಲಿಂಗವು ಜನ್ಮ ಜರೆ ಮರಣಾದಿ ಅನಿಷ್ಟವ ಪರಿಹರಿಸುವ ಶಕ್ತಿಯುಳ್ಳದು. ಇಂತೀ ಇಷ್ಟಲಿಂಗವನು ಗುರುಕರುಣದಿಂದ ಉಪದೇಶವಾಗಿ ಪಡೆದು, ಮಾರ್ಗಕ್ರಿಯೆಯಿಂದ ಲಿಂಗಾರ್ಚನೆಯಂ ಮಾಡುವದು. ಪರಮೇಶ್ವರ ನಿಜಪ್ರಸನ್ನ ಪ್ರಸಾದತ್ವವನೈಯ್ದುವಡೆ ಲಿಂಗಪೂಜೆಯಿಂದಲ್ಲದೆ ಅಯ್ದುಬಾರದು. ಆ ಶಿವಲಿಂಗ ಪೂಜೆಯಂ ಸಾಮಾನ್ಯವೆಂದು ಕಂಡು, ಆತ್ಮ ತತ್ತ್ವವನು ವಿಶೇಷವೆಂದು ಬಗೆದು, ಲಿಂಗವೆಂದು, ಪರಮೇಶ್ವರನೆಂದು, ಪರಮಾತ್ಮನೆಂದು, ಪರಶಿವನೆಂದು, ಪರಬ್ರಹ್ಮನೆಂದು ಈ ನಾಮ ಪರ್ಯಾಯಂಗಳು ಶಿವಲಿಂಗವೆಂಬ ಶಿವಜ್ಞಾನವಿಲ್ಲದೆ, ಆತ್ಮಂಗೆ ಪರಮಾತ್ಮಾದಿ ನಾಮಪದಂಗಳಂ ಸಂಬಂಧಿಸಿ, ಅಹಮೆಂದು ಬ್ರಹ್ಮನ ಮಾನಸಪುತ್ರರಾದ ಸನಕಾದಿಗಳೊಳಗೊಬ್ಬ ಸನತ್ಕುಮಾರನೆಂಬ ಅಭ್ಯಾಸ ಯೋಗಿಯು "ಆತ್ಮನು ಅಸ್ವತಂತ್ರನು, ಅನೀಶ್ವರನು, ಪಾಪಬದ್ಧನು, ಪಶು" ಎಂಬ ವಿವೇಕವಿಲ್ಲದೆ, ಶೂನ್ಯನೆಂದು ಬಗೆದು, ನಂದಿಕೇಶ್ವರನ ಶಾಪದಿಂದ ಒಂಟೆಯಾದನು. ಮತ್ತಂ ಬ್ರಹ್ಮವಿಷ್ಣುಗಳು, ಅಹಂಕರಿಸಿ ಆತ್ಮೋಹಮೆಂದು ಘನಲಿಂಗ ಪ್ರಮಾಣವನರಿಯದೆ, ಗೃಧ್ರ(ಹದ್ದು) ವರಾಹತನುಗಳನಯ್ದಿದರು. ಇಂಥವರುಗಳಿಗೆ ಹೀಗಾಯಿತೆಂದಡೆ- ಎಲೈ ಭ್ರಾಂತಯೋಗಿ ನಿನಗೇತಕೆ ವೃಥಾ ಬಯಲು ಭ್ರಮೆಯು. ಅದುಕಾರಣ ಸಚ್ಚಿದಾನಂದ, ನಿತ್ಯಪರಿಪೂರ್ಣ ಮಹಾದೇವನೋರ್ವನೆ ದೇವನಲ್ಲದೆ ಎರಡಿಲ್ಲವೆಂಬುದು ಶ್ರುತಿವಾಕ್ಯ. ಈ ವಾಕ್ಯದ ಪ್ರಮಾಣ ನಿಶ್ಚಯಿಸಲರಿಯದಿರ್ದಡೆ ವೀರಮಾಹೇಶ್ವರ ಸಿದ್ಧಾಂ

ತದಲ್ಲಿ ನಿನ್ನ ತಿಳಹುವೆನೆಂದು ಶ್ರೀ ಚೆನ್ನಬಸವೇಶ್ವರ ದೇವರು ನಿರೂಪ ವುಂ ಕೊಡುತ್ತಿಹರು.

ಆತ್ಮನಂತೆ ಪರಿಭವಕ್ಕೆ ಬಪ್ಪನೆ ಶಿವಯೋಗಿ
ಯಾತಕ್ಕೆ ನಿನ್ನ ಕಂಥೆ ಧರೆಯೊಳುಳಿದುದು
ನೀತಿವಿಡಿದು ಭಕ್ತಿ ಜ್ಞಾನ ವೈರಾಗ್ಯ ವೇದ್ಯ ಶರಣನು
ಕಂಥೆ ಸಹಿತ ಶಿವನ ಪಾದವನು ಬೆರಸುವ ೨

## ಭಾವಾರ್ಥ

ವೀರಮಾಹೇಶ್ವರ ಸಿದ್ಧಾಂತ ನಿರ್ಣಯದಲ್ಲಿ ಜೀವವಿದು ಶಿವ ತತ್ತ್ವವೆಂಬ ವಿವೇಕವೆಂತೆಂದಡೆ– ಆ ಶಿವಲಿಂಗದಲ್ಲಿ ಮಾರ್ಗಕ್ರಿಯೆಗ ಳಿಂದ, ಬಾಹ್ಯ ಕರಣಂಗಳು ಸಮಾಧಾನವಾಗದೆ, ಬರಿದೆ ಆತ್ಮೋಹ ಮೆಂಬೆಯಾದಡೆ, ಆತ್ಮನಂತೆ ಅಂಡಜ, ಸ್ವೇದಜ, ಉದ್ಭಿಜ, ಜರಾಯುಜ ವೆಂಬ ನಾಲ್ಕು ಯೋನಿಗಳಲ್ಲಿ, ೮೪ ಲಕ್ಷ ಜೀವರಾಶಿಗಳೊಳಗೆ ಹುಟ್ಟಿ ಬಂದು, ಪ್ರತ್ಯೇಕ ದೇಹಂಗಳಲ್ಲಿ ದೇಹಿತನಾಗಿ, ಅಲ್ಲಿ ಸುಖದುಃಖಗಳ ನನುಭವಿಸಿ, ತಾಪತ್ರಯದಿಂದ ನೊಂದು ಬೆಂದು ಕಡೆಗಾಣದೆ, ಪರ ತಂತ್ರವಹ ಪಶುಜೀವಿಗಳಂತೆ, ಪರಮುಸ್ವತಂತ್ರ, ಘನಲಿಂಗ ಸಂಬಂಧಿ, ಪರಮ ಗಂಭೀರ, ಉಪಮಾತೀತ ಶಿವಯೋಗಿಯು, ಆತ್ಮನಂತೆ ಪರಿಭವ ಕ್ಕೆ ಬಪ್ಪನೆ? ಬರಲಾರನು. ಆತ್ಮನು ಸರ್ವಸಾಕ್ಷಿಕನಲ್ಲದೆ, ಪರಿಭವಕ್ಕೆ ಬಂದೂ ಬಾರನು ಎಂಬೆಯಾದೊಡೆ (ಅವನಿಗೆ ಜೀವಾತ್ಮನೆಂಬ ವಾಕ್ಯವು ಪ್ರಸಿದ್ಧ.) ಜೀವಾತ್ಮನು ಸ್ಥೂಲ ತನುವಿನಲ್ಲಿಯ ಜಾಗ್ರತಾವಸ್ಥೆ ವ್ಯಾಪ್ತಿ ಯ ಅಹಂಕಾರದಿಂದ ವಿಶ್ವಜೀವನೆನಿಸಿಕೊಂಬನು; ಸೂಕ್ಷ್ಮ ತನುವಿನಲ್ಲಿ ಯ ಸ್ವಪ್ನಾವಸ್ಥೆಯ ವ್ಯಾಪ್ತಿಯಾಹಂಕಾರದಿಂದ ತೈಜಸಜೀವನೆನಿಸಿಕೊಂ ಬನು. ಕಾರಣ ತನುವಿನಲ್ಲಿ ಸುಷುಪ್ತಾವಸ್ಥೆ ವ್ಯಾಪ್ತಿಯ ಅಹಂಕಾರ ದಿಂದ ಪ್ರಾಜ್ಞಜೀವನೆನಿಸುವನು. ತೂರ್ಯಾವಸ್ಥೆಯಲ್ಲಿ ಪರಶಕ್ತಿಯಿ ಹುದು. ತೂರ್ಯಾತೀತದಲ್ಲಿ ಪರತತ್ತ್ವವಿಹುದು. ಈ ತೂರ್ಯಾದಿ ಎರಡು ಅವಸ್ಥೆಗಳು ಅನುಭಾವಗಮ್ಯವಲ್ಲದೆ, ಮನೋಗಮ್ಯವಲ್ಲ.

ಮನೋಗಮ್ಯವಾದಡೆ ಆ ತನು (ಕಂಥೆ) ಕರಗಿ ನಿರವಯವಹುದಲ್ಲದೆ, ಭೂಮಿಗೊರಗದು. ಅಲ್ಲಿ ಮನೋಗಮ್ಯವೆಂದಡೆ ಶರಣ ಸ್ಥಲ. ಆತ್ಮ ಯೋಗದಿಂದಲೇ ಆಹುದೆಂದಡೆ, ನಿನ್ನ ಕಾಯ ಶೂನ್ಯವಾದರೆ ಈ ಮಾಯೆ ಒಡಂಬಡಬಹುದು. ಶೂನ್ಯ ಕಾಯವು ಶಿವಯೋಗದಿಂದಲಹು ದಲ್ಲದೆ ನೀನು ಹೇಳುವ ಇತರ ಮತದ ಆತ್ಮಯೋಗದಿಂದಲದು ಘಟಿಸ ದಾಗಿ, ನಿನ್ನ ಶರೀರವೆಂಬುದು ಧರೆಯೊಳುಳಿಯಿತೆಂಬುದು ಯಾತಕ್ಕೆ ನಿನ್ನ ಕಂಥೆ ಧರೆಯೊಳುಳಿದುದು ಎಂಬ ಪದಕ್ಕರ್ಥ. ಅದು ಕಾರಣ ವೀರಶೈವ ಸಿದ್ಧಾಂತ ನಿರ್ಣಯವಹ ನಿಜಭಕ್ತಿ, ಶಿವಜ್ಞಾನ, ಪರಮ ವೈರಾಗ್ಯವ ನುಳ್ಳ ಸರ್ವಾಚಾರ ಸಂಪನ್ನ ಶರಣನು ಲಿಂಗಾತ್ಮಕನು, ಲಿಂಗೇಂದ್ರಿ ಯನು, ಲಿಂಗಾಂಗಸಂಗಿಯು, ಘನಲಿಂಗ ಯೋಗಿಯಾಗಿ ತನ್ನಂಗವ ಬೇರೆ ಮಾಡದೆ ಲಿಂಗ ಪ್ರಭೆಯೊಳಗೆ ನಿರವಯವಹನೆಂದು ಶ್ರೀ ಚೆನ್ನಬಸ ವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಧರ್ಮಾರ್ಥ ಕಾಮ ಮೋಕ್ಷ ಸೊಮ್ಮುವೆಟ್ಟ ಶಿವಯೋಗಿ
ಒರ್ಮೆಯುವೆಳಸ ಚತುರ್ವಿಧ ಪದಂಗಳ
[೧]ಹಮ್ಮನಳಿದು ಭಕ್ತಿಯಲ್ಲಿ ಫಲಪದರಹಿತನಾಗಿ
ಕರ್ಮಫಲವ ನೋಡಿ ನೋಡಿ, ತಲೆದೂಗಿದ ೩

## ಭಾವಾರ್ಥ

ಆ ಘನಲಿಂಗ ಪ್ರಭಾವೇದ್ಯ ಶರಣನು ಫಲಪದಂಗಳ ಭೋಗಿಸು ವಡೆ ಜೀವಭಾವವಿಲ್ಲ. ಜೀವಭಾವವಿಲ್ಲಾಗಿ ಫಲಪದ ಬಯಸನು. ಹೇಗೆಂದಡೆ– ಲಿಂಗಾಂಗಸಂಗಿಯೆನಿಸುವ ಶರಣನು ಎಲ್ಲ ಪದಂಗಳಿಗಧಿಕ ಮಾದ, ಆರಿಗೂ ದೊರೆಯದ ಮಹಾಲಿಂಗ ಪದದಲ್ಲಿ ಸಂಯೋಗವಾಗಿ ರುವನದರಿಂದ, ಆತನು ಚತುರ್ವಿಧ ಮೋಕ್ಷ ಪದಂಗಳ ಹಾದಿಯ ತುಳಿ ಯನು ಎಂಬುದು ಧರ್ಮಾರ್ಥ ಕಾಮ ಮೋಕ್ಷ ಸೊಮ್ಮ.... ಫಲಪದ ರಹಿತನಾಗಿ ಎಂಬಲ್ಲಿಯತನಕ ಅರ್ಥ. ಕರ್ಮಫಲವ ನೊಡೀಡಿ ನೋ

೧. ಹರ್ಮ್ಯ [ಬ]

ತಲೆದೂಗಿದ ಎಂದಡೆ– ಆ ಘನಲಿಂಗದಲ್ಲಿ ಅಂತರ್ಬಾಹ್ಯ ಕರಣಂಗಳು ಕರಣ ಮಥನಕ್ಕೆ ತೆರವುಗೊಡದೆ ಅಳವಟ್ಟು ಅವಗ್ರಹಿಸಿ, ದಗ್ಧಪಟ ನ್ಯಾಯದಂತೆ ತೋರಿಕೆಯಿದ್ದು, ಅವುಗಳ ಗುಣಧರ್ಮ ಕರ್ಮಂಗಳೇನೂ ಇಲ್ಲದೆ ಸದ್ಯೋನ್ಮುಕ್ತನಾಗಿ, ತ್ರಿಪುಟಿಯ ಮೀರಿ ತ್ರಿಪುಟಿಗೆ ಸಿಲುಕದಿಹ ಸ್ಥಾನದಲ್ಲಿ ತನ್ನ ಭಾವವಿದ್ದುದಾಗಿ, ಸಾಲೋಕ್ಯ, ಸಾಮೀಪ್ಯ,ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಪದಂಗಳನೇನೆಂದು ಅರಿಯದೆ ನಾಹಂ, ಸೋಹಂ ಎಂಬ ಯುಕ್ತಿಯು ಬಗೆಗೆ ನಿಲುಕದಿಹ ಸ್ಥಾನದಲ್ಲಿ, ತನ್ನ ಪರ ಮಾವಸ್ಥೆಯ ಭಾವವಹ ಸದ್ಭಕ್ತಿ, ನೈಷ್ಠಿಕಾಭಕ್ತಿ, ಅವಧಾನಭಕ್ತಿ, ಅನು ಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿ ಎಂಬ ಷಟ್‌ಪ್ರಕಾರವಾಗುತಿಹ ಅನುಪಮಭಕ್ತಿ ತಾನೇ ಅಂಗಂಗೊಂಡು, ದೃಶ್ಯಜಡವಹ ಅಂಗಕೆ ಇಂಬು ಗೊಡದೆ ಇದ್ದುದಾಗಿ ತಾ ಮಾಡುವ ಉಭಯ ಕರ್ಮ ಫಲ ಭೋಗಂಗ ಳಿಲ್ಲ. ಅವು ಇಲ್ಲವಾಗಿ ಆ ಉಭಯ ಕರ್ಮಫಲಭೋಗ ತನಗೆಂದೂ ಇಲ್ಲ. ಇಂತಿಹ ಘನಲಿಂಗ ಮಹಿಮ ಶರಣನು ತನಗನ್ಯವಾಗಿರುತಿಹ ಉಭಯ ಕರ್ಮಫಲಂಗಳ ನೋಡಿ ನೋಡಿ ತಲೆಯ ತೂಗುತಿರ್ದನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಅಂಗಲಿಂಗ ಸಂಗದಿಂದ ಪ್ರಾಣಾಂಗಲಿಂಗದಾ
ಸಂಗವನರಿದಾ ಲಿಂಗಸಂಗಿಯಾಗಿ
ಅಂಗಲಿಂಗವೆನಿಸಿದಾರುಸ್ಥಲ ಲಿಂಗವಾದ ಶರಣ
ಅಂಗಲಿಂಗ ಪ್ರಾಣಲಿಂಗ ತಿಳಿಯ ಪೇಳಿದೆ ೪

## ಭಾವಾರ್ಥ

ಆ ಘನಲಿಂಗಮಹಿಮ ಶರಣನು ಅಂಗವಿದು, ಲಿಂಗವಿದು, ಸಂಗ ವಿದೆಂಬ ಸ್ಥಲನಿರ್ದೇಶವ ಮಾಡುತ್ತಿರ್ದನು. ಅದೆಂತೆಂದಡೆ–ಅಂಗವಾರು ತೆರನು. ಅವಾವೆಂದಡೆ– ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. ಇನ್ನು ಲಿಂಗವಾರು ತೆರನು. ಅವಾವೆಂದಡೆ– ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾ

ಲಿಂಗ. ಇನ್ನು ಸಂಗವಾರು ತೆರನು. ಅವಾವೆಂದಡೆ– ಘ್ರಾಣ, ಜೀಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಭಾವ. ಇನ್ನು ಸಂಗವೆಂದಡೂ, ಸಂಬಂಧ ವೆಂದಡೂ, ಸಂಯೋಗವೆಂದಡೂ. ಏಕ ಪರ್ಯಾಯ ನಾಮಂಗಳು. ಘ್ರಾಣದಲ್ಲಿ ಆಚಾರಲಿಂಗ ಸಂಬಂಧ, ಜಿಹ್ವೆಯಲ್ಲಿ ಗುರುಲಿಂಗ ಸಂಬಂಧ, ನೇತ್ರದಲ್ಲಿ ಶಿವಲಿಂಗ ಸಂಬಂಧ, ತ್ವಕ್ಕಿನಲ್ಲಿ ಜಂಗಮಲಿಂಗ ಸಂಬಂಧ, ಶ್ರೋತ್ರದಲ್ಲಿ ಪ್ರಸಾದಲಿಂಗ ಸಂಬಂಧ, ಭಾವದಲ್ಲಿ ಮಹಾಲಿಂಗ ಸಂಬಂಧ.

ಇಂತೀ ಷಡಂಗ ಷಟ್‌ಸ್ಥಲ ಹೃದಯದಲ್ಲಿ ಲಿಂಗಸಂಗವಾದಲ್ಲಿ ಮುಂದೆ ಪ್ರಾಣಾಂಗಗಳು ಲಿಂಗಸಂಗವಾಗಬೇಕು. ಪ್ರಾಣಾಂಗಗಳಾವು ವೆಂದಡೆ– ಸುಚಿತ್ತ, ಸುಬುದ್ಧಿ, ನಿರಹಂಕೃತಿ, ಸುಮನ, ಸುಜ್ಞಾನ, ಸದ್ಭಾವ. ಇಂತೀ ಪ್ರಾಣಾಂಗಗಳಲ್ಲಿಯೂ, ಓಂದೆ ಹೇಳಿದ ಷಡ್ವಿಧಲಿಂಗ ಗಳು, ಮಾರ್ಗ ಕ್ರಿಯೆಯಿಂದ ಅಂಗವ ವೇಧಿಸಿ ಮೀರಿದ ಕ್ರಿಯಾ ಸ್ಥಳ ದಲ್ಲಿ ನಿಂದು, ಜ್ಞಾನಗಮ್ಯವಾಗಿ, ಸಂಗದನುವನರಿವ ಪ್ರಾಣಲಿಂಗ ಸಂಬಂಧಿಯಾಗಿರುವವು ಹಿಂದೆ ಹೇಳಿದ ಕ್ರಿಯಾಂಗವಾರು. ಅಲ್ಲಿಂದ ಮುಂದೆ ಹೇಳಿದ ಸುಚಿತ್ತಾದಿ ಭಾವಾಂತವಾದ ನಿರುಪಮ ಜ್ಞಾನಗಮ್ಯ ವೆನಿಸುವ ಪ್ರಾಣಾಂಗವಾರು. ಈ ಉಭಯಾಂಗಕ್ಕೆ ಲಿಂಗವೇ ಆಶ್ರಯ ಸ್ಥಾನವಾಗಿ ನಿಂದ ನಿರುಪಮ ಮಹಿಮ ಶರಣನು. ಆತನೇ ಅಂಗ ಲಿಂಗ, ಪ್ರಾಣಲಿಂಗ ಸಂಬಂಧಿಯೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಅಂಗವಿಧವೊಂದುಂ ಲಿಂಗ ಪ್ರಾಣವಿಧವಾರು ಲಿಂಗ
ಅಂಗಲಿಂಗ ಪ್ರಾಣಲಿಂಗವುಭಯದೊಳಗೆ
ಅಂಗಲಿಂಗವೊಂದು ಭವಿ, ಪ್ರಾಣಲಿಂಗವಾರು ಭವಿ
ಹಂಗುಹರಿದ ಲಿಂಗೈಕ್ಯನ ಭೇದವೆಂತೆಸೆ ೫೨

## ಭಾವಾರ್ಥ

ಆ ಲಿಂಗ ಪ್ರಾಣವೇದ್ಯ ಶರಣನ ತನುಕ್ರಿಯಾವೇಧಿಸಿ, ಜ್ಞಾನ

---

೧. ವಂಗಲಿಂಗ [ಬ]

ಭಾವದಲ್ಲಿ ಆಚರಿಸುವ ಆಚರಣೆಯೆಂತೆಂದಡೆ– ಭಕ್ತಾದ್ಯೈಕ್ಯಾಂತವಿರುವ ಷಡ್ವಿಧಾಂಗಕ್ಕೆ ಆ ಭಕ್ತಾಂಗವೆ ಆದಿಯು; ಆ ಭಕ್ತಸಂಗವೇ ಪೃಥ್ವಿಯು. ಆ ಪೃಥ್ವಿಗೆ ಪಂಚ ತನ್ಮಾತ್ರಂಗಳು ಕಾರಣವು. ಆ ಪಂಚ ತನ್ಮಾತ್ರಂಗಳು ಆತ್ಮ ಸಂಬಂಧವಾಗಿ, ಆ ಪೃಥ್ವಿಯಲ್ಲುಳ್ಳ ಪಂಚ ತನ್ಮಾತ್ರಂಗಳಲ್ಲಿಯೇ ಜಲ, ಅಗ್ನಿ, ವಾಯು, ನಭ, ಜೀವಾದಿಗಳ ತೋರಿಕೆಯು ಕಾಣಲಾಯಿತು. ಅದು ಹೇಗೆಂದಡೆ– ಶಬ್ದಾವಕಾಶ ಶಬ್ದಸ್ಪರ್ಶವೇ ವಾಯುವು, ಶಬ್ದಸ್ಪರ್ಶ ರೂಪವೇ ಅಗ್ನಿಯು, ಶಬ್ದಸ್ಪರ್ಶ ರೂಪರಸವೇ ಜಲ, ಶಬ್ದ ಸ್ಪರ್ಶ ರೂಪ ರಸ ಗಂಧವೇ ಪೃಥ್ವಿಯು, ಶಬ್ದ ಸ್ಪರ್ಶಾದಿಗಳಿದ್ದಲ್ಲಿಯೇ ಜೀವನು. ಆ ಪೃಥ್ವಿಯ ಲಯ ಜಲದಲ್ಲಿ, ಆ ಜಲದ ಲಯ ಅಗ್ನಿಯಲ್ಲಿ, ಅಗ್ನಿಯ ಲಯ ವಾಯುವಿನಲ್ಲಿ, ವಾಯುವಿನ ಲಯ ಆಕಾಶದಲ್ಲಿ, ಆಕಾಶದ ಲಯ ಆತ್ಮನಲ್ಲಿ, ಆ ಆತ್ಮಂಗೆ ಮಹಾಲಿಂಗವೇ ಆಶ್ರಯಸ್ಥಾನವಾಗಿರ್ಪುದು.

ಇವೆಲ್ಲವೂ ಪಿಂಡದಲ್ಲಿ ಉಂಟಾಗಿ ಆ ಪಿಂಡವೇ ಪೃಥ್ವೀಮಯವಾಗಿಹುದು ಆ ಪೃಥ್ವಿಯಂಗವನುಳ್ಳ ಭಕ್ತನಂಗದಲ್ಲಿಯೇ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಾಂತವಾಗಿಹ ಅಂಗ ಪಂಚಕವು ಗರ್ಭೀಕೃತವಾಗಿಹುದು. ಆ ಭಕ್ತಂಗೆ ಆಚಾರಲಿಂಗವೇ ಸ್ವಾಯತವಾಗಿರುವ ಕಾರಣ, ಅದರಲ್ಲಿಯೇ ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆನಿಸುವ ಲಿಂಗಪಂಚಕವು ಗರ್ಭೀಕೃತವಾಗಿಹುದು. ಆ ಆಚಾರಲಿಂಗವೇ ಸರ್ವಕ್ಕೆ ಕಾರಣವು. ಆಚಾರಲಿಂಗವೆಂದು ಕ್ರಿಯಾಲಿಂಗವೆಂದು ಒಂದೇ ಪರ್ಯಾಯವು. ಕ್ರಿಯಾಲಿಂಗ ಇಷ್ಟಲಿಂಗವೆಂದು ಒಂದೇ ಪರ್ಯಾವು. ಆ ಭಕ್ತಾಂಗದಲ್ಲಿ ಸಂಬಂಧವಾದ ಒಂದೇ ಕ್ರಿಯಾಲಿಂಗವು, ಪ್ರಾಣಾಂಗಗಳಾದ ಸುಚಿತ್ತ ಸುಬುದ್ಧ್ಯಾದಿ ಭಾವಾಂತವಹ ಷಡಾಧಾರದಲ್ಲಿ ಷಡಧ್ಯಾಯವಾಗಿ (ವ್ಯಾಪಿಸಿ) ಜ್ಞಾನದೃಕ್ಕಿನಲ್ಲಿ ತೋರುತ್ತಿಹುದು. ಇಂತೀ ಕ್ರಿಯಾಸಂಬಂಧವಹ ಅಂಗಲಿಂಗವು (ಅಂಗದ ಇಷ್ಟಲಿಂಗವು), ಜ್ಞಾನ ಸಂಬಂಧವಹ ಷಡ್ವಿಧ ಪ್ರಾಣಾಂಗಲಿಂಗವೆನಿಸುವ (ಪ್ರಾಣಾಂಗವು ; ಲಿಂಗವು) ಉಭಯ ಲಿಂಗದೊಳಗೆ ಅಂಗಲಿಂಗವೊಂದು ಭವಿ. ಅದೆಂತೆಂಡೆ– ಅಂಗಲಿಂಗ

ಸಂಗ ಸಂಬಂಧದ ಸಂದು, ಆ ಅಂಗದಲ್ಲಿಯೇ ಬೇರೆನಿಸಿ, ಸಾಮಾನ್ಯ ಕಾಣಿಕೆಯಿಂದ ತೋರಲಾಗದು. ತೋರಿದೊಡೆ,ಮುನ್ನ ಗುರುಸ್ವಾಮಿಯು ತನ್ನ ತನು ಭಾವವನು ಕ್ರಿಯಾದೀಕ್ಷೆಯಿಂದ ಭಸ್ಮವ ಮಾಡಿದ ಕಾರಣ ದೃಶ್ಯ ತನುವ ತನ್ನ ತನುವೆಂಬ ಭಾವವು ತನಗಿಲ್ಲ. ತನಗೆ ತನುವಾವು ದೆಂದಡೆ– ಇಷ್ಟಲಿಂಗದ ಸಾವಧಾನ ಮೂಲಸೂತ್ರವೇ ತನುವು. ಆ ತನುರಹಿತವಾಗಿ ಸುಳಿವ ದೇಹಿಯು ಭೂತದೇಹಿ. ಇಂತೀ ಅಂಗವಿಲ್ಲದೆ ಲಿಂಗಕ್ಕಾಶ್ರಯುವಿಲ್ಲವಾಗಿ, ಆ ಲಿಂಗದಲ್ಲಿ ಕ್ರಿಯಾಪ್ರಕಾಶ ವೈದೋರದು. ಆ ಲಿಂಗವು ತನುರಹಿತವಾಗಿ ಮೃತಲಿಂಗವೆನಿಸುವದು. ಇದು ಅಂಗ ಲಿಂಗವೊಂದು ಭವಿ ಎಂಬ ಶಬ್ದಕ್ಕರ್ಥ.

ಪ್ರಾಣಲಿಂಗವಾರುಭವಿ. ಅದೆಂತೆಂದಡೆ–ಪ್ರಾಣಂಗೆ ಜ್ಞಾನದೃಕ್ಕಿ ನಲ್ಲಿ ತೋರುವ ಸುಚಿತ್ತಾದಿಭಾವಂತಹ, ಪ್ರಾಣಾಂಗ ಷಡ್ವಿಧದಲ್ಲಿ ಷಡು ಪ್ರಕಾರವಾಗಿ ವರ್ತಿಸುವ, ಆಚಾರಾದಿ ಮಹಾಲಿಂಗಾಂತವಾದ ಷಡು ಲಿಂಗಗಳಲ್ಲಿ ವರ್ತಿಸುವ ಪ್ರಾಣಲಿಂಗವು, ಪ್ರಾಣಭಿನ್ನ ಭಾವಭಿನ್ನವಾಗಿ ತೋರಲಾಗದು. ತೋರಿದೊಡೆ ಮುನ್ನ ಗುರುಸ್ವಾಮಿಯು ಜೀವಭಾವ ವನು ಮಂತ್ರದೀಕ್ಷೆಯಿಂದ ಭಸ್ಮವಮಾಡಿದ ಕಾರಣ ತನಗೆ ವೈಕಾರಿಕ ಭಾವವನುಳ್ಳ ಜೀವಭಾವವಿಲ್ಲವು.

ತನಗೆ ಜೀವಭಾವವಾವುದೆಂದಡೆ–ಷಡ್ವಿಧ ಲಿಂಗದಲ್ಲಿ ಏಕಾಕಾರವೆ ಜೀವಭಾವವು. ಇಂತೀ ಜೀವಭಾವವನುಳ್ಳವನೇ ಸಜ್ಜೀವನು. ಇಂತೀ ಜೀವರಹಿತ ತನುವೇ ಮೃತ ತನುವು ಇಂತೀ ಸಂಸ್ಕಾರ ಜೀವನೇ ಚಿತ್ಪ್ರಾಣನು. ಆ ಚಿತ್ಪ್ರಾಣನೇ ಚಿದ್ರೂಪನಾಗಿಹನು. ಇಂತೀ ಪ್ರಾಣ ವಿಲ್ಲದೆ ಜ್ಞಾನಕ್ಕೆ ಆಶ್ರಯುವಿಲ್ಲವಾಗಿ ಆ ಜ್ಞಾನವಿಲ್ಲದೆ ಷಡ್ವಿಧಲಿಂಗಕ್ಕಾ ಶ್ರಯುವಿಲ್ಲವಾಗಿ ಆ ಷಡ್ವಿಧಲಿಂಗದಲ್ಲಿ ಜ್ಞಾನಪ್ರಕಾಶ ವೈದೋರದು. ಆ ಚಿದ್ರೂಪ ಜೀವರಹಿತವಾಗಿಹುದೇ ಮೃತದೇಹ. ಆ ಮೃತದೇಹದಲ್ಲಿ ತೋರುವ ಷಡ್ವಿಧಲಿಂಗವು ಪ್ರೇತಲಿಂಗವಾಗಿಹುದು. ಇಂತೀ ಪ್ರಾಣ ಲಿಂಗವಾರು ಭವಿ.

ಇಂತೀ ಅಂಗದಲ್ಲಿ ಅವಿರಳ ಸಂಬಂಧ, ಪ್ರಾಣದಲ್ಲಿ ಪರಿಪೂರ್ಣ

ಸಂಬಂಧ ಸಹಜವಾಗಿ, ಆ ಭಾವಲಿಂಗಸಂಗ ಸಮನಿಸಿದ ಮಹಾಲಿಂಗೈಕ್ಯನ ಭೇದವೆಂತೆಂದಡೆ ಮುಂದೆ ಹೇಳಿಹೆವೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಆರುಲಿಂಗದಂತವನ್ನು ಮೂರುಲಿಂಗ ಭೇದವನ್ನು
ತೋರಿ ತೋರಿ ತೋರದಂತೆ ೧ತನುವಿಧದಲ್ಲಿ
೨ಭಾವಕಲ್ಪ ಲಿಂಗಮೂಲದಂತು ಅನ್ವಯವನು ತಿಳಿದು
೩ನಿರ್ಭಾವ ಪ್ರಾಣಲಿಂಗದಾ ಮೂಲವೆಂತೆನೆ ೬

## ಭಾವಾರ್ಥ

ಆ ಭಾವ ಸಂಗ ಸಮನಿಸಿದ ಮಹಾಲಿಂಗೈಕ್ಯ ಭೇದವೆಂತೆಂದಡೆ– ಆಚಾರಾದಿ ಮಹಾಲಿಂಗಾಂತವಹ ಷಡ್ವಿಧ ಲಿಂಗವನು ಇಷ್ಟ ಪ್ರಾಣ ಭಾವವೆಂಬ ತ್ರಿವಿಧಲಿಂಗವನು, ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯದಲ್ಲಿ ಸಂಬಂಧಿಸಿ, ಸ್ಥೂಲ ತನುವಿನಲ್ಲಿ ಇಷ್ಟಲಿಂಗವು ಕ್ರಿಯಾರೂಪವಾಗಿ ತೋರುತ್ತಿಹುದಾಗಿ, ಸೂಕ್ಷ್ಮ ತನುವಿನಲ್ಲಿ ಪ್ರಾಣಲಿಂಗವು ಮಂತ್ರರೂಪವಾಗಿ ತೋರಿಯೂ ತೋರದಂತಿಹುದಾಗಿ, ಕಾರಣ ತನುವಿನಲ್ಲಿ ಭಾವಲಿಂಗವು ಆತ್ಮರೂಪವಾಗಿ, ತದ್ರೂಪ ತಲ್ಲೀನವಾಗಿ, ಅನುಭಾವಗಮ್ಯವಾಗಿ ಬಾಹ್ಯಕರಣಂಗಳ ಕಾಣಿಕೆಗೆ ತೋರದೆ ಇಹುದು. ಆ ಭಾವಗಮ್ಯವಹ, ಭಾವಕಲ್ಪಿತಲಿಂಗಕ್ಕೆ ಮೂಲವಹ ಇಷ್ಟಲಿಂಗದ ಅನ್ವಯವನು, ಆ ಲಿಂಗದ ಘನಮಹಿಮೆಯನು, ಶಿವರಹಸ್ಯವಹ ಆಗಮ ಪ್ರಮಾಣಂಗಳಿಂದ ತಿಳಿದು ಆ ಲಿಂಗದಲ್ಲಿ ಕ್ರಿಯಾಜ್ಞಾನ ಭಾವ ವಿಶ್ರಾಂತಿಯನ್ನೈದುವನ್ನಬರ ಅನುಭಾವ ಗ್ರಕ್ಕಿಸಿಂ ನೋಡಿ, ನಿರ್ಭಾವ ಸ್ಥಾನದಲ್ಲಿ, ಅನುಭಾವಾತೀತವಾದ ಅನುಪಮ ಲಿಂಗವು ಪ್ರಾಣಲಿಂಗದ ಮೂಲ ಸೂತ್ರವೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

---

೧. ತನುವಿದಾದಲ್ಲಿ (ಬ) ೨. ಆರೈದು ಭಾಪಕಲ್ಪ ಲಿಂಗಮೂಲದಂತು ಅನ್ವಯವನು ತಿಳಿದು. (ಬ) ೩. ಚಾರು. (ಬ)

ಅಂಗ ಮೂವತ್ತಾರು ಭೇದ ಹಿಂಗದಂತೆ ಭಕ್ತಿಯಲ್ಲಿ
ಅಂಗಲಿಂಗ ಪ್ರಾಣಲಿಂಗ ಪ್ರಭೆಯ ಭೇದಿಸಿ
ಹಂಗು ಹರಿದು ಲಿಂಗೈಕ್ಯ ನಿರ್ವಾಣವಾದ ಬಳಿಕ
[೧]ಅಂಗಪ್ರಭೆಯ ಮೀರಿದ ಲಿಂಗಮೂಲವು ೭

## ಭಾವಾರ್ಥ

ಆ ಪ್ರಾಣಲಿಂಗದ ಮೂಲಸೂತ್ರವಹ ಅನುಪಮ ಲಿಂಗಾಯತ ಶರಣನ ಅಂಗವಾವಾವೆಂದಡೆ– ಅಂಗಸ್ಥಲ ೩೬. ಅವಾವೆಂದಡೆ– ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯ. ಅಲ್ಲಿ ಭಕ್ತನ ಯೋಗಾಂಗಸ್ಥಲವಾರು. ಅವಾವೆಂದಡೆ– ಸದ್ಭಕ, ಆ ಸದ್ಭಕ್ತನ ಯೋಗ ಮಹೇಶ್ವರ, ಆ ಭಕ್ತನ ಯೋಗಪ್ರಸಾದಿ, ಆ ಭಕ್ತನ ಯೋಗಪ್ರಾಣ ಲಿಂಗಿ, ಆ ಭಕ್ತನ ಯೋಗಶರಣ, ಆ ಭಕ್ತನ ಯೋಗಐಕ್ಯ. ಇಂತೀ ಭಕ್ತನ ಯೋಗಾಂಗಸ್ಥಲವಾರು. ಇಂತು ಷಡಂಗ ವೇದ್ಯನಾದ ಮಹೇ ಶ್ವರನ ಯೋಗಭಕ್ತ, ಆ ಮಹೇಶ್ವರನ ಯೋಗಮಹೇಶ್ವರ, ಆ ಮಹೇ ಶ್ವರನ ಯೋಗಪ್ರಸಾದಿ, ಆ ಮಹೇಶ್ವರನ ಯೋಗಪ್ರಾಣಲಿಂಗಿ, ಆ ಮಹೇಶ್ವರನ ಯೋಗಶರಣ, ಆ ಮಹೇಶ್ವರನ ಯೋಗಐಕ್ಯ. ಇಂತು ಮಹೇಶ್ವರ ಯೋಗಾಂಗಸ್ಥಲವಾರು. ಒಟ್ಟು ಹನ್ನೆರಡು. ಇಂತು ಷಡಂಗ ವೇದ್ಯನೆ ಪ್ರಸಾದಿಯು. ಆ ಪ್ರಸಾದಿಯ ಯೋಗಭಕ್ತ, ಆ ಪ್ರಸಾದಿಯ ಯೋಗಮಹೇಶ್ವರ, ಆ ಪ್ರಸಾದಿಯ ಯೋಗಪ್ರಸಾದಿ, ಆ ಪ್ರಸಾದಿಯ ಯೋಗಪ್ರಾಣಲಿಂಗಿ, ಆ ಪ್ರಸಾದಿಯ ಯೋಗಶರಣ, ಆ ಪ್ರಸಾದಿಯ ಯೋಗಐಕ್ಯ. ಇಂತು ಪ್ರಸಾದಿಯ ಯೋಗಾಂಗಸ್ಥಲವಾರು. ಅಂತು ಒಟ್ಟು ಹದಿನೆಂಟು.

ಇಂತು ಮಾರ್ಗಕ್ರಿಯಾ ವರ್ತನೆಯಲ್ಲಿ ಹದಿನೆಂಟು ಸ್ಥಲ ವೇಧಿಸಿ ದ್ವೈತಾದ್ವೈತವೆಂಬ ಉಭಯ ಕಲ್ಪನೆಯನತಿಗಳೆದು ಮೀರಿದ ಕ್ರಿಯಾ ಸಂಪಾದನೆಯಲ್ಲಿ ಆಚರಿಸುವ ಆಚರಣೆಯೆಂತೆಂದಡೆ– ಪ್ರಾಣಲಿಂಗಿ, ಆ

೧. ಲಿಂಗಪ್ರಭೆಯ ಮೀರಿದ ಲಿಂಗ ಮೀರಿದ. [ಬ]

ಪ್ರಾಣಲಿಂಗಿಯ ಯೋಗಭಕ್ತ, ಆ ಪ್ರಾಣಲಿಂಗಿಯ ಯೋಗಮಹೇಶ್ವರ, ಆ ಪ್ರಾಣಲಿಂಗಿಯ ಯೋಗಪ್ರಸಾದಿ, ಆ ಪ್ರಾಣಲಿಂಗಿಯ ಯೋಗ ಪ್ರಾಣಲಿಂಗಿ, ಆ ಪ್ರಾಣಲಿಂಗಿಯ ಯೋಗಶರಣ, ಆ ಪ್ರಾಣಲಿಂಗಿಯ ಯೋಗಐಕ್ಯ. ಇಂತು ಷಡಂಗವೇದ್ಯನೆ ಶರಣ. ಆ ಶರಣನ ಯೋಗ ಭಕ್ತ, ಆ ಶರಣನ ಯೋಗಮಹೇಶ್ವರ, ಆ ಶರಣನ ಯೋಗಪ್ರಸಾದಿ, ಆ ಶರಣನ ಯೋಗಪ್ರಾಣಲಿಂಗಿ, ಆ ಶರಣನ ಯೋಗಶರಣ, ಆ ಶರಣನ ಯೋಗಐಕ್ಯ. ಇಂತೀ ಶರಣನ ಯೋಗಾಂಗಸ್ಥಲವಾರು. ಒಟ್ಟಿಗೆ ಹನ್ನೆರಡು. ಇಂತು ಷಡಂಗವೇದ್ಯನೆ ಐಕ್ಯ. ಆ ಐಕ್ಯನ ಯೋಗಭಕ್ತ, ಆ ಐಕ್ಯನ ಯೋಗಮಹೇಶ್ವರ, ಆ ಐಕ್ಯನ ಯೋಗಪ್ರಸಾದಿ, ಆ ಐಕ್ಯನ ಯೋಗಪ್ರಾಣಲಿಂಗಿ, ಆ ಐಕ್ಯನ ಯೋಗಶರಣ, ಆ ಐಕ್ಯನ ಯೋಗ ಐಕ್ಯ. ಇಂತೀ ಐಕ್ಯನ ಯೋಗಾಂಗ ಸ್ಥಲವಾರು. ಅಂತು ಒಟ್ಟು ಹದಿನೆಂಟು.

ಇಂತೀ ಮೀರಿದ ಕ್ರಿಯಾ ಸಂಪಾದಿಸಿ ಒಳಹೊರಗೆಂಬ ಕ್ರಿಯಾ ಜ್ಞಾನ ಸಂಪುಟವಾದ ಅಂಗಸ್ಥಲ ಮೂವತ್ತಾರು ಇಂತೀ ಸ್ಥಲಂಗಳಲ್ಲಿ ಆಚರಿಸುವ ಸದ್ಭಕ್ತಿ ಸಮರಸಭಕ್ತಿ ಕ್ರಿಯಾಜ್ಞಾನ ಭಕ್ತಿಯಿಂದ, ಮಾರ್ಗ ಕ್ರಿಯಾಂಗಕ್ಕೆ ಲಿಂಗವೆನಿಸುವ ಆಚಾರಲಿಂಗ, ಗುರುಲಿಂಗ, ಶಿವಲಿಂಗವೆಂಬ ಲಿಂಗತ್ರಯವನು ಮೀರಿದ ಕ್ರಿಯಾಂಗಕ್ಕೆ ಲಿಂಗವೆನಿಸುವ ಚರ ಲಿಂಗ, ಪ್ರಸಾದಲಿಂಗ. ಮಹಾಲಿಂಗವೆಂಬ ಲಿಂಗತ್ರಯವನು, ಉಭಯ ಲಿಂಗ ಸಂಬಂಧದ ಪ್ರಕಾಶವು ಸರ್ವಾಂಗವನು ವೇಧಿಸಿ, ಆ ಅಂಗಗಳು ಏಕಾಂಗವಾಗಿ ಆ ಮನಾಂಗ ಲಿಂಗೈಕ್ಯ ನಿರ್ವಾಣವಾದ ಬಳಿಕ, ಆ ಮೂವತ್ತಾರಂಗದ ಕಳಗೆ ನಿಲುಕದ, ಆ ಮನಾಂಗ ಲಿಂಗೈಕ್ಯದಲ್ಲಿ ಸಹಜ ಸಂಬಂಧಿಯಹ, ಶರಣನ ನಿಲವನು ಮುಂದೆ ಹೇಳಿಹೆವೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಎರಡು ವಿಧದ ಭಕ್ತಿಜ್ಞಾನ ತುರ್ಯಾತೀತವಾದಲ್ಲಿ
ಕುರುಹುಗೆಟ್ಟ ನಿರ್ವಾಣಲಿಂಗ ಮೂಲವು[೧]

---

೧. ಆದಿಯು [ಬ]

ಉನ್ಮನಿಯ ಸ್ಥಾನದಲ್ಲಿ ಉಲುಹು ಮಂತ್ರಗೋಪ್ಯವಾಗಿ
೨ಪರಮಲಿಂಗದ ಬೆಳಗುದೋರಲಾರು ಮೂಲವು ೮

## ಭಾವಾರ್ಥ

ಆ ಮನಾಂಗ ಲಿಂಗೈಕ್ಯದಲ್ಲಿ ಸಹಜ, ಸಂಬಂಧಿಯುಹ ಶರಣನ ನಿಲವೆಂತೆಂದಡೆ– ಆ ಮಾರ್ಗಕ್ರಿಯಾಂಗ ಮೀರಿದ ಕ್ರಿಯಾಂಗವೆನಿಸುವ, ಎರಡು ವಿಧದ ಭಕ್ತಿಜ್ಞಾನಕ್ಕೆ ಸಿಲುಕದಿಹ, ನಿರ್ಭಾವ ಸ್ಥಾನದಲ್ಲಿ ನಿರಾಶ್ರಯವಾದ ಮಹಾ ಘನಲಿಂಗದ ಆ ಮನಾಂಗಲಿಂಗ ಮೂಲವು. ಪರಮಾನಂದ ಪ್ರಭೆಯ ಪಟಲವೆನಿಸುವ ಅತೀಂದ್ರಿಯತ್ವವನೈದಿ ಇರುತ್ತಿಹ ಉನ್ಮನಿಯ ಸ್ಥಾನದಲ್ಲಿ ಉಲುಹೆಂದಡೆ– ಶಬ್ದ, ಶಬ್ದವೆಂದಡೆ ಮಂತ್ರ. ಮಂತ್ರವೆಂದಡೆ ಮನನ. ಮನನವೆಂದಡೆ ನೆನಹು. ಆ ಶಬ್ದ ಸಂಬಂಧವಾಗಿರುವ ವಾಚ್ಯವೂ, ಮಂತ್ರಸಂಬಂಧವಾಗಿರುವ ನೆನಹೂ, ಆ ನಿರಾಶ್ರಯ ನಿರುಪಮಲಿಂಗದಲ್ಲಿ, ಲೀಯವಾದ ಬಳಿಕ ಇಂದ್ರಿಯಂಗಳಿಗೆ ನಿಲುಕದ ಸ್ಥಾನದಲ್ಲಿರ್ದು ಪರಮಾನಂದ ಪ್ರಭೆಯನು ಪ್ರಜ್ವಲಿಸುತ್ತಿರಲು, ಆಚಾರಾದಿ ಮಹಾಲಿಂಗಾಂತವಹ, ಷಟ್‌ಸ್ಥಳ ಲಿಂಗಕ್ಕೆ ಮೂಲವಹ. ಪರಮಾನಂದವೆಂಬ ಕಿರಣಗಳುಳ್ಳ, ಆ ನಿರಾಶ್ರಯ ನಿರುಪಮಲಿಂಗದ ಪ್ರಭಾ ಕಿರಣವೇ ತಾನಾಗಿರುತಿರ್ದನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ತತ್ತ್ವ ತೂರ್ಯತತ್ತ್ವ ಭಾವತತ್ತ್ವ ಮೂವತ್ತಾರರಿಂದ
ತತ್ತ್ವಮೇವ ೧ತತ್‌ತ್ವಂಪದಾಸಿಯಭಾವವು
೨ಮುಕ್ತ್ಯಕ್ಷರತ್ರಯವು ಲಿಂಗದಲ್ಲಿ ನಿಕ್ಷೇಪವಾದ
ತತ್ತ್ವವಾದಕ್ಷರವು ದೃಕ್ಕಿನಲ್ಲಿ ತೋರುತಿರ್ಪುದು ೯

## ಭಾವಾರ್ಥ

ಆ ನಿರಾಶ್ರಯ ನಿರುಪಮ ಲಿಂಗವೇದ್ಯ ಶರಣನಲ್ಲಿ ಪರಿಪೂರ್ಣತ್ವ

---

೨. ಪ್ರಭಾಲಿಂಗದ [ಶಿ]
೧. ತತ್ತ್ವಮಸಿ ಭಾವವು [ಬ] ೨. ತತ್ತ್ವಾಕ್ಷರ [ಬ]

ವನಯ್ದಿದ ಮಹಾ ಘನಲಿಂಗವು ತನಗಾಶ್ರಯವಿಲ್ಲವಾಗಿ ಎಲ್ಲ ತತ್ತ್ವಗಳಿಗೆ ತಾನೆ ಆಶ್ರಯವಾಗಿ, ತನ್ನಲ್ಲಿ ಗರ್ಭೀಕೃತವಾಗಿರ್ದ ತತ್ತ್ವನಿರ್ಣಯವೆಂತೆಂದಡೆ– ತತ್ತ್ವ ಮೂರು ತೆರನಾಗಿಹುದು. ಅವಕ್ಕೆ ವಿವರ– ಆತ್ಮತತ್ತ್ವ, ವಿದ್ಯಾತತ್ತ್ವ, ಶಿವತತ್ತ್ವ. ಅಲ್ಲಿ ಆತ್ಮತತ್ತ್ವ ಇಪ್ಪತ್ತೈದು ತೆರನು. ಅವಕ್ಕೆ ವಿವರ– ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶವೆಂಬ ಸ್ಥೂಲಭೂತ ೫, ಶ್ರೋತ್ರಾದಿ ಜ್ಞಾನೇಂದ್ರಿಯಗಳು ೫, ವಾಗಾದಿ ಕರ್ಮೇಂದ್ರಿಂಗಳು ೫, ಪ್ರಾಣಾದಿವಾಯುಗಳು ೫, ಅಂತಃಕರಣಗಳು ೪, ಜೀವನೊಂದು. ಅಂತು ಆತ್ಮತತ್ತ್ವ ೨೫ ತೆರನು. ಇನ್ನು ವಿದ್ಯಾತತ್ತ್ವ ೧೦ ತೆರನು. ಅವಕ್ಕೆ ವಿವರ– ಶಾಂತ್ಯತೀತೆ, ಶಾಂತಿ, ವಿದ್ಯೆ, ಪ್ರತಿಷ್ಠೆ, ನಿವೃತ್ತಿ ೫. ಶಿವಸಾದಾಖ್ಯ, ಅಮೂರ್ತಿ ಸಾದಾಖ್ಯ, ಮೂರ್ತಿ ಸಾದಾಖ್ಯ, ಕರ್ತೃ ಸಾದಾಖ್ಯ, ಕರ್ಮಸಾದಾಖ್ಯವೆನಿಸುವ ಸಾದಾಖ್ಯಗಳು ೫. ಅಂತು ವಿದ್ಯಾತತ್ತ್ವ ೧೦ ತೆರನು. ಎರಡೂ ಸೇರಿ ತತ್ತ್ವಗಳು ೩೫. ಇಂತಿವೆಲ್ಲವಕ್ಕು ಉತ್ತರವಾಗಿ ಎಲ್ಲ ತತ್ತ್ವಗಳಿಗೆಯೂ ಆಶ್ರಯವಾಗಿ ಇರುತ್ತಿಹ ಶಿವತತ್ತ್ವ ೧. ಈ ಆತ್ಮ ವಿದ್ಯಾ ಶಿವತತ್ತ್ವಗಳು ಒಟ್ಟು ೩೬. ತತ್ತ್ವಮೀವ ಈ ತತ್ತ್ವಂಗಳಲ್ಲಿಯೇ ತತ್ತ್ವಮಸ್ಯಾದಿ ವಾಕ್ಯಾರ್ಥವು ಕಾಣಲಾಯಿತ್ತು. ಅದು ಹೇಗಂದಡೆ– ತತ್ಪದ, ತ್ವಂಪದ ಅಸಿಪದವೆಂದು ೩ ತೆರನು. ಅಲ್ಲಿ ತತ್ಪದವೆಂದು ಭಾವವೆಂಬ ನಾಮವೊಂದಾಗಿರ್ದ ಶಿವತತ್ತ್ವವು. ಅಲ್ಲಿ ತ್ವಂಪದವೆಂದು ತತ್ತ್ವವೆಂಬ ನಾಮವೊಂದಾಗಿರ್ದ ೨೫ ತೆರನಾಗುತ್ತಮಿರ್ದ ಆತ್ಮತತ್ತ್ವವು. ಅಲ್ಲಿ ಅಸಿಪದವೆಂದು ತೂರ್ಯವೆಂಬ ನಾಮವೊಂದಾಗಿರ್ದ, ೧೦ ತೆರನಾಗುತ್ತಮಿರ್ದ ವಿದ್ಯಾತತ್ತ್ವವು. ಈ ಪದತ್ರಯದ ಏಕಾರ್ಥವು ಮುಕ್ತಿಸ್ಥಾನದ ಅಕ್ಷರತ್ರಯವು. ತತ್ತ್ವಮಸಿಯೆಂಬ ಪದತ್ರಯವು ಅಕಾರ, ಉಕಾರ, ಮಕಾರವೆಂಬ ಅಕ್ಷರತ್ರಯಾತ್ಮಕವಾಗಿ 'ಓಂ'ಕಾರದಲ್ಲಿಯೇ ನಿಕ್ಷೇಪವಾಯಿತ್ತು. ಅದು ಹೇಗೆಂದಡೆ– ಆ ಶಿವತತ್ತ್ವದಲ್ಲಿ ತೋರಿದ ಆತ್ಮತತ್ತ್ವವು ಆ ಶಿವತತ್ತ್ವದ ಪ್ರಕಾಶವು, ವಿದ್ಯಾತತ್ತ್ವದ ಬಲದಿಂದ ಆ ಶಿವಪದ ತಾನೆಯಾಯಿತ್ತಾಗಿ, ಅದಕ್ಕೆ ಸಾಕ್ಷಿಯುಹ ವಿದ್ಯೆಯೆಂಬುವ ಶಿವಪದದ ಘನದೃಕ್ಕು, ಅನಿಮಿಷ ನಿರೀಕ್ಷಣವಾದಲ್ಲಿ ತೋರುತ್ತಿಹುದೆಂದು ಚೆನ್ನ

ಬಸವೇಶ್ವರ ದೇವರು ನಿರೂಪನುಂ ಕೊಡುತ್ತಿಹರು.

ಅಂಗಮೂಲ ಪ್ರಣವವೇದ್ಯ ಆದಿಯಾಧಾರಂಕ್ಕೆ
ಸಂಗ ಮೂಲ ಓಂಕಾರ ಪ್ರಭೆಯು ಭೇದಿಸಿ
ಲಿಂಗಭಾವ ಕಂಗಳಲ್ಲಿ ಅಂಗವಿಸಿದ ಬಳಿಕ
ಲಿಂಗಭಾವ ಸಾವಧಾನ ನಿರಂತರವು ೧೦

## ಭಾವಾರ್ಥ

ಅನಿಮಿಷ ನಿರೀಕ್ಷಣದಲ್ಲಿ ಸಹಜವಾಗಿಸಿಂದ ಶರಣನು, ಘನಲಿಂಗ ಸಮರಸದಲ್ಲಿ ದೀಪಿಸುವ ಅನುಭಾವ ಮಂತ್ರಗೋಪ್ಯವೆಂತಿರ್ದುದೆಂದಡೆ– ಅಂಗವೆಂದಡೆ ಜೀವನು. ಆ ಜೀವಂಗೆ ಮೂಲ ಪ್ರಣವವು. ಅದಕ್ಕೆ ವಿವರ– ನಾದ, ಬಿಂದು, ಕಳೆ. ನಾದವೇ ಶಬ್ದಬ್ರಹ್ಮ, ಬಿಂದುವೇ ಪಿಂಡ ಬ್ರಹ್ಮ, ಕಳೆಯೇ ಚೈತನ್ಯ ಬ್ರಹ್ಮ. ಇಂತೀ ನಾದ ಬಿಂದು ಕಳೆಗಳಿಗೆ ಮೂಲಾಕ್ಷರ–ಅಕಾರ, ಉಕಾರ, ಮಕಾರಗಳು. ಇಂತೀ ಅಕ್ಷರತ್ರಯಾತ್ಮಕವಾಗಿಹುದೇ ಓಂಕಾರ. ಇಂತೀ ಪ್ರಣವವನರಿದು ಜ್ಞಾನದ ಸಮರಸದಲ್ಲಿ ನಿಂದು ಉಚ್ಚರಿಸಲಾಗಿ, ಓಂಕಾರವಾಯಿತ್ತು. ಆ ಓಂಕಾರದ ಪ್ರಭಾಪಟಲಕ್ಕೆ ಅವಸಾನ ಸ್ಥಾನ ಮಹಾಲಿಂಗ. ಆ ಲಿಂಗವೇ ಪ್ರಾಣಾತ್ಮಕವಾಗಿ, ಲಯಗಮನ ಸ್ಥಿತಿಗಳಿಗೆ ಆಶ್ರಯಸ್ಥಾನವಾಗಿಹುದು. ಅದು ತಾನೆ ಷಟ್‌ಪ್ರಕಾರವಾಗಿ ಭಾವಗಮ್ಯ, ಜ್ಞಾನಗಮ್ಯ, ಕ್ರಿಯಾಗಮ್ಯವಾದ ಬಳಿಕ, ತೆರಹಿಲ್ಲದೆ, ಲಿಂಗಭಾವ ತಾನೆ ನಿಂದು, ಎಡೆಕಡೆಯಿಲ್ಲದೆ ಇರುತ್ತಿಹನೆಂದು ಚೆನ್ನಬಸವೇಶ್ವರ ದೇವರು ನಿರೂಪನುಂ ಕೊಡುತ್ತಿಹರು.

ಅಂಗಸ್ಥಲ ಮೂವತ್ತಾರು ಲಿಂಗಸ್ಥಲ ಮೂವತ್ತಾರು
ನಿಸ್ಸಂಗ ಲಿಂಗಸ್ಥಲ ಮೇಲೆ ಮೂವತ್ತಾರರ
ಅಂಗಲಿಂಗ ನಿಸ್ಸಂಗವಾರಾರ ಭೇದಿಸಿ ಪ್ರಾಣ
ಲಿಂಗದಾದಿ ಪ್ರಭೆಯ ತಿಳಿಯ ಪೇಳಿದೆ ೧೧

## ಭಾವಾರ್ಥ

ಆ ಲಿಂಗಭಾವ ನೆಲೆಗೊಂಡ ಅವಿರಳಾಂಗಲೇಪ ಶರಣನ ತೂರ್ಯಾನುಭಾವ ರಹಸ್ಯವಹ ಅಂಗ, ಲಿಂಗ, ನಿಸ್ಸಂಗ ಲಿಂಗಸ್ಥಲ ನಿರ್ದೇಶವೆಂತೆಂದಡೆ– ಅಂಗಸ್ಥಲ ಮೂವತ್ತಾರು. ಅವಕ್ಕೆ ವಿವರ– ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. ಅಲ್ಲಿ ಭಕ್ತನಂಗವಾರು. ಅವಾವೆಂದಡೆ– ಆಚಾರಾಂಗ, ಗೌರವಾಂಗ, ಶಿವಾಂಗ, ಚರಾಂಗ, ಪ್ರಸಾದಾಂಗ, ಮಹದಂಗ. ಇನ್ನು ಮಾಹೇಶ್ವರನಂಗವಾರು. ಅವುಗಳ ವಿವರ– ಆಚಾರನಿಷ್ಠೆ, ಗುರುನಿಷ್ಠೆ, ಲಿಂಗನಿಷ್ಠೆ, ಜಂಗಮನಿಷ್ಠೆ, ಪ್ರಸಾದ ನಿಷ್ಠೆ, ಮಹಾನಿಷ್ಠೆ ಎಂಬವು. ಇನ್ನು ಪ್ರಸಾದಿಯುಂಗವಾರು. ಅವಕ್ಕೆ ವಿವರ– ಆಚಾರಾವಧಾನಿ, ಗೌರವಾವಧಾನಿ, ಲಿಂಗಾವಧಾನಿ, ಚರಾವಧಾನಿ, ಪ್ರಸಾದಾವಧಾನಿ, ಮಹಾವಧಾನಿ ಎಂಬವು. ಇಂತೀ ಸ್ಥೂಲದಲೊದಗಿದ ಸಾವಧಾನಾನುಭಾವ. ಇನ್ನು ಸೂಕ್ಷ್ಮದಲೊದಗಿದ ಪ್ರಾಣಲಿಂಗಿಯುಂಗವಾರು. ಅವಕ್ಕೆ ವಿವರ– ಸಾಧ್ಯ, ವೇದ್ಯ, ಭೇದ್ಯ, ಯೋಗ್ಯ ಸನ್ನಿಹಿತ, ಮಹಾನುಭಾವಿ ಎಂಬವು. ಇನ್ನು ಶರಣನಂಗವಾರು. ಅವಕ್ಕೆ ವಿವರ– ಆಯತ, ಸ್ವಾಯತ, ಸನ್ನಿಹಿತ, ಕಳಾಗ್ರಾಹಕ, ಮನೋಮಗ್ನತೆ, ಘನಸಮರಸ ಎಂಬವು. ಇನ್ನು ಐಕ್ಯನಂಗವಾರು. ಅವಕ್ಕೆ ವಿವರ– ಆಚಾರತೃಪ್ತಿ, ಗೌರವತೃಪ್ತಿ, ಲಿಂಗತೃಪ್ತಿ, ಪ್ರಸಾದತೃಪ್ತಿ, ಚರತೃಪ್ತಿ, ಮಹಾನುಭಾವ ನಿರ್ಭಾವ ತೃಪ್ತಿ ಎಂಬವು. ಹೀಗೆ ಆದಿಯ ಕುಳದ ಅಂಗ ಹದಿನೆಂಟು. ಉತ್ತರ ಕುಳದ ಅಂಗ ಹದಿನೆಂಟು. ಉಭಯ ಕೂಡಿ ಅಂಗಸ್ಥಲ ಮೂವತ್ತಾರು.

ಇನ್ನು ಲಿಂಗಸ್ಥಲ ಮೂವತ್ತಾರು. ಅವಕ್ಕೆ ವಿವರ–ಆಚಾರಲಿಂಗ ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬವು. ಇಂತು ದೃಶ್ಯಾದೃಶ್ಯ ಭಾವಲಿಂಗಸ್ಥಲವಾರು. ಅಲ್ಲಿ ಆಚಾರ ಲಿಂಗ ಷಡ್ವಿಧ. ಅವಕ್ಕೆ ವಿವರ–ಕ್ರಿಯಾ, ಮಂತ್ರ, ವೇಧಾ, ಯಜನ, ಈಳಣ, ನಿರೀಕ್ಷಣವೆಂದು. ಇನ್ನು ಗುರುಲಿಂಗ ಷಡ್ವಿಧ. ಅವಕ್ಕೆ ವಿವರ- ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ವೇಧಾದೀಕ್ಷೆ, ಬೋಧಾದೀಕ್ಷೆ, ಪ್ರಸನ್ನ

ದೀಕ್ಷೆ, ನಿರ್ವಾಣದೀಕ್ಷೆಯೆಂದು. ಇನ್ನು ಶಿವಲಿಂಗಸ್ಥಲವಾರು. ಅವಕ್ಕೆ ವಿವರ-ಕರಸ್ಥಲ, ನಯನಸ್ಥಲ, ಹೃದಯಸ್ಥಲ, ಮಂತ್ರಸ್ಥಲ, ತ್ರಿಕೂಟ ಸ್ಥಲ,ಲಯಸ್ಥಲವೆಂದು. ಅಂತು ಮೂರು ಲಿಂಗಸ್ಥಲ. ಒಟ್ಟುಹದಿನೆಂಟು.

ಇನ್ನು ಜ್ಞಾನಭಾವ ನಿರಾಶ್ರಯದಲೊದಗಿದ ಚರಲಿಂಗಸ್ಥಲವಾರು ತೆರನು. ಅವಕ್ಕೆ ವಿವರ–ಸ್ವಯ, ಸ್ವತಂತ್ರ, ಚರ, ಪರಿಣಾಮಿ, ನಿರುಪಾಧಿಕ, ಪರಿಪೂರ್ಣವೆಂದು. ಇನ್ನು ಪ್ರಸಾದಲಿಂಗಸ್ಥಲವಾರು. ಅವಕ್ಕೆ ವಿವರ–ಇಂದ್ರಿಯಾನಂದ, ಪ್ರಾಣಾನಂದ, ಜ್ಞಾನಾನಂದ, ಭಾವಾನಂದ, ತೂರ್ಯಾನಂದ, ಮಹಾನಂದವೆಂದು. ಇನ್ನು ಮಹಾಲಿಂಗಸ್ಥಲವಾರು. ಅವಕ್ಕೆ ವಿವರ–ಪಿಂಡಾಕಾಶ, ಬಿಂದ್ವಾಕಾಶ, ಮಹದಾಕಾಶ, ಭಾವಗವ್ಯ ಸರ್ವತತ್ತ್ವಾಶ್ರಯ, ಪರಿಪೂರ್ಣ ಪ್ರಕಾಶವೆಂದು. ಅಂತು ಮೂರು ಲಿಂಗಸ್ಥಲ. ಒಟ್ಟು ಹದಿನೆಂಟು. ಇಂತು ದೃಶ್ಯದಲೊದಗಿದ ಲಿಂಗಸ್ಥಲ ಹದಿನೆಂಟು. ಜ್ಞಾನಭಾವ ನಿರಾಶ್ರಯದಲೊದಗಿದ ಲಿಂಗಸ್ಥಲ ಹದಿನೆಂಟು. ಉಭಯ ಲಿಂಗಸ್ಥಲ ಮೂವತ್ತಾರು. ಇಂತು ಅಂಗಸ್ಥಲ ಮೂವತ್ತಾರು.

ಇನ್ನು ನಿಸ್ಸಂಗ ಲಿಂಗಸ್ಥಲ ಮೂವತ್ತಾರು. ನಿಸ್ಸಂಗ ಲಿಂಗಸ್ಥಲವೆ ಅಂಗಲಿಂಗ ಸಂಬಂಧವಾಗಿ ಆ ಲಿಂಗವು ಅಂಗದ ಕಳೆಯನವಗ್ರಹಿಸಿ ಅಂಗಾಶ್ರಯವೆಲ್ಲವು ಲಿಂಗದಲ್ಲಿ ಲೀಯವಾಗಿ, ಲಿಂಗದೃಷ್ಟಿಯು ನಿರಂತರ ನಿಂದು ಪ್ರಭೆದೋರಿ ಹಿಂದೆಹೇಳಿದ ಮೂವತ್ತಾರು ವಿಧದ ನಿಸ್ಸಂಗ ಲಿಂಗಸ್ಥಲಕ್ಕಾಶ್ರಯವಾಗಿಹ ಪರಿಪೂರ್ಣ ಮಹಾಘನಲಿಂಗವು, ಅಂಗಸ್ಥಲ ಮೂವತ್ತಾರರಲ್ಲಿ ವೇಧಿಸಿ, ಲಿಂಗಸ್ಥಲ ಮೂವತ್ತಾರರಲ್ಲಿ ನಿಂದು, ಪರಿಪೂರ್ಣಲಿಂಗವು, ಪ್ರಾಣಲಿಂಗಾದಿ ಪ್ರಭೆ ತಾನೆಯೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಶದ್ಧ ಸಿದ್ಧ ಪ್ರಸಿದ್ಧ ಮೂಲಪ್ರಣಮಹೊಂಕಾರ
ಹೊದ್ದಿ ಹೊದ್ದದಿಪ್ಪದಲ್ಲಿ ಹ್ರೀಂಕಾರವು
ಶದ್ಧ ಪ್ರಣಮ ಸಿದ್ಧವಾಗಿ ಅಂತುಅನ್ವಯವನು ಮೀರಿ
ಶುದ್ಧ ಸಿದ್ಧ ಪ್ರಸಿದ್ಧದಾದಿಯೆಂತೆನೆ ೧೨

## ಭಾವಾರ್ಥ

ಆ ಪ್ರಾಣಲಿಂಗದಾದಿ ಪ್ರಭೆಯು ನಿಸ್ಸಂಗ ಪರಿಪೂರ್ಣ ಲಿಂಗ ಸಾರಾಯ ವೇದ್ಯ ಶರಣನ, ಮಂತ್ರಗೋಪ್ಯವೆನಿಸುವ ನಿಕ್ಷೇಪ ತ್ರಿವಿಧ ಪ್ರಸಾದದ ನಿರ್ಣಯವೆಂತೆಂದಡೆ– ಶುದ್ಧ ಸಿದ್ಧ ಪ್ರಸಿದ್ಧವೆಂದು ತ್ರಿವಿಧ ಪ್ರಸಾದ. ಇವಕ್ಕೆ ವಿವರ– ಶುದ್ಧವೆಂಬುದು ಲಿಂಗದೊಲುಮೆ. ಅದೆಂತೆಂದಡೆ– ತನುತ್ರಯ, ಜೀವತ್ರಯ, ಅವಸ್ಥಾತ್ರಯ, ಮಲತ್ರಯ, ಈಷಣ ತ್ರಯವೆಂಬ ಪಂಚದಶ ಮಾಯಾ ಭ್ರಾಂತಿಯ ಪಟಲವನು, ಶುದ್ಧ ಪ್ರಭಾವರಣವನ್ನುಳ್ಳ ಪರಿಪೂರ್ಣ ಮಹಾಘನಲಿಂಗವು ತನುತ್ರಯದಲ್ಲಿ ಇಷ್ಟಪ್ರಾಣಭಾವಲಿಂಗವಾಗಿ, ಜೀವತ್ರಯದಲ್ಲಿ ಮಂತ್ರ ಜ್ಞಾನ ಧ್ಯಾನ ರೂಪಕವಾಗಿ, ಅವಸ್ಥಾತ್ರಯದಲ್ಲಿ ಸತ್ಕ್ರಿಯಾಚರಣೆ, ತದ್ವಾಸನೆ, ತಲ್ಲೀಯವಾಗಿ, ಮಲತ್ರಯದಲ್ಲಿ ಶಿವಜ್ಞಾನ ಬೀಜ, ಭಕ್ತಜನಬಂಧುತ್ವ, ದ್ರವ್ಯತ್ರಯ ಲಿಂಗಾರ್ಪಣವಾಗಿ, ಈಷಣತ್ರಯದಲ್ಲಿ ತ್ರೈಲಿಂಗ ಪ್ರೇಮ ರತಿಗೆ ಸಕಲಸಾಧನಗಳಾಗಿ, ಮಾಯಾಭ್ರಾಂತಿಯ ನಿರ್ಭ್ರಾಂತಿಯೆನಿಸಿ, ಲಿಂಗವೇಧೆಯಿಂದ ಶುದ್ಧಾತ್ಮನಾದನಾಗಿ, ಶುದ್ಧ ಪ್ರಸಾದಿ. ಇನ್ನು ಸಿದ್ಧವೆಂಬುದು, ಚರಲಿಂಗದೊಲುಮೆ. ಅದೆಂತೆಂದಡೆ– ಇಲ್ಲದ ಮಾಯೆಯ ಇಲ್ಲೆಂದು ಉಂಟಾದುದ ನಿಸ್ಸದೆಂದು ತಿಳುಪಿ, ಪರಿಪೂರ್ಣಲಿಂಗವೆಂಬುವನು ಅನುಭಾವ ದೃಕ್ಕಿನಿಂದರುಹಿ, ಸರ್ವಸಿದ್ಧಿಪ್ರದ ಪ್ರಸನ್ನಪಾತ್ರನ ಮಾಡಿದನಾಗಿ, ಆ ಪ್ರಸನ್ನ ಪ್ರಸಾದಗ್ರಾಹಕ ತಾನಾಗಿ ಸಿದ್ಧಪ್ರಸಾದಿ. ಇನ್ನು ಪ್ರಸದ್ಧವೆಂಬುದು ಗುರುವಿನೊಲುಮೆ. ಅದೆಂತೆಂದಡೆ– ಘನಲಿಂಗದಲೊದಗಿದ ಆಚಾರಾದಿ ಮಹಾಲಿಂಗಾನುಭಾವ ಸಮರಸಕ್ಕೆ ಸತ್ಪಾತ್ರ ಸಾಧನವಹ, ವೇಧಾ, ಮಂತ್ರ, ಕ್ರಿಯಾ, ದೀಕ್ಷೆಯನು ಕರುಣಿಸಿ, ಸಕಲ ಭ್ರಾಂತಿಯನು ಛೇದನವ ಮಾಡಿದನಾಗಿ ಪ್ರಸಿದ್ಧ ಪ್ರಸಾದಿ.

ಇಂತು ತ್ರಿವಿಧ ಪ್ರಸಾದವ ನಿಂಬುಗೊಂಡ ಶರಣನ ಬಿಂದು ಸ್ವರೂಪವೆನಿಸುವ ತನು, ನಾದಸ್ವರೂಪವೆನಿಸುವ ಪ್ರಾಣ, ಕಳಾಸ್ವರೂಪವೆನಿಸುವ ಚೈತನ್ಯ. ಅಂತು ನಾದಬಿಂದುಕಳೆಗಳಿಗಾಶ್ರಯವು ಪ್ರಣವಾಕ್ಷರವು. ಆ ನಿಕ್ಷೇಪಾಕ್ಷರತ್ರಯದ ನಾದಬಿಂದುಕಳೆಗಳು ತ್ರೈಲಿಂಗಾರ್ಪಣ

ವಾಗಿ, ಆ ಪ್ರಣವದ ಲಯಸ್ಥಾನವಹ, ಶಿವಬೀಜಾಕ್ಷರ ವ್ಯಾಪ್ತಿಯ ಪ್ರಭಾವರಣವನ್ನುಳ್ಳ, ಹ್ರೀಂಕಾರಾತ್ಮಕವಹ, ಹಕಾರಲಿಂಗವನು, ಅನುಭಾವ ಪ್ರಭೆ ಯೋಗದಿಂದ ಹೊಂದಿ, ಆ ಶಕ್ತಿಬೀಜವನು ಶಿವಾರ್ಪಣವ ಮಾಡಿದನಾಗಿ ಹೊದ್ದಿಯೂ ಹೊದ್ದನು. ಆ ಶುದ್ಧ ಪ್ರಣವ ಪ್ರಸಾದ ಹಕಾರಲಿಂಗ. ಸಿದ್ಧಪ್ರಣವ ಪ್ರಸಾದ ಹ್ರೀಂಕಾರ ಶಕ್ತಿ. ಇಂತೀ ಶಿವ ಶಕ್ತಿಯ ಆದಿಯಂತ್ಯವನು, ಮೀರಿತೋರುವ ಮಹಾಪ್ರಸಾದವೇ ಶುದ್ಧ ಸಿದ್ಧ ಪ್ರಸಿದ್ಧದಾದಿಯೆಂದು ಚೆನ್ನಬಸವೇಶ್ವರ ದೇವರು ನಿರೂಪವಂ ಕೊಡುತ್ತಿರ್ಪರು.

ನೆನಹು ನಿರ್ವಾಣತೆಯನನುಕರಿಸಿದಾ ಭಕ್ತ
೧ತನುಮನಧನದಲ್ಲಿ ನಿರ್ವಂಚಕ
ಘನಲಿಂಗ ಪ್ರಭೆಯೊಳಗಾಯತ ಸ್ವಾಯತವಾಗಿ
ಮನಕೆ ಮನವೆ ಸಾಕ್ಷಿಯಾಗಿ ಚರವ ನರ್ಚಿಪಾ ೧೩

## ಭಾವಾರ್ಥ

ಆ ಪ್ರಸಾದತ್ರಯದ ನಿಕ್ಷೇಪದಾದಿಯೆನಿಸುವ ಮಹಾಪ್ರಸಾದವ ನಂಗಂಗೊಂಡು ನಿಂದ ಶರಣನ ತ್ರಿವಿಧವು ತ್ರಿವಿಧದಲ್ಲಿ ಆಯತವಾಗಿ, ತ್ರಿವಿಧವು ತ್ರಿವಿಧದಲ್ಲಿ ಸ್ವಾಯತವಾಗಿ ನಿಂದ ನಿಲವೆಂತೆಂದಡೆ– ಇಂತೀ ತ್ರಿವಿಧ ಪ್ರಸಾದದಲ್ಲಿ ಆಯತ ಸ್ವಾಯತ ಸಂಬಂಧಿಯೆನಿಸುವ ಶರಣನು, ತ್ರೈಲಿಂಗದಲ್ಲಿ ವ್ಯಾಪಕತ್ವವನುಳ್ಳ ಅನುಭಾವ ಚಿಂತನೆಗೆ ನಿರ್ವಾಹವಾದುವಾಗಿ, (ಸಹಿಸುವ ಶಕ್ತಿಯುಳ್ಳದ್ದಾಗಿ) ಅಂತಹ ನಿರ್ವಾಹ ನಿರ್ವಾಣತೆಯನು (ಸಹಿಸುವ ಶಕ್ತಿಯ ನೈಪುಣ್ಯವನ್ನು) ಇಂಬುಗೊಂಡಾತನೆ ಭಕ್ತ. ಆ ಭಕ್ತನು ಸಕಲ ಪ್ರಪಂಚಕ್ಕೆ ಬೇರೆನಿಸುವ ಸದ್ಭಕ್ತ್ಯಾದಿ ಸಮರಸ ಭಕ್ತ್ಯಂತವಹ, ಷಡ್ವಿಧ ಭಕ್ತಿಸಂಪನ್ನನು. ಆ ಭಕ್ತಂಗೆ ತನುವೇ ಗುರು, ಮನವೇ ಲಿಂಗ, ಧನವೇ ಜಂಗಮ ಪ್ರತಿರೂಪಕವಾಯಿತ್ತಾಗಿ, ತ್ರಿವಿಧ ತ್ರಿವಿಧವನವಗ್ರಹಿಸಿ, ತ್ರಿವಿಧ ತ್ರಿವಿಧದಲ್ಲಳವಟ್ಟು, ತ್ರಿವಿಧರತಿ ವೈದೋರಿ ತ್ರಿವಿಧವೇಕವಾಗಿ, ಆ ತ್ರಿವಿಧ ಮೂಲಾಂಕುರವಹ, ಘನಚೈತನ್ಯವೆಂಬ

೧. ತನುಮಾರ್ಗಧನದಲ್ಲಿ [ಬ]

ಪರವು ಚರಲಿಂಗವಲ್ಲದೆ, ಮತ್ತಾವ ಕಾಣಿಕೆಯೂ ತನಗೆ ತೋರದಾಗಿ, ಆ ಲಿಂಗವೆ ತನಗೆ ಮನನವಾಗಿ, ಆ ಘನಲಿಂಗ ಪ್ರಭೆಯೊಳಗೆ ತಾನೆ ಇದ್ದು ಆಯತಲಿಂಗಕ್ಕೆ ತಾನಾಯತವಾಗಿ (ಇಷ್ಟಲಿಂಗಕ್ಕೆ ತಾನಿಷ್ಟವಾಗಿ) ಸ್ವಾಯತಲಿಂಗಕ್ಕೆ ತಾಸ್ವಾಯತವಾಗಿ (ಪ್ರಾಣಲಿಂಕ್ಕೆ ತಾ ಪ್ರಾಣವಾಗಿ) ಸಂಯೋಗಸ್ಥಾನದಲ್ಲಿ, ಮನಮುಗ್ಧಾವಸ್ಥೆಯಲ್ಲಿ, ಮನಮನತಾರ್ಕಣೆ (ತಾರ್ಕಣ್ಯ)ವಾಗಿ ಘನಚೈತನ್ಯವೆಂಬ ಜಂಗಮವನಾರಾಧಿಸುತ್ತಿರ್ದ ನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಮುಟ್ಟಿದಲ್ಲಿ ಮುಟ್ಟಿದಲ್ಲಿ ತೊಟ್ಟುಬಿಟ್ಟ ಹಣ್ಣಿನಂತೆ
ಬಟ್ಟಬಯಲ ತುಟ್ಟತುದಿಯ ಮೆಟ್ಟಿನಿಂದನು
ಸೃಷ್ಟಿಯಂತೆ ತನಗುಣದಂಗಲಿಂಗದಾದಿಯರಿದು
ಹುಟ್ಟುಗೆಟ್ಟ ಬಟ್ಟೆಯನ್ನು ಮೆಟ್ಟಿನಿಂದನು ೧೪

## ಭಾವಾರ್ಥ

ಆ ಘನಚೈತನ್ಯ ಜಂಗಮಲಿಂಗದಲ್ಲಿ ಸಾವಧಾನಿ ಶರಣನು ಮುಂದೆ ಜ್ಞಾನಾಚಾರದಲ್ಲಿ ಆಚರಿಸುವ ಆಚರಣೆಯೆಂತಿರ್ದುದೆಂದಡೆ– ಆಚಾರಾದಿ ಮಹಾಲಿಂಗಾಂತವಹ ಲಿಂಗಷಡ್ವಿಧ ಜ್ಞಾನಾಂಗವು ನಿರೂಪು. ಜ್ಞಾನಹಸ್ತದಲ್ಲಿ, ಜ್ಞಾನದೃಕ್ಕಿನಲ್ಲಿ ಆಚರಿಸುವ ಆಚರಣೆಯು ನಿರೂಪು. ಈ ಎರಡರ ಸ್ಪರ್ಶನವೆಂಬುದು ತೊಟ್ಟುಬಿಟ್ಟ ಹಣ್ಣಿನಂತೆ, ಮೂಲಬಂಧ ವಿಲ್ಲದೆ, ಒಂದೊಂದರ ಭಾವರೂಪು, ಒಂದೊಂದರಲ್ಲಿ ಲಯವನೈದು ನಿರಾಲಂಬನವನಂಗೀಕರಿಸಿದ ತೂರ್ಯಾವಸ್ಥೆಯ ಭಾವವು ನಿರ್ಭಾವ ವಾಗಿ ಇರುತ್ತಿರುವ ಮಹಾಲಿಂಗ ಸ್ಥಾನದಲ್ಲಿರುತ್ತಿರ್ದನು. ಅದೆಂತೆಂದಡೆ– ತನುಗುಣಗಳ ಸೃಷ್ಟಿಯು, ಅದರ ಲಯದಂತೆ ಪೃಥ್ವಿಗೆ ಜಲ ಲಯ ಸ್ಥಾನ, ಜಲಕ್ಕೆ ಅಗ್ನಿಯು ಲಯಸ್ಥಾನ, ಅಗ್ನಿಗೆ ವಾಯುವೆ ಲಯಸ್ಥಾನ, ವಾಯುವಿಗೆ ಆಕಾಶವೆ ಲಯಸ್ಥಾನ, ಆಕಾಶಕ್ಕೆ ಆತ್ಮನೆ ಲಯಸ್ಥಾನ, ಆತ್ಮಂಗೆ ಮಹಾಲಿಂಗವೆ ಲಯಸ್ಥಾನವಾಗಿ, ಆ ಘನಲಿಂಗದ ನಿರವಯ ವೆನಿಸುವ ಅಂಗವಿಡಿದು ನಿರ್ಭಾವವನಯ್ದುವ, ಸಂಗವಿಡಿದು ಸ್ವರೂಪಿ

ದೆಂಬ ಆದ್ಯಂತವ ವೇಧಿಸಿ, ಆ ಷಡ್ವಿಧ ಲಿಂಗವೊಂದೊಂದರ ಭಾವ, ಒಂದೊಂದರಲ್ಲಡಗಿದ ಘನಪದದಲ್ಲಿರುತ್ತಿಹನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ತನು ಮನ ಧನವೆಂಬ ತ್ರಿವಿಧವನು ಮೂರು ಲಿಂಗ
ದನುವನನುಕರಿಸಿ ಅವರೊಳರ್ಪಿಸುವನು
ತನುಮುಟ್ಟಿ ಮನಮುಟ್ಟಿ ಧನಮುಟ್ಟಿಯರ್ಪಿಸುವ
ಅನುವನರಿದಾತನು ತೂರ್ಯಕೊಪ್ಪುವ ೧೫

## ಭಾವಾರ್ಥ

ಆ ಲಿಂಗಭಾವ ವಿಶ್ರಾಂತಿಯನಯ್ದಿದ ಘನಪದಸ್ಥನಾದ ಶರಣನು ಜ್ಞಾನಾನುಭಾವ ವ್ಯೈದೋರಿದ ದೃಶ್ಯದಲಾಚರಿಸುವ ಸಾವಧಾನ ಸಂಬಂಧಾರ್ಪಣ, ತ್ರಿವಿಧ ಲಿಂಗ ಪ್ರಸನ್ನತ್ವವೆಂತಿರ್ದುದೆಂದಡೆ– ಆ ಮಹಿಮನ ತನು ಮನ ಧನವೆಂಬ ತ್ರಿವಿಧವು ಶ್ರೀಗುರು, ಲಿಂಗ, ಜಂಗಮವೆಂಬ ತ್ರಿವಿಧ ಲಿಂಗದಲ್ಲಿ ಅರ್ಪಣವಾಗಿ ಆ ಲಿಂಗತ್ರಯದ ಅಂಗ, ಹಸ್ತ, ಲಿಂಗ, ಮುಖ, ವಿಷಯ, ಪದಾರ್ಥವಿದೆಂದರಿದು ಅರ್ಪಿಸಿದ ಶೇಷವೆಲ್ಲವು ಪ್ರಸಾದವಾಗಿ ತನುಭಾವವಿಲ್ಲದೆ, ತನುವೇ ಗುರುವಾಗಿ, ಮನಭಾವವಿಲ್ಲದೆ, ಮನವೇ ಲಿಂಗವಾಗಿ, ಧನಭಾವವಿಲ್ಲದೆ ಧನವೇ ಜಂಗಮವಾಗಿ, ಆ ಲಿಂಗತ್ರಯದ ಭಾವ ಸ್ವರೂಪತ್ರಯವು, ಆ ಲಿಂಗತ್ರಯದ ಮೂಲಾಂಕುರವಹ ಘನಲಿಂಗದಲ್ಲಿ ಅರ್ಪಿತವಾಗಿ, ಆ ಘನಲಿಂಗದ ಪ್ರಸನ್ನ ಪ್ರಸಾದವು ತಾನೆಯಾದ ಶರಣನು, ಆ ಲಿಂಗತ್ರಯಾತೀತವಹ, ತೂರ್ಯಾವಸ್ಥೆಯ ಅನುಪಮ ಲಿಂಗಪ್ರಸಾದ ನಿಕ್ಷೇಪ ಶರಣನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ತನುಮುಟ್ಟಿ ತ್ರಿವಿಧವನು ಗುರುವಿಗೆಂಬ ಭಕ್ತಿಯಲಿ
ಮನಮುಟ್ಟಿ ತ್ರಿವಿಧವನು ಲಿಂಗಕ್ಕೆಂಬನಾ
ಧನಮುಟ್ಟಿ ತ್ರಿವಿಧವನು ಚರಲಿಂಗಕರ್ಪಿಸಿ ಮರ
ಳದಾತನಾತ, ಹುಟ್ಟುಗೆಟ್ಟನೆಂಬೆನು ೧೬

## ಭಾವಾರ್ಥ

ಆ ಘನಲಿಂಗದ ಪ್ರಸಾದ ನಿಕ್ಷೇಪ ತಾನಾಗಿ ರೂಪುದೋರುವ ಪರಮ ಪರಿಣಾಮಿ ಶರಣಂಗೆ, ಇಂದ್ರಿಯಾವಧಾನ, ಪ್ರಾಣಾವಧಾನ, ಭಾವಾವಧಾನವೆಂಬ, ಅವಧಾನತ್ರಯಕ್ಕೆ ಜ್ಞಾನವೇ ಕಾರಣವಾಗಿ, ಆ ಜ್ಞಾನ ವಿಶ್ರಾಂತಿಯನಯ್ದುವ ಪರಿಯಂತರ, ಅರ್ಪಣವೇ ಕಾರಣವಾಗಿ ತ್ರೈಲಿಂಗಾರ್ಪಣವೇ ಸಾಧನವು. ಅದೆಂತೆಂದಡೆ– ಆ ಶರಣನು ಕ್ರಿಯಾ-ಗುರು, ಭಾವಗುರು, ಜ್ಞಾನಗುರುವೆಂಬ ಗುರುತ್ರಯದಲ್ಲಿ, ಸ್ಥೂಲ, ಸೂಕ್ಷ್ಮ, ಕಾರಣವೆಂಬ ತನುತ್ರಯುವನು, ಪ್ರತ್ಯಕ್ಷಜ್ಞಾನ, ಅಪರೋಕ್ಷ ಜ್ಞಾನ, ಸಹಜಜ್ಞಾನ, ಎಂಬ ಜ್ಞಾನದ್ವಾರದಲ್ಲಿ, ಅರ್ಪಿಸಬಲ್ಲನಾಗಿ ಆ ಶರಣನು ತನುನಿರ್ವಾಣಿ. ಮನ, ಮನನ, ಮನನೀಯವೆಂಬ ಮನ ತ್ರಯವನು, ಇಷ್ಟ, ಪ್ರಾಣ, ಭಾವವೆಂಬ ಲಿಂಗತ್ರಯದಲ್ಲಿ, ಮನ, ನಿರೀಕ್ಷಣ, ಈಳನವೆಂಬ ರತಿತ್ರಯದಲ್ಲಿ ಅರ್ಪಿಸಬಲ್ಲನಾಗಿ, ಆ ಶರಣನು ಮನನಿರ್ವಾಣಿ. ಧನ, ಮಮಕಾರ, ಸಂಗ್ರಹವೆಂಬ ಕಾರ್ಮಿಕತ್ರಯ ವನು, ಸ್ವಯ, ಚರ, ಪರವೆಂಬ ಚರಲಿಂಗತ್ರಯದಲ್ಲಿ, ನಿರ್ಮೋಹ, ನಿರಪೇಕ್ಷೆ, ನಿಪುಃರುಷತ್ವವೆಂಬ ನಿರ್ವಂಚಕದ್ವಾರದಲ್ಲಿ ಅರ್ಪಿಸಬಲ್ಲನಾಗಿ, ಆ ಶರಣನು ಧನನಿರ್ವಾಣಿ. ಇಂತಾ ಶರಣನು ಅನಂತ ಕಲ್ಪಂಗಳು ಹೋಗುತ್ತಂಬರುತ್ತಮಿರ್ದಡೂ ಲಿಂಗತ್ರಯ ನಿರ್ಲೇಪವಾದ ನಿಜಭಾವ ದಲ್ಲಿಹನು. ಆ ಭಾವ ಕಲ್ಪನೆಯನಯ್ದಿದನಾಗಿ, ಆ ಶರಣಂಗೆ ಜೀವಭಾವ ವಿಲ್ಲ. ಜೀವಭಾವವಿಲ್ಲವಾಗಿ, ಇಂದ್ರಿಯಭಾವವಿಲ್ಲ. ಇಂದ್ರಿಯಭಾವವಿಲ್ಲ ವಾಗಿ, ವಿಷಯಭಾವವಿಲ್ಲ. ವಿಷಯಭಾವವಿಲ್ಲವಾಗಿ ಭೂತಭಾವವಿಲ್ಲ. ಭೂತಭಾವವಿಲ್ಲವಾಗಿ ಬೀಜಭಾವವಿಲ್ಲ. ಬೀಜಭಾವವಿಲ್ಲವಾಗಿ ಜನನ ಭಾವವಿಲ್ಲ. ಜನನಭಾವ ನಷ್ಟವಾದುದೆ "ಭವಂನಾಸ್ತಿ." ಇಂತಿವೆಲ್ಲವು ಭಾವಾಶ್ರಯ (ಭವಾಶ್ರಯ) ಸ್ಥಾನ. ಆ ಭಾವ(ಭವ)ಕ್ಕೆ ಆಶ್ರಯಸ್ಥಾನ ವಾದುದೇ ಭಾವಾಶ್ರಯ (ಭವಾಶ್ರಯ) ಗೃಹ. ಆ ಗೃಹವನು ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿಪುಟಿ ಏಕಾರ್ಥನಾದ ಅಗ್ನಿಯಲ್ಲಿ ಭಸ್ಮವ ಮಾಡಿದನೆಂದು ಚೆನ್ನಬಸವೇಶ್ವರದೇವರು ನಿರೂಪಸಂ ಕೊಡುತ್ತಿಹರು.

ಶೀಲವಾರು, ವ್ರತವಾರು ೧ಆರಾರರಂತ್ಯವಿಡಿದು
ಮೇಲೆ ಹದಿನಾರ ಕಳೆಯ ಪ್ರಭೆಯು ಮುಸುಕಿದ
೨ನಾದವನ್ನು ನಾದಾದಿಬಿಂದು ಕಳೆಯನೊಂದುಮಾಡಿ
ನಿನಾದ ಭಾಷ್ಯವಿಡಿದುದ ಪ್ರಶಿಖಾಯೆಂದೆನೆ ೧೭

## ಭಾವಾರ್ಥ

ಆ ಭಾವವೆಂಬ ಗೃಹವನು ಭಸ್ಮಮಾಡಿದ ಶರಣನಿಗೆ, ಭ್ರಷ್ಟ ಬೀಜದ ನ್ಯಾಯದ ಹಾಗೆ ಮುಂದೆ ಜನನವಿಲ್ಲ. ಜನನವಿಲ್ಲವಾಗಿ ಫಲಪದ ಭೋಗವೆನಿತಿಲ್ಲದೆ ಇರುತ್ತಿಹನು. ದಗ್ಧ ಪಟ ನ್ಯಾಯದ ಹಾಗೆ, ಆ ಶರಣಂಗೆ ಉಪಾಧಿಯಿಲ್ಲದೆ ಇರುತ್ತಿಹ. ಶೀಲವ್ರತಂಗಳೆಂತೆಂದಡೆ–ಲೋಕವರ್ತನೆ ಲೋಕವ್ಯವಹಾರದಲ್ಲಿ ಅನುಕರಿಸಿ ನಡೆಯನಾಗಿ, ಶಿವಜ್ಞಾನ, ಶಿವಕ್ರಿಯಾ ಪ್ರಕಾಶವೆನಿಸುವ ಶೀಲವ್ರತಂಗಳು ಸಂಬಂಧಿಸಿಹವು ಅವಾವೆಂದಡೆ–ಅಕ್ರೋಧ, ಸತ್ಯವಚನ, ಕ್ಷಮೆ, ಭವಿ-ಭಕ್ತ ಭೇದ, ಅನುಗ್ರಹ ಸತ್ಪಾತ್ರ ದ್ರವ್ಯಾರ್ಪಣ, ಇವು ಆರು ಶೀಲಂಗಳು. ಗೌರವಬುದ್ಧಿ, ಲಿಂಗಲೀಯ, ಜಂಗಮಾನುಭಾವ, ಏಕಾದಶ ಪ್ರಸಾದ, ಪರಿಪೂರ್ಣ ಜ್ಞಾನ, ದಶವಿಧ ಪಾದೋದಕ ನಿರ್ಣಯ, ಭಕ್ತಿನಿರ್ವಾಹ, ಇವು ಆರು ವ್ರತಂಗಳು. ಇಂತೀ ಶೀಲವ್ರತಂಗಳ ಆದ್ಯಂತವಿಡಿದು, ಷಡ್ವಿಧ ಭಕ್ತಿಯ ಅನುಭಾವಾವಸ್ಥೆಯ, ಪರಮಾನಂದ, ಸ್ವಸ್ಥಾನ, ಸುಸ್ಥಿರ, ವಿವೇಕ ದೃಷ್ಟಿಯಿಂದಾರೈದು ನೋಡಲು, ಅಲ್ಲಿ ಜ್ಞಾನ ಪಾದೋದಕ ಪ್ರಸಾದವ ಕಂಡನು. ಅವಾವೆಂದಡೆ–ದ್ವಿಪತ್ರಿಕಾಗ್ರದಲ್ಲಿಯ ಚಿದ್ಬ್ರಹ್ಮಾಂಡದೊಳಗಣ ಚಿದಾಕಾಶ ಮಧ್ಯದಲ್ಲಿ ತೋರುವ, ಪರಿಪೂರ್ಣ ಪ್ರಕಾಶ ಸುಧಾಮಯ, ಅಮೃತಬಿಂದುವೆನಿಸಿ ಇರುತ್ತಿರ್ದ ಘನಲಿಂಗದ ಕಳೆಗಳೆನಿಸುವ ಪದ್ಮಿನಿ, ಚಂದ್ರಿಣಿ, ಕಾಮಿನಿ, ಲಕ್ಷ್ಮಿನಿ, ಪುಷ್ಪಿಣಿ, ಪ್ರಹಸ್ವಿನಿ, ಆಹಿ[ರ]ರಿಣಿ, ಕುಮುದಿನಿ, ಅಭ್ಯಾಸಿನಿ, ವ್ಯಾಪಿನಿ, ವೇದಿನಿ, ಮೋಹಿನಿ, ಪ್ರಮೋದಿನಿ, ವಿಕಾಸಿನಿ, ವರ್ತಿನಿ, (ವರ್ಧಿನಿ), ಪರಿಪೂರ್ಣಿನಿಯೆಂಬ ಷೋಡಶ ಕಲಾಪುಂಜವು ಮುಸುಕಿಕೊಂಡು ಇರುತ್ತಿರುವ, ಅಮೃತಲಿಂಗದ ಬಿಂದು

---

೧. ಅಂತುವಿಡಿದು [ಬ] ೨. ಲೀಲೆಯಿಂದ [ಬ]

ಸೋಂಕಲಾಗಿ, ಅಕಾರ, ಉಕಾರ, ಮಕಾರವೆಂಬ ನಾದ ಬಿಂದು ಕಳೆಗಳು, ಓಂಕಾರವೆಂಬ ಏಕಾಕ್ಷರದಲ್ಲಿಯೇ ಏಕಾರ್ಥವಾಗಿ ಇರುವದರಿಂದ ಆ ಪ್ರಶಿಖಾಯೆಂಬ ಅನುಭಾವ ಭಾಷ್ಯಾರ್ಥದ ಚಿದಂಗ,ಚಿತ್ಪ್ರಾಣ ಚಿತ್ಶಿಖೆ, ಚಿದಾಕಾಶವೆನಿಸುವ ಈ ಶರಣನು, ಚಿದ್ಘನಲಿಂಗಕ್ಕೆ ಚಿದ್ಭಾಂಡ ಸ್ಥಾನವಾಗಿರ್ದನೆಂದು ಚೆನ್ನಬಸವೇಶ್ವರದೇವರು ನಿರೂಪವಂ ಕೊಡುತ್ತಿಹರು.

ಕಳೆಗೂಡಿದಿಂದುವಿನಂತೆ ಇರುಳುಹಗಲುತಾನರಿಯ
ಉಲುಹು ಅಡಗಿ ಶಬ್ದಮುಗ್ಧವಾಗಿ ನಿಂದನು
೧ಭವವೆಂಬ ಮನೆಯ ಸುಟ್ಟು ಬಟ್ಟಬಯಲಲಿರ್ದನಾಗಿ
ನೆನಹಿಲ್ಲ ನೋಡ ತನಗನ್ಯಸಂಗದ ೧೮

## ಭಾವಾರ್ಥ

ಆ ಚಿದ್ಘನಲಿಂಗಕ್ಕೆ ಚಿದ್ಭಾಂಡಸ್ಥಾನವೆನಿಸಿದ ಶರಣನು, ನಿಕ್ಷೇಪವಾಗಿ ಅಳವಡಿಸಿಕೊಂಡ ಚಿದ್ರೂಪು ಪದಾರ್ಥ ತಾನೆಯಾದ ನಿಲವು ಎಂತೆಂದಡೆ– ಆ ಚಿತ್ಸುಖ ಸ್ವರೂಪವಾದ, ಚಿನ್ಮಯ ಕಳೆಗಳು ಚಿದಾಕಾಶ ಮಧ್ಯದಲ್ಲಿ ತೋರುವ ಚಿತ್ಕೌಮುದೀ ಕಿರಣಂಗಳನುಳ್ಳ, ಪರಿಪೂರ್ಣ ಅಮೃತಬಿಂದುವೆನಿಸಿ ಇರುತ್ತಿರ್ದ ಪ್ರಸನ್ನಲಿಂಗದ ಪ್ರಸನ್ನ ಪ್ರಸಾದವೇ ರೂಪುಗೊಂಡು, ಪರಮಾನಂದಾಂಬುಧಿಯೆನಿಸುವ ಶರಣನ ಸುಖಸ್ವರೂಪವೆಂಬ ಸೀಕರಂಗಳು ಉದಯಿಸುತ್ತಿರಲು, ಆ ಶರಣಂಗೆ, ಅವಿದ್ಯಾ ಸಂಬಂಧಿಗಳಾದ, ಜ್ಞಾನಾಜ್ಞಾನಂಗಳೆಂಬ ವಿಕಲ್ಪ ಭ್ರಾಂತಿಯಿಲ್ಲದೆ, ಆಕಾಶ ವಿಷಯವಾಗಿರುತ್ತಿರುವ, ಶಬ್ದ ಸಂಬಂಧವಾಗಿರುವ ವಾಗ್ಜಾಲಂಗಳಿಗೆ ಹಿಮ್ಮೆಟ್ಟಿ, ಆ ಚಿದಾಕಾಶ ವಿಷಯವಾದ ಶಬ್ದಸ್ವರೂಪಿನ ಮಹಾನುಭಾವವೆನಿಸುವ ಮಹಾನಂದ ಪ್ರಕಾಶವು, ತಾನೆ ''ನಿಶ್ಶಬ್ದಂ ಬ್ರಹ್ಮೋಚ್ಯತೆ" ಎಂಬ ಸ್ಥಾನದಲ್ಲಿ ನಿಂದು, ಮುಂದೆ ಹೇಳಲಿಲ್ಲ ಕೇಳಲಿಲ್ಲವಾಗಿ, ಶಬ್ದಮುಗ್ಧವಾಗಿ ಇರುವನು. ಮತ್ತು ಯೋನಿ ಚಕ್ರದಲ್ಲಿ ತಿರುಗುವ, ಜನನಾಶ್ರಯುವಾಗಿರುವ, ಮಾಯಾಧೀನದ ದೃಶ್ಯಜಡವಾಗಿರುವ, ಪಂಚ

೧. ಬಲುಜನ್ಮ [ಬ]

ಭೌತಿಕ ಗ್ರಾಮ ಮಧ್ಯದಲ್ಲಿ ಇರುತ್ತಿರುವ ತನುತ್ರಯ, ಜೀವತ್ರಯ, ಅವಸ್ಥಾತ್ರಯವೆಂಬ ಭ್ರಾಂತಿಯ ವ್ಯಾಪಕತ್ವದ ಮಿಥ್ಯಾಗೃಹವನ್ನು, ಆ ಪ್ರಸನ್ನ ಪರಮಲಿಂಗದ ಪರಮಾವಸ್ಥೆಯೆನಿಸುವ, ಪರಾಕಾಷ್ಠೆಯೆಂಬ ಕಾಷ್ಠಮಧ್ಯದಲ್ಲಿ ಇರುತ್ತಿರುವ ಚಿತ್ಶಿಖಿಯೆಂಬ ಅಗ್ನಿಯಿಂದ ಸುಟ್ಟು, ಕಡೆ ನಡುವಿಲ್ಲದ ಪರಮಾಕಾಶಸ್ಥಾನದ ಲಿಂಗವಂಗವಾಗಿ, ಆ ಪರಮಲಿಂಗಕ್ಕೆ ಆ ಶರಣನೇ ಅಂಗವಾಗಿ, ತನ್ನಿಂದನ್ಯವಾಗಿ ತೋರುವ ವಾಸನಾ ಸಂಗ ಸುಖದ ನೆನಹಿಲ್ಲದೆ, ತೂರ್ಯಾತೀತನಾಗಿ ಇರುತ್ತಿರ್ದನೆಂದು ಚೆನ್ನಬಸವೇಶ್ವರ ದೇವರು ನಿರೂಪವುಂ ಕೊಡುತ್ತಿಹರು

ಆರು ದರುಶನಂಗಳಿಗೆ ಅಂತ್ಯವಿಲ್ಲ ತನುಗುಣ
ಆರು ವಿಧದ ಶೈವಕ್ಕೆ ತೂರ್ಯಾತೀತವು
ಆರು ಈರಾರರಿಂದ ಮೀರಿ ತೋರಿದಾ ಬಗೆ
[1]ಆರಾರರನುಭಾವನಿಂದು ನಿಬ್ಬೆರಗಾದುದು ೧೯

## ಭಾವಾರ್ಥ

ಆ ಪರಮಲಿಂಗಕ್ಕೆ ತಾನೆ ಭೋಗಿಸಲು ಷಡ್ದ್ರವ್ಯಾಂಗವಾಗಿ, ಆ ಲಿಂಗವು ತನಗೆ ಭೋಗಿಸಲು, ಷಡ್ದ್ರವ್ಯಾಂಗವಾಗಿರ್ದ ಶರಣಂಗೆ ಪ್ರಕೃತಿಫಲಭೋಗವಿಲ್ಲವದೆಂತೆಂದಡೆ– ಇತರ ಫಲಾಕಾಂಕ್ಷೆಯನುಳ್ಳ ಫಲಭೋಗವಾಸನೆಯಿಂದ ಜನ್ಮಪ್ರಾಪ್ತಿಯನೈದುವನು. ಆ ಜನನಂಗಳಿಂದ ಸುಖದುಃಖಕ್ಕಾಶ್ರಯವಹನು. ಆ ಸುಖದುಃಖಕ್ಕಾಶ್ರಯವಹತನದಿಂದ, ಪುಣ್ಯಾಪಾಪ ವಶಯುಕ್ತನಹನು. ಆ ಪುಣ್ಯಾಪಾಪ ವಶಯುಕ್ತನಹಗುಣದಿಂದ, ಸ್ವರ್ಗನರಕಿಯೆನಿಸುವ ಜೀವಸ್ವರೂಪಂಗೆ, ಐಕ್ಯಕ್ಕೆ ಕಡೆಯಿಲ್ಲದೆ, ಷಡುದರುಶನಂಗಳೆನಿಸುವ, ಶೈವ, ಶಾಕ್ತ, ವೈಷ್ಣವ, ಸೌರ [ಸೂರ್ಯ ಸಂಬಂಧ] ಗಾಣಪತ್ಯ, ಮಾಯಾವಾದಿಯೆಂಬ ಆರು ದರುಶನಂಗಳ ಬಗೆಯ ಭ್ರಾಂತಿಯಲ್ಲಿ ಭ್ರಮಿಸುವನು ಶೈವ, ಪಾಶುಪತ, ಸೋಮ, ದಕ್ಷಿಣ, ಕಾಳಾಮುಖ ಯಾಮಳ (ಲಾಕುಳ)ವೆಂಬ, ಮತ್ತಂ ಆದಿಶೈವ, ಮಹಾಶೈವ, ಅನುಶೈವ, ಅಂತರಶೈವ, ಅಂತ್ಯಶೈವ, ಪ್ರವರಶೈವವೆಂಬ

೧. ಆರಾರನುಭಾವ [ಬ]

ಆರು ವಿಧ ಶೈವಂಗಳಿಗೆ ತೂರ್ಯಾತೀತವಾಗಿ, (ಅತಿಶಯವಾಗಿ ಮೀರಿ ದ್ದಾಗಿ) ಶರಣನ ನಿಲುಕಡೆ ಇರುವದು. ಆ ಶರಣನ ಸರ್ವಾಂಗಲಿಂಗ ಗ್ರಾಹಕತ್ವವು, ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶು ದ್ಧಿ, ಆಜ್ಞೇಯ ಎಂಬ ಷಡಾಧಾರ ಚಕ್ರಂಗಳಿಗೆ ಅತೀತವಾಗಿ, ಆ ಶರ ಣನ ಲಿಂಗವೇಧೆಯು ಇಹುದು. ಶ್ರೋತ್ರಾದಿ ಜ್ಞಾನೇಂದ್ರಿಯವೈದು, ವಾಗಾದಿ ಕರ್ಮೇಂದ್ರಿಯವೈದು, ಮನಃಪವನವೆರಡು ಅಂತು ದ್ವಾದ ಶೇಂದ್ರಿಯ ಪ್ರವರ್ತನೆಗಳಿಗೆ ಮೀರಿ ತೋರುವ ಬಗೆಯು ಶರಣನ ವರ್ತನೆ. ಆಚಾರಾದಿ ಮಹಾಲಿಂಗಾಂತವಹ, ಷಡ್ವಿಧ ಲಿಂಗಾನುಭಾವ ಸಮರಸಕ್ಕೆ, ತೆರಹಿಲ್ಲದೆ, ಶಬ್ದಮುಗ್ಧವಾಗಿನಿಂದ ನಿಬ್ಬೆರಗು, ಆ ಶರಣನ ನಿಲುಕಡೆ ಎಂದು ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

ನಿತ್ಯ ವಿಧದ ಕರ್ಮವೆಂಬ ಸತ್ಯ ಸಾಧ್ಯ ೧ಸದುಭಾವ
ಚಿತ್ತಧ್ಯಾನಧ್ಯೇಯವೊಂದಾದ ಪ್ರಭೆಯದು
ಮುಕ್ತಿಮೂಲ ಪ್ರಣವದಾ ಪ್ರಭೆಗೆ ಆದಿ ಅಂತ್ಯವಿಲ್ಲ
೨ಸತ್‌ಚಿತ್ ನಿತ್ಯ ಪ್ರಭೆಯ ಮುಸುಕಿನಿಂದುದು ೨೦

## ಭಾವಾರ್ಥ

ಆ ಘನಲಿಂಗದಲ್ಲಿ ಶಬ್ದಮುಗ್ಧವಾಗಿ ನಿಂದ ಶರಣಂಗೆ, ಚಿತ್ರಪಟದ ರೂಪುಗಳ ಅವಯವದ ಶೃಂಗಾರದಂತೆ ತೋರುವ ನಿತ್ಯತೃಪ್ತವಹ ಕ್ರಿಯೆ ಗಳೆಂತೆಂದಡೆ– ''ಸತ್ಯಂ ಜ್ಞಾನಮನಂತಂಬ್ರಹ್ಮ''ವೆಂಬ ಪರಮಲಿಂಗದ ಸಂಜ್ಞೆಯ ತತ್ತ್ವಭಾವವು, ಚಿತ್ಕಳಿ ಸ್ವರೂಪಧ್ಯಾನ ಧ್ಯೇಯವೊಂದಾದ ಪ್ರಭಾಮಂಡಲ ಮಧ್ಯದಲ್ಲಿ, ತೋರುವ ಮುಕ್ತಿದ್ವಾರದ ಮೂಲಸೂತ್ರ ವೆನಿಸುವ, ಪಂಚಪ್ರಸಾದಾತ್ಮಕವಹ, ಆದಿ ಪ್ರಣವ ಪ್ರಭೆಗೆ ಎಡೆಕಡೆ ಯಿಲ್ಲ. ಆ ಪ್ರಭೆಯೇ ಸತ್-ಚಿತ್-ಆನಂದ ನಿತ್ಯಪರಿಪೂರ್ಣವೆಂಬ ಐದಂ ಗವನಂಗೀಕರಿಸಿಕೊಂಡು ಇರುತ್ತಿಹುದು. ಅದು ಘನಲಿಂಗೋದ್ಧಾ[ದ್ಧ]ರ. ಆ ಲಿಂಗದಲ್ಲಿ, ಸಮರಸಭಾವವೇ ಆ ಶರಣಂಗೆ ನಿತ್ಯಪೂಜಾ ನಿಯಮ ವೆಂದು ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

---

೧. ಸಾಧುಭಾವ [ಬ] ೨. ಸಚ್ಚಿದಾನಂದ [ಬ]

ಸತ್ತು ಸದಾಸಂಭವಿಸಿ, ಚಿತ್ತ ಭಾವದಕ್ಷರವು
ಮತ್ತೆ ಹ್ರಾಂ ಹ್ರೀಂ ಹ್ರೂಂ ಹ್ರೈಂಯೆಂದೆನೆ
ವ್ಯಕ್ತ ಮೂಲ ಲಿಂಗ ನಾಭಿ ಹೃದಯ ಕಂಠ ಭ್ರೂಮಧ್ಯವಾರು
ಆ ಪ್ರಶಿಖಾ ಪ್ರಭೆ ಓಂಯೆಂದುದು

## ಭಾವಾರ್ಥ

ಆ ಘನಲಿಂಗ ಸಮರಸ ಭಾವವೇ ಕ್ಷೇತ್ರ. ಆ ಕ್ಷೇತ್ರದಲ್ಲಿ ಕ್ಷೇತ್ರಜ್ಞನಾಗುತ್ತಿಹ ಶರಣಂಗೆ ಸ್ಥಾನನಿಕ್ಷೇಪಿತ ಗೊಪ್ಯಮಂತ್ರ ಲಿಂಗಸಂಬಂಧವೆಂತೆಂದಡೆ– ಆ ಶರಣನು ಅನುಭಾವ ದ್ವಾರದಲ್ಲಿ ನಿಂದು ಭಾವಿಸುವ ಭಾವಬಲಿದು, ಆವಾಗಲೂ ಉಂಟಾದ ಭಾವದೃಷ್ಟಿಗೆ ನಷ್ಟವಿಲ್ಲದೆ ಧ್ಯಾನ ಧ್ಯೇಯವೊಂದಾಗಿ ಪರಮಾನಂದವೆಂಬ ಅಂಗಂಗೊಂಡು ಜ್ಞಾನಪ್ರಕಾಶವನುಳ್ಳ ಆ ಮಹಾಜ್ಞಾನಕ್ಕೆ ಬೀಜವಹ ಅಷ್ಟವರ್ಗಾಂತ್ಯದ 'ಕ್ಷಕಾರ' ಬೀಜ ವಿವೇಕ ಲಿಂಗವು. ಮುಂದೆ ಬ್ರಹ್ಮಸ್ಥಾನ ಮಧ್ಯವಳಯದ ಸಹಸ್ರದಳ ಕಮಲಕರ್ಣಿಕಾ ವರಣವೆನಿಸುವ ಪಂಚಪತ್ರದಲ್ಲಿರುತ್ತಿಹ ಓಂ ಹ್ರಾಂ ಹ್ರೀಂ, ಹ್ರೂಂ ಹ್ರೈಂ ಎಂಬ ಪಂಚಪ್ರಸಾದ ಲಿಂಗವು. ಆ ಬ್ರಹ್ಮಸ್ಥಾನದಿಂ ಕೆಳಗೆ

## ಷಟ್‌ಚಕ್ರ ವಿವರವು *

| ಸ್ಥಾನ | ಚಕ್ರ | ದಳ | ವರ್ಣ | ಲಿಂಗ |
|---|---|---|---|---|
| ಭ್ರೂಮಧ್ಯ | ಆಜ್ಞೇಯ | ೨ | ಹಂ-ಕ್ಷಂ | ಆತ್ಮವಿದ್ಯಾಲಿಂಗ |
| ಕಂಠ | ವಿಶುದ್ಧಿ | ೧೬ | ಅಕಾರದಿಂದ ವಿಸರ್ಗದವರೆಗೆ | ಷೋಡಶಕಳಾಲಿಂಗ |
| ಹೃದಯ | ಅನಾಹತ | ೧೨ | ಕಕಾರದಿಂದ ಠಕಾರದವರೆಗೆ | ದ್ವಾದಶವಿಕೃತಿಲಿಂಗ |
| ನಾಭಿ | ಮಣಿಪೂರಕ | ೧೦ | ಡಕಾರದಿಂದ ಫಕಾರದವರೆಗೆ | ದಶವಿಧಕ್ಷೇತ್ರಲಿಂಗ |

* ಷಟ್‌ಚಕ್ರಗಳ ವಿಸ್ತೃತ ವಿವರ ಈ ಗ್ರಂಥದ ೩ನೆಯ ಪುಟದಲ್ಲಿದೆ.

| | | | | |
|---|---|---|---|---|
| ಲಿಂಗ | ಸ್ವಾಧಿಷ್ಠಾನ | ೬ | ಬಕಾರದಿಂದ ಲಕಾರದವರೆಗೆ | ಷಡ್ವಿಧಧಾತುಲಿಂಗ |
| ಗುದ | ಆಧಾರಚಕ್ರ | ೪ | ವಶಷಸ | ಚತುರ್ವಿಧಬಿಂದು ಲಿಂಗ |

ಇವೆಲ್ಲವಕ್ಕೂ ಆಶ್ರಯವೆನಿಸುವ ಆ ಪ್ರಶಿಖಾ ಎಂಬ ಅನುಭಾವ ಭಾಷ್ಯಾರ್ಥದ ಸರ್ವಜ್ಞತ್ವ, ನಿತ್ಯತೃಪ್ತತ್ವ, ಅನಾದಿ ಬೋಧತ್ವ, ಸ್ವತಂತ್ರತ್ವ, ನಿತ್ಯತ್ವ, ಅಲುಪ್ತಶಕ್ತಿತ್ವವೆಂಬ ಚಿದಂಗವಾರು. ಆ ಅಂಗದಲ್ಲಿ ಅಂಗೀಕರಿಸಿಕೊಂಡು ಇರುತ್ತಿಹ ಶಿವ, ಸದಾಶಿವ, ಈಶ, ಬ್ರಹ್ಮೇಶ, ಈಶ್ವರ, ಈಶಾನ್ಯರೆಂಬ ಷಡುತತ್ತ್ವಂಗಳಿಗೆ ಆಶ್ರಯವಾಗಿ ಇರುತ್ತಿಹ ಚಿಚ್ಛಕ್ತಿ, ಪರ, ಆದಿ, ಇಚ್ಛೆ, ಜ್ಞಾನ, ಕ್ರಿಯೆಯೆಂಬ ಚಿತ್ಪ್ರಾಣಶಕ್ತಿಯರು ಆರು. ಇನ್ನು ಪರಿಪೂರ್ಣ ಪ್ರಕಾಶವನುಳ್ಳ ನಿರುಪಾಧಿಕ ಜ್ಯೋತಿರ್ಮಯವಹ, ಚಿದಗ್ನಿಯು. ಇವೆಲ್ಲಕ್ಕೆಯೂ ಅವಕಾಶಸ್ಥಾನವಾಗಿ ಇರುತ್ತಿಹ ಚಿದಾಕಾಶವು, ಇವೆಲ್ಲರ ಲಯಸ್ಥಾನವಾಗಿರುತ್ತಿಹುದು ಮಹಾಘನಲಿಂಗವು. ಇಂತಹ ಘನಲಿಂಗವೇದ್ಯನಾದ ಶರಣನು, ಆ ಪ್ರಣವದ ಪ್ರಭಾಮಂಡಲದಲ್ಲಿರ್ದು, ಆ ಪ್ರಣವೋಚ್ಚಾರದ ಲಯವು ಶಬ್ದವಿಲ್ಲದುದಾಗಿ "ನಿಶ್ಯಬ್ದಂ ಬ್ರಹ್ಮೋಚ್ಯತೆ" ಎಂದೆನಿಸುತ್ತಿರ್ದುದೆಂದು ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

ಉನ್ಮನಿಯಸ್ಥಾನದಲಿ ಗಂಧವಾರಣವು ನೆನ
ಹಿನಕ್ಷರವ ನುಂಗಿ ಉಗುಳದಿರ್ದುದು
ಅದ ನುಂಗಿದಾ ಬ್ರಹ್ಮನೆನಹು ನಿರ್ವಾಣಲಿಂಗ
ತನುಗುಣಂಗಳಡಗಿದಾತ ಭಕ್ತನೆಂಬೆನು ೨೨

## ಭಾವಾರ್ಥ

ಆ ಪ್ರಣವಾಕ್ಷರ ಸ್ಥಾನದಲ್ಲಿ ಉದಯಿಸುತ್ತಿಹ ಚರಾಚರ ಜನನ ಸ್ಥಿತಿ ಲಯ ಸ್ಥಾನವೆಂತೆಂದಡೆ– ಆ ಪ್ರಣವಾಕ್ಷರದ ಲಯಸ್ಥಾನವಾಗುತ್ತಿಹ, ಉನ್ಮನಿಯ ಸ್ಥಾನವೆನಿಸುವ ಪಶ್ಚಿಮದ್ವಾರದ ಶೂನ್ಯಚಕ್ರವು ಭಾವ, ಜ್ಞಾನ, ಮನ, ಅಹಂಕಾರ, ಬುದ್ಧಿ, ಚಿತ್ತವೆನಿಸುವ ಷಡಧ್ಯಾ

ಯಂಗಳ ಜನನ ಸ್ಥಿತಿ ಲಯ ಸ್ಥಾನವಾಗಿಹುದು. ಅಲ್ಲಿ ಉದಯಿಸುತ್ತಿಹ ವಿವೇಕ ವೃಕ್ಷ ಮೂಲ ಬೀಜಾಂಕುರವನು, ಸಂಸ್ಥಿತೆ, ತೃಣೀಕೃತೆ, ವರ್ತಿನಿ, ಕ್ರೋಧಿನಿ, ಮೋಹಿನಿ, ಅತಿಚಾರಿಣಿ, ಗಂಧಚಾರಿಣಿ, ವಾಸಿನಿಯೆಂಬ ಎಂಟು ವಿಧದ ಮದವನುಳ್ಳ ವೈಕಾರಿಕ ಗಜವು ಮತ್ತು ಸ್ಫಟಿಕದ ಸಾನಿಧ್ಯದಲ್ಲಿರುತ್ತಿಹ ಜಪಾಕುಸುಮದ ಹಾಗೆ,ಅನಾದಿ ಮಾಯಾ ವಾಹನವೆನಿಸುವ ಮೋಹಿನೀ ಗಜವು, ಆ ವಿವೇಕ ವೃಕ್ಷ ಮೂಲ ಬೀಜಾಂಕುರವನು ತಲೆದೋರಲೀಯದೆ, ಅವಗ್ರಹಿಸಿ, (ಹಿಡಿದು) ತನ್ನ ಮತ್ತವಿಡಂಬದಿಂ ಮೈಮರೆದಿರಲಾಗಿ, ಆ ಸದಮದ ಗಜವೆಂಬ ತಮಂಧವನು, ಚಿದಾಕಾಶದಲ್ಲಿರುತ್ತಿಹ, ಸಚ್ಚಿದಾನಂದ ನಿತ್ಯ ಪರಿಪೂರ್ಣವೆಂಬ ಕಿರಣಾವರಣವನುಳ್ಳ, ಪರಬ್ರಹ್ಮಾತ್ಮಕವಹ ಕರಲಿಂಗದ ಪರಮಲಿಂಗ ಪ್ರಕಾಶವು, ಬೆಳಗುತ್ತಿರಲು ಆ ಪರಮಲಿಂಗದ ಪ್ರಭೆಯಲ್ಲಿ, ತನುತ್ರಯ ಸಂಬಂಧವಹ ಮಾಯಾವಿಲಾಸವೆನಿಸುವ ಅಷ್ಟಮದಂಗಳಡಗಿ, ಆ ಘನಲಿಂಗದಲ್ಲಿ ಭಾವ, ಜ್ಞಾನ, ಮನ, ಅಹಂಕೃತಿ, ಬುದ್ಧಿ, ಚಿತ್ತ, ಮನ, ನಿರೀಕ್ಷಣ, ಈಳನ, ಯಜನ, ಆನಂದ ಸಮರಸದಲ್ಲಿ ನಿರ್ವಹವಾದಾತನೆ ಷಡ್ವಿಧಾಂಗವನುಳ್ಳ ಭಕ್ತನೆಂದು ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

> ಅಂಗಲಿಂಗವಾದುದೊಂದು ಪ್ರಭೆಯನು. ಹೇಳುವೆ
> ಲಿಂಗಕ್ಕೆ ಜಂಗಮವೆ ಕಳೆಯೆಂದೆನೆ
> ಜಂಗಮ ಪ್ರಸಾದವನ್ನು ಲಿಂಗಕ್ಕಿತ್ತುಕೊಂಡಡಾತ
> ಲಿಂಗಭಕ್ತ ಭಕ್ತಲಿಂಗವೆಂಬ ಭೇದವು ೨೩

## ಭಾವಾರ್ಥ

ಆ ಸದ್ಭಕ್ತನು ತನ್ನ ಹಿಂದು ಮುಂದು ಆರೈದು ನೋಡಲಾಗಿ, ಮಹಾ ಘನಚೈತನ್ಯ ಪರಮಜಂಗಮವ ಕಂಡು, ಆರಾಧಿಸುತ್ತಲಿರ್ದನದೆಂತೆಂದಡೆ– ಆ ಷಡ್ವಿಧ ಭಕ್ತಿಯನುಳ್ಳ ಸದ್ಭಕ್ತನ ಭಕ್ತ್ಯಾದ್ಯೈಕ್ಯಾಂತವಹ ಅಂಗ ಷಡ್ವಿಧ; ಆಚಾರಾದಿ ಮಹಾಲಿಂಗಾಂತವಹ ಲಿಂಗಷಡ್ವಿಧ. ಇಂತೀ ಅಂಗಲಿಂಗಕ್ಕೆ ಪ್ರಾಣಪ್ರತಿಷ್ಠೆಯಹ ಪ್ರಸನ್ನ ಕಳೆ ಯಾವುದೆಂದಡೆ– ಈ

ಅಂಗಲಿಂಗದ ಮೂಲಾಂಕುರವಹ ಘನಚೈತನ್ಯವೆಂಬ ಪರಮ ಚರಲಿಂಗದ ಅನುಭಾವ ಪ್ರಸನ್ನತ್ವವೆಂಬ ಮಹಾ ಪ್ರಸಾದವನು ಷಡ್ವಿಧ ಅಂಗಾಂಗ ಗಳಲ್ಲಿ, ಅಂಗೀಕರಿಸಿದ ಷಡ್ವಿಧ ಲಿಂಗಕ್ಕೆ ಪ್ರಾಣಪ್ರತಿಷ್ಠೆಯಹ ಇಷ್ಟಲಿಂಗ ಕ್ಕೆ ಕಳಾ ಸಾನ್ನಿಧ್ಯವ ಮಾಡಬಲ್ಲಡೆ, ಆತನೆ ಷಡ್ವಿಧಲಿಂಗಕ್ಕಾಶ್ರಯವಹ ಘನಚೈತನ್ಯ ಪರಮ ಚರಲಿಂಗ ಭಕ್ತನೆಂದು ಚೆನ್ನಬಸವೇಶ್ವರ ದೇವರು ನಿರೂಪಮಂ ಕೊಡುತ್ತಿಹರು.

ಅರ್ಪಿಸಿದ ಪದಾರ್ಥವನು ಆರ್ಪಿಸಲರಿವಡೆ
ಅರ್ಪಣದ ತೃಪ್ತಿಭೇದ ೧ಪರಿಯಪರಿದುದು
ಅರ್ಪಿಸಿದ ಚರಶೇಷ ಇಷ್ಟಲಿಂಗ ಜೀವಕಳೆಗೆ
ತಪ್ಪದರ್ಪಿಸುವಾತ ನೊಪ್ಪುವಸನೆ ೨೪

## ಭಾವಾರ್ಥ

ಆ ಪರಮ ಚರಲಿಂಗ ಭಕ್ತನು, ಆ ಚರಲಿಂಗದ ಪ್ರಸಾದ ಕಳೆ ಯನೆ, ಇಷ್ಟಲಿಂಗದ ಜೀವಕಳೆಯನೆ, ಪದಾರ್ಥವ ಮಾಡಿ, ಚರಲಿಂಗ ಕ್ಕರ್ಪಿಸುತ್ತಿರ್ದನದೆಂತೆಂದಡೆ– ಆ ಘನಚೈತನ್ಯ ಪರಮ ಚರಲಿಂಗ ಭಕ್ತ ನು, ಅವಧಾನ ದ್ವಾರದಲ್ಲಿ ನಿಂದು, ಸಮಾಧಾನ ಮುಖದಲ್ಲಿ ಅರ್ಪಿಸ ಬಲ್ಲನಾಗಿ, ತಾನೇ ಪ್ರಸಾದ ಪೂಣತನಾಗಿ, ಆ ಷಡ್ವಿಧಾಂಗದಲ್ಲಿ ಸಂಬಂ ಧವಾದ ಷಡ್ವಿಧಲಿಂಗಕ್ಕೆ ಸಮರ್ಪಿಸಿದ ರೂಪು ನಿರೂಪೆಂಬ ದೃಶ್ಯಾದೃಶ್ಯ ವಹ, ರೂಪು ರುಚಿ ದ್ರವ್ಯಂಗಳಿಗೆ ಘನಚೈತನ್ಯ ತಾನೆಯಾದ ಪರಮಚರ ಲಿಂಗದ ಅನುಭಾವ ಪ್ರಸನ್ನತ್ವವೆನಿಸುವ ಮಹಾಪ್ರಸಾದದಲ್ಲಿಯೇ ಷಡ್ವಿ ಧಾಂಗ ಷಡ್ವಿಧ ಲಿಂಗವನು ಏಕಾಕಾರವ ಮಾಡಿ, ಆ ಮಹಾ ಪ್ರಸಾದ ಶೇಷವನು ಪರಮ ಚರಲಿಂಗಕ್ಕೆ ಅರ್ಪಿಸಿ, ಆ ಚರಲಿಂಗಾರ್ಪಿತವಾದ ಮಹಾ ಪ್ರಸಾದಶೇಷವನು, ಷಡ್ವಿಧಲಿಂಗಕ್ಕೆ ಮೂಲಪೀಠಿಕಾಸ್ಥಾನವಹ ಆಚಾರದಲಳವಟ್ಟ ಇಷ್ಟಲಿಂಗಕ್ಕೆ, ಜೀವಕಳೆಯಹ ಅಂಗ, ಹಸ್ತ, ಲಿಂಗ ಮುಖ ಇವನರಿದು, ಅರ್ಪಿಸಬಲ್ಲಡೆ, ಆ ಅರ್ಪಣದ ಶೇಷಪ್ರಸಾದವನು ಆ ಷಡ್ವಿಧಲಿಂಗಕ್ಕೆ ಮೂಲವೆಂದೆನಿಸುವ ಚರಲಿಂಗಕ್ಕೆ ಪದಾರ್ಥವ

೧. ಪರಿಹರಿಸುವದು [ಬ]

ಮಾಡಿ, ಅರ್ಪಿಸಿ, ಆ ಪ್ರಸಾದವ ಭೋಗಿಸಬಲ್ಲಡೆ ಆತನೇ ಮಹಾ ಪ್ರಸಾದಿಯೆಂದು ಚೆನ್ನಬಸವೇಶ್ವರ ದೇವರು ನಿರೂಪವಮಂ ಕೊಡುತ್ತಿಹರು.

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ<br>
ಶರಣ ಐಕ್ಯನೆಂಬಾರು ವಿಧದ ತಂತ್ರಕ್ಕೆ<br>
ಭಕ್ತಿಸ್ಥಲಾಂಗದಲ್ಲಿ ಲಿಂಗಮುಖವಾದ ಬಳಿಕ<br>
ಚಿತ್ ಪ್ರಭೆಯನೈದಿದಾತ ಭಕ್ತನೆಂಬೆನು ೨೫

## ಭಾವಾರ್ಥ

ಆ ಮಹಾ ಪ್ರಸಾದಗ್ರಾಹಕ ಶರಣನು,ಜ್ಞಾನಪ್ರಕಾಶದಲ್ಲಿ ವಿಶ್ರಾಂತಿಯನಯ್ದಿದಡೆ, ಆ ಮಹಿಮನೆ ಷಡ್ವಿಧಾಂಗವನುಳ್ಳ ಭಕ್ತನದೆಂತೆಂದಡೆ —ಭಕ್ತಾದ್ಯೈಕ್ಯಾಂತವಹ ಷಡ್ವಿಧಾಂಗಂಗಳಿಗೆ ಭಕ್ತನಂಗವೆ ಆದಿಯಾಗಿ, ಆ ಭಕ್ತನಂಗದಲ್ಲಿಯೇ ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯನೆಂಬ ಅಂಗವೈದು ಅಂಗಂಗೊಂಡಿಹವಾಗಿ, ಆ ಅಂಗದಲ್ಲಿಯೇ ಗುರುಲಿಂಗ, ಶಿವಲಿಂಗ, ಚರಲಿಂಗ, ಪ್ರಸಾದಲಿಂಗ, ಮಹಾಲಿಂಗವೆಂಬ ಪಂಚವಿಧ ಲಿಂಗವು ಆಚಾರಲಿಂಗದಲ್ಲಿಯೇ ಅಳವಟ್ಟು ಇಹವಾಗಿ, ಆ ಆಚಾರ ಲಿಂಗವು ಅಂಗವೈದನಿಂಬ ಗೊಂಡು, ಆ ಭಕ್ತನಂಗದಲ್ಲಿಯೆ ಸ್ವಾಯತ್ತವಾಗಿ, ಆ ಲಿಂಗಮುಖದಲ್ಲಿ ಕ್ರಿಯಾವಿಶ್ರಾಂತಿಯನೈದಲಾತನೆ ಶ್ರದ್ಧೆ, ನೈಷ್ಠೆ, ಸಾವಧಾನ, ಅನುಭಾವ, ಆನಂದ, ಸಮರಸವೆಂಬ ಷಡ್ವಿಧ ಅಂಗವನುಳ್ಳ ಭಕ್ತನೆಂದು ಚೆನ್ನಬಸವೇಶ್ವರದೇವರು ನಿರೂಪವಮಂ ಕೊಡುತ್ತಿಹರು.

ಭಾವಿಸುವ ಶುದ್ಧ ಸಿದ್ಧ ಪ್ರಸಿದ್ಧವೆಂಬುದಕ್ಕೆ<br>
ಭಾವವಿಲ್ಲ ಜ್ಞಾನವಿಲ್ಲ ಒಡಲು ಇಲ್ಲವು<br>
[1]ಆವಾವ ಕಲ್ಪನೆಯು ಲಿಂಗಮುಖವಾದ ಬಳಿಕ<br>
ಭಾವಾ ಭಾವವೆಂಬುದಿಲ್ಲ ತನಗೆಂದೆನೆ ೨೬

೧. ಆವಕಲ್ಪನೆ [ಬ]

## ಭಾವಾರ್ಥ

ಆ ಷಡ್ವಿಧ ಭಕ್ತಿಯನುಳ್ಳ ಘನಲಿಂಗ ವೇದ್ಯ ಶರಣಂಗೆ ಭಾವಾ ಭಾವವೆಂಬ ಉಭಯ ಕಲ್ಪನೆ ನಷ್ಟವಾಯಿತ್ತು. ಎಂತೆಂದಡೆ– ಆ ಷಟ್ ಸ್ಥಲವೇದ್ಯ ಶರಣನು, ಶ್ರದ್ಧಾದಿ ಷಡ್ವಿಧ ಭಕ್ತಿಯಿಂದ, ಲಿಂಗವ ಧರಿಸುವ ಷಟ್ಪ್ರಕಾರ ಸಾಧನಂಗಳಿಗೆ ಸುಸಾಧ್ಯವಾದ ಸಮ್ಯಕ್ ಜ್ಞಾನಾಚಾರ, ಗೌರವ, ಲೈಂಗ್ಯ, ಚರಪ್ರಸಾದ, ಮಹಾಘನವೆಂಬ ಷಡ್ವಿಧ ಹಸ್ತಂಗಳಲ್ಲಿ ಲಿಂಗವ ಧರಿಸುವ ಸುಚಿತ್ತ, ಸುಬುದ್ಧಿ, ನಿರಹಂಕೃತಿ, ಸುಮನ, ಸುಜ್ಞಾನ, ಸದ್ಭಾವವೆಂಬ ಷಡ್ವಿಧ ಹಸ್ತಂಗಳನು ಧರಿಸಿ, ಘ್ರಾಣ ಜಿಹ್ವೆ, ನೇತ್ರ, ತ್ವಕ್ಕು, ಶ್ರೋತ್ರ, ಭಾವವೆಂಬ ಷಡ್ವಿಧ ಮುಖಂಗಳನು ಅವಧಾನಿಸಿ, ಗಂಧ, ರಸ, ರೂಪು, ಸ್ಪರ್ಶನ, ಶಬ್ದ, ತೃಪ್ತಿಯೆಂಬ ಷಡ್ವಿಧ ಪದಾರ್ಥಂಗಳನು ಸಂಬಂಧಿಸಿ, ಮಹಾಲಿಂಗ ಪ್ರಸಾದಲಿಂಗವೆನಿಸುವ ಲಿಂಗದ್ವಯದ ಮೂಲ ಸೂತ್ರವು ಭಾವಲಿಂಗದಲ್ಲಿ ಭರಿತವಾಗಿ ಜಂಗಮಲಿಂಗ, ಶಿವಲಿಂಗವೆನಿಸುವ ಲಿಂಗದ್ವಯದ ಮೂಲಸೂತ್ರವು ಪ್ರಾಣಲಿಂಗದಲ್ಲಿ ನಿರತವಾಗಿ, ಗುರುಲಿಂಗ, ಆಚಾರಲಿಂಗವೆನಿಸುವ ಲಿಂಗದ್ವಯದ ಮೂಲ ಸೂತ್ರ, ಇಷ್ಟಲಿಂಗದಲ್ಲಿ ನಿಸ್ಸಂದೇಹವಾಗಿ - ಇಂತೀ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆನಿಸುವ ಈ ತ್ರಿವಿಧಲಿಂಗವು, ಷಡ್ವಿಧಲಿಂಗವಾದ ಮಹಾಲಿಂಗ, ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ, ಆಚಾರಲಿಂಗವನು ಆಯತದಲ್ಲಿ ಅಳವಡಿಸಿ, ಶಕ್ತಿಯ, ಭಕ್ತಿಯ, ಮುಖದ, ಹಸ್ತದ, ಲಿಂಗದ, ಅಂಗದ, ಅರ್ಪಣದ, ಪ್ರಸಾದದ, ಅಷ್ಟವಿಧದ ಸಕೀಲ ಸಂಬಂಧವನರಿಯೆ, ಪ್ರಸಾದ, ಸಾಧ್ಯ, ವೇದ್ಯ, ಸಂತೃಪ್ತಿಯೆನಿಸುವ ಚತುರ್ವಿಧ ಪರಿಣಾಮ ಪ್ರಕಾಶ. ಇವು ಮೊದಲಾದ ಅರ್ಪಣ ಸಾಧನೋಪಕರಣಂಗಳ ಭಾವಿಸುವ ಭಾವನೆಗೆ ಭಾವವಿಲ್ಲವಾಗಿ ಜ್ಞಾನವಿಲ್ಲ. ಜ್ಞಾನವಿಲ್ಲವಾಗಿ ಒಡಲಿಲ್ಲ. ಅದೇನು ಕಾರಣವೆಂದಡೆ– ಶುದ್ಧ ಸಿದ್ಧ ಪ್ರಸಿದ್ಧವೆಂಬ ಪ್ರಭೆಯ ಹೊದಿಕೆಯ ಹೊದ್ದಿರ್ದಲಿಂಗ ಚರಗುರುವೆನಿಸುವ ಲಿಂಗತ್ರಯುವು ಸಮರಸ ಸ್ಥಾನದಲ್ಲಿರ್ದು ಸಮಾಧಾನವಾಯಿತ್ತಾಗಿ, ಭಾವಕಲ್ಪನೆ, ಜ್ಞಾನಕಲ್ಪನೆ, ತನುಕಲ್ಪನೆಯಲ್ಲಿ ತೋರುವ,

ಆವಾವ ಕಲ್ಪನೆಗಳು ಆ ಘನಲಿಂಗೋದ್ಧಾರ ನಿರ್ಭಾವಸ್ಥಾನದಲ್ಲಿ ಲಯವಾಗಿತ್ತಾಗಿ, ಆ ಷಡ್ವಿಧ ಭಕ್ತಿಯನಾಚರಿಸಿದ ಪರಮಾನಂದ ಶರಣಂಗೆ, ಭಾವಾಭಾವ ನಷ್ಟವೆಂದು ಶ್ರೀ ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

ಅಂಗ ಕಳೆಯ ಮೀರಿದ ಲಿಂಗಕಳೆಯಲಾರೂಢ
ಲಿಂಗ ಪ್ರಸಾದ ಪ್ರಾಣ ಪರಮತತ್ತ್ವದ
ಲಿಂಗ ಕೂಡಲ ಚೆನ್ನಸಂಗಮನಾದ ಭೇದವನು
ಲಿಂಗಸಂಗ ಪ್ರಭುವಿನ ಕರುಣ ಬಸವಗಾದುದು ೨೭

## ಭಾವಾರ್ಥ

ಆ ಭಾವಾಭಾವ ನಷ್ಟವಾದ ಶರಣಂಗೆ, ಮುಂದೆ ಆಚರಿಸುವ ಆಚರಣೆಯಿಲ್ಲವಾಗಿ ಜ್ಞಾನಶೂನ್ಯವಾಯಿತ್ತದೆಂತೆಂದಡೆ – ಭಕ್ತಾದ್ಯೈಕ್ಯಾಂತವಹ ಷಡಂಗ ಭಕ್ತಿ, ಯುಕ್ತಿ, ವ್ಯಕ್ತಿ, ಶಕ್ತಿ, ವಿರಕ್ತಿ, ಮುಕ್ತಿಯೆಂಬ ಷಡ್ವಿಧಾಂಗ ಕಳೆಗಳೇಕಾಕಾರವಾಗಿ, ಆ ಶರಣನು ಅಂಗ ಕಳೆಯನು ಮೀರಿದನದೆಂತೆಂದಡೆ – ಇವೆಲ್ಲವನಂಗೀಕರಿಸಿಕೊಂಡು ಇರುತ್ತಿಹ, ಘನಲಿಂಗದ ನಿರ್ಭಾವ ಪ್ರಸಾದವು ಆ ನಿರ್ಭ್ರಾಂತಿ ಪ್ರಾಣಗ್ರಾಹಕನಾದ ಶರಣಂಗೆ, ಆ ನಿರ್ಭಾವ ಪ್ರಸಾದವೆನಿಸುವ ಪರಮತತ್ತ್ವವು ಏಕಾರ್ಥವಾಯಿತ್ತು. ಅದು ಹೇಗೆಂದಡೆ – ನಿರ್ಭಾವ, ವಿಶ್ರಾಂತಿ, ಈ ದ್ವಂದ್ವವು ಏಕಾರ್ಥವಾಯಿತ್ತಾಗಿ, ಜ್ಞಾನಶೂನ್ಯವೆನಿಸುವದು. ಇಂತೀ ನಿರ್ಭಾವ ಪ್ರಸಾದ ಪ್ರಸನ್ನ ಮಹಾ ಘನಲಿಂಗ ಕೂಡಲ ಚೆನ್ನಸಂಗಯ್ಯನಲ್ಲಿ ಏಕಾರ್ಥವಾದ ಭೇದವು ಸಾಧಕತ್ವವು ಅನುಭಾವ ಮೂರ್ತಿ, ಪರಮ ಜಂಗಮ, ಪ್ರಭುದೇವರ ಕರುಣದಿಂದ ಬಸವಣ್ಣಂಗಾಯಿತ್ತೆಂದು ಚೆನ್ನಬಸವೇಶ್ವರದೇವರು ನಿರೂಪಮಂ ಕೊಡುತ್ತಿಹರು.

ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ

**ಹಿರಿಯ ಮಂತ್ರಗೋಪ್ಯ ಸಮಾಪ್ತಂ**

ಮಂಗಳಮಹಾ ಶ್ರೀ ಶ್ರೀ.

# ಶ್ರೀ ಚೆನ್ನಬಸವೇಶ್ವರ ದೇವರು ನಿರೂಪಿಸಿದ ಷಟ್‌ಚಕ್ರ

## ಸೃಷ್ಟಿಯ ಉತ್ಪತ್ತಿ–ಸ್ಥಿತಿ–ಲಯ

ಪರಾಪರದಲ್ಲಿ ಶಿವ, ಶಿವನಲ್ಲಿ ಶಕ್ತಿ, ಶಕ್ತಿಯಲ್ಲಿ ನಾದ, ನಾದದಲ್ಲಿ ಬಿಂದು, ಬಿಂದುವಿನಲ್ಲಿ ಕಳೆ, ಕಳೆಯಲ್ಲಿ ಸದಾಶಿವ, ಸದಾಶಿವನಲ್ಲಿ ಮಹೇಶ್ವರ, ಮಹೇಶ್ವರನಲ್ಲಿ ರುದ್ರ, ರುದ್ರನಲ್ಲಿ ವಿಷ್ಣು, ವಿಷ್ಣುವಿನಲ್ಲಿ ಬ್ರಹ್ಮ, ಬ್ರಹ್ಮನಲ್ಲಿ ಆತ್ಮ, ಆತ್ಮನಲ್ಲಿ ಆಕಾಶ, ಆಕಾಶದಲ್ಲಿ ವಾಯು, ವಾಯುವಿನಲ್ಲಿ ಅಗ್ನಿ, ಅಗ್ನಿಯಲ್ಲಿ ಅಪ್ಪು, ಅಪ್ಪುವಿನಲ್ಲಿ ಪೃಥ್ವಿ, ಪೃಥ್ವಿಯಲ್ಲಿ ಊಷರಾದಿಗಳು, ಊಷರಾದಿಗಳಲ್ಲಿ ಅನ್ನ, ಅನ್ನದಲ್ಲಿ ನರ, ಮೃಗ, ಪಕ್ಷಿ, ಸ್ಥಾವರ ಜಂಗಮಾದಿಗಳು ಉದ್ಭವಿಸಿದ ಕ್ರಮದಲ್ಲಿ ಅಡಗಿದವು.

## ಶರೀರ ರಚನೆ

ಮನುಷ್ಯರು ತಮ್ಮ ಅಂಗುಲದಲ್ಲಿ ೯೬ ಅಂಗುಲದ ಪ್ರಮಾಣ, ಎಂಟು ಗೇಣು ಉದ್ದ, ನಾಲ್ಕು ಗೇಣು ಅಗಲ, ಮೂರು ಕೋಟಿ ರೋಮದ್ವಾರಗಳು, ೩೨ ಮೊಳ ಕರಳುಗಳು, ೯೨ ಸಂದುಗಳು, ೬೦ ಹಿರಿ ಎಲವುಗಳು, ೮೧ ಘಲಘಾಳಿಗೆ(?), ೪ ಘಲುದಿರ (?), ೩೬೦ ಪಲ ಮಾಂಸ, ಪಡಿ ಪೈತ್ಯ, ಪಾವು ಶ್ಲೇಷ್ಮ, ಪಾವು ಶುಕ್ಲ – ಇವು ಇಷ್ಟರಿಂದ ಕೂಡಿದೆ ಈ ಶರೀರವು. ಇವೆಲ್ಲವೂ ಜಡ. ಇವಕ್ಕಿನ್ನು ಜೀವನು ಸಾಕ್ಷಿಯಾಗಿದ್ದನಾದ ಕಾರಣ ಕೊರತೆ ಹುಟ್ಟಿ ಮನುಷ್ಯನ ಆಕಾರವಾಯಿತು. ಜೀವ(ನ)ಕ್ಕೆ ಪರಬ್ರಹ್ಮನೇ ಸಾಕ್ಷಿಯಾಗಿ ಸಕಲ ಭೂತಗಳಲ್ಲಿದ್ದನು. ಈ ಶರೀರದಲ್ಲಿ ತೊಂಬತ್ತಾರು ತತ್ತ್ವಗಳುಂಟು. ಅವಾವೆಂದರೆ– ಬಾಗಿಲು ೯, ಶ್ರೋತ್ರಗಳು ೫, ಶಬ್ದಗಳು ೫, ನಾಗರಗಳು ೫, ವಚನಗಳು ೪, ಅಂತಃಕರಣಗಳು ೪, ಪೃಥ್ವಿ, ಅಪ್ಪು, ಅಗ್ನಿ, ವಾಯು, ಆಕಾಶ ಸಂಬಂಧಗಳು ೨೫, ನಾಡಿಗಳು ೧೦, ಧಾತುಗಳು ೪, ರಾಗಗಳು ೮, ಆಧಾರಗಳು ೬, ಮಂಡಲಗಳು ೩, ಗುಣಗಳು ೩, ಅವಸ್ಥೆಗಳು ೫ –

ಅಲ್ಲಿದ್ದ ತತ್ತ್ವಗಳು ತೊಂಬತ್ತಾರು. ನಾಮರೂಪು ಕ್ರಿಯೆ-ಅವಾವೆಂದಡೆ –ಬಾಗಿಲು ಒಂಬತ್ತು. ಅವಕ್ಕೆ ವಿವರ– ಶ್ರೋತ್ರದ್ವಾರಗಳು ೨, ನಯನ ನಾಸಿಕ ದ್ವಾರಗಳು ೪, ವಾಕ್‌ದ್ವಾರ ೧, ಮೂತ್ರಪುರೀಷ ದ್ವಾರಗಳು ೨ – ಇವೇ ನವದ್ವಾರಗಳು. ಹತ್ತನೆಯ ದ್ವಾರವು ಅತಿ ಗೋಪ್ಯವಾಗಿದ್ದ ಕಾರಣ ಮುಂದೆ ವಿವರಿಸುತ್ತೇವೆ. ಶ್ರೋತ್ರಗಳು ಐದು. ಅವು ಯಾವುವೆಂದರೆ – ಶ್ರೋತ್ರ, ಚರ್ಮ, ಜಿಹ್ವೆ, ಘ್ರಾಣ, ನೇತ್ರ – ಇವು ಐದು ಜ್ಞಾನೇಂದ್ರಿಯಗಳು. ಇವಕ್ಕೆ ವಿಷಯಗಳು ಶಬ್ದ, ಸ್ಪರ್ಶ, ರೂಪು, ರಸ, ಗಂಧ.

## ಅಧ್ಯಾತ್ಮ–ಆದಿಭೂತ–ಆದಿದೈವತ

ಇವಲ್ಲದೆ ಇವಕ್ಕೆ ಅಧ್ಯಾತ್ಮ, ಆದಿಭೂತ, ಆದಿದೈವತ ಎಂದು ಮೂರುಂಟು. ವಿವರ: ಕಿವಿಗಳು ಅಧ್ಯಾತ್ಮ, ಕೇಳುವಂಥ ಶಬ್ದ ಆದಿಭೂತ, ಶಬ್ದರೂಪದಿಂದ ಕೂಡಿದ ದಿಕ್ಕುಗಳು ಆದಿದೈವತ. ಚರ್ಮ ಅಧ್ಯಾತ್ಮ, ಚರ್ಮಕ್ಕೆ ತಿಳುಹುವಂಥದ್ದು, ಸ್ಪರ್ಶವಾಗುವಂಥಾದ್ದು ಯಾವುದುಂಟೋ ಆ ವಸ್ತು ಆದಿಭೂತಂಗಳು. ಅದೇ ಆತ್ಮ ಕಾಂಬುವಂಥಾ ವಸ್ತು ಆದಿಭೂತ, ಸೂರ್ಯ ಆದಿದೈವತ. ನಾಲಿಗೆ ಅಧ್ಯಾತ್ಮ, ಹುಳಿ ಮೊದಲಾದ ಷಡ್ರುಚಿ ಆದಿಭೂತ, ಈ ವಸ್ತುಗಳ ರುಚಿ ತೆಗೆದು ಅನುಭವಿಸುವಂಥಾದ್ದೇ ಜೀವನ ಆದಿದೈವತ. ಮೂಗು ಅಧ್ಯಾತ್ಮ, ಮೂಸಿನೋಡುವ ವಾಸನೆಗಳು ಆಧಿಭೂತ, ಭೂಮಿ ಆದಿದೈವತ. ಈ ಐದು ಜ್ಞಾನೇಂದ್ರಿಯಗಳು. ಪ್ರಪಂಚ ಬಾಯಿಗಳು ಎಂಬುದು ಕರ್ಮೇಂದ್ರಿಯಗಳು. ಅವು ಯಾವುವೆಂದಡೆ – ಬಾಯಿ, ಕೈಗಳು, ಪಾದಗಳು, ಗುದ, ಗುಹ್ಯ, ಶಿಶ್ನ – ಈ ಐದು ಕರ್ಮೇಂದ್ರಿಯಗಳು. ವಚನ, ಗಮನ, ದಾನ, ವಿಸರ್ಗ, ಆನಂದ ಈ ಐದು ವಿಷಯಾದಿಗಳು. ಇವಕ್ಕೆ ಅಧ್ಯಾತ್ಮಗಳು – ಬಾಯಿ ಅಧ್ಯಾತ್ಮ, ಬಾಯ ನುಡಿ ಆದಿಭೂತ, ನಾರಾಯಣ ಆದಿದೈವತ. ಈ ಐದು ಕರ್ಮೇಂದ್ರಿಯಗಳು. ಪ್ರಪಂಚ ಅಂತಃಕರಣಗಳು ಅಂಬೋದು ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ ಇವು ಶರೀರದಲ್ಲಿ ಇದ್ದಾವಷ್ಟೆ ! ಅಂತಃಕರಣಗಳೆಂಬೊ ಹೆಸರುಂಟಾಯಿತು.

ಹೊಕ್ಕಳ ಬದಿಯಲ್ಲಿ ಬುದ್ಧಿ ಇರುವವು; ಹೃದಯದಲ್ಲಿ ಮನಸ್ಸು ಇರುವದು; ಕಂಠದಲ್ಲಿ ಚಿತ್ತ ಇರುವದು; ಬಾಯಲ್ಲಿ ಅಹಂಕಾರ ಇರುವದು. ಇವಕ್ಕೆ ಅಧ್ಯಾತ್ಮಂಗಳಂ ವಿವರಿಸುವೆವು.

ಮನಸ್ಸು ಎಂಬುದು ಅಧ್ಯಾತ್ಮ. ಯಾವುದಾದರೂ ಒಂದು ವಸ್ತು ನೋಡಿ ಈ ವಸ್ತು ಆ ವಸ್ತು ಎಂದು ಸಂಶಯ ಪಡೋ ಸಂಶಯ ಆದಿಭೂತ, ಚಂದ್ರ ಆದಿದೈವತ. ಬುದ್ಧಿ ಅಧ್ಯಾತ್ಮ, ಮುಂಚೆ ಸಂಶಯ ಮಾಡಿದ ವಸ್ತು ನಿಜವಾಗಿ ಇದೇ ವಸ್ತುವೆಂದು ವೇದಾರ್ಥವಾಗಿ ತಿಳಿದ ತಿಳಿವು ಇರೋ ನಿಶ್ಚಯ ಆದಿಭೂತ; ಬ್ರಹ್ಮ ಆದಿದೈವತ. ಚಿತ್ತ ಅಧ್ಯಾತ್ಮ, ಅನೇಕ ಚಿಂತೆ ಮಾಡದ ಚಿತ್ತ ಆದಿಭೂತ, ನಾರಾಯಣ ಆದಿದೈವತ. ಅಹಂ ಅಂಬೋದು ಸಂಸ್ಕೃತದಲ್ಲಿ ನಾನು ಅಂಬೋ ಮಾತು. ಆದಕಾರಣ ಎರಡು 'ಅಕ್ಷರ' ಅಧ್ಯಾತ್ಮ, ಸಕಲ ಕಾರ್ಯಂಗಳು ನಾನೇ ಮಾಡಿದೆನೆಂಬುವ ಗರ್ವ ಆದಿಭೂತ, ರುದ್ರ ಆದಿದೈವತ. ಜ್ಞಾತೃತ್ವ ಅನ್ನುವದು ಈಗ ಹೇಳಿದ ಸಕಲ ಇಂದ್ರಿಯಗಳು ಪ್ರಪಂಚಕ್ಕೆ ತನ್ನ ಕಾಂತಿಯಿಂದ ಅದಕ್ಕೇ ಕಾಂತಿ ಹುಟ್ಟಿಸಿ ಈ ಇಂದ್ರಿಯಗಳಿಂದ ಪುಣ್ಯ ಪಾಪಗಳ ಮಾಡುತ್ತ ತನಗೆ ಹತ್ತದ ಹಾಗೆ ಸಾಕ್ಷಿ ಮಾತ್ರವಾಗಿ ಉಪಾಧಿಯಿಂದ ಜೀವನೆಂಬ ಹೆಸರು ಉಂಟಾಯಿತು. ಪರಬ್ರಹ್ಮವು, ಜ್ಞಾತೃತ್ವವು, ಈ ಪ್ರಕಾರ ಇದ್ದ ಜೀವನಕ್ಕೆ ಸಾಕ್ಷಿಯಾಗಿ, ಪರಬ್ರಹ್ಮವಾಗಿ ನೇತ್ರರೂಪವಾಗಿ ಸಕಲ ದೇಹಗಳಲ್ಲಿ ತಾನು ಇದ್ದಾನಷ್ಟೆ! ಇಂತಿಷ್ಟಕ್ಕೂ ತಾತ್ಪರ್ಯವೇನೆಂದರೆ— ನಾನಾ ವಿಧ ಚೇಷ್ಟೆಗಳು ಇದ್ದ ಕಾರಣ ಶರೀರದಲ್ಲಿ ಜೀವನು ಉತ್ಪತ್ತಿಯಾದನು. ಇದಲ್ಲದೆ ಶರೀರಕ್ಕೂ ತನಗೂ ಏಕತ್ವ ಕಂಡು ಶರೀರವೇ ಜೀವನು ಎನ್ನುವ ಭ್ರಾಂತಿ ಹುಟ್ಟಿತ್ತು. ಭ್ರಾಂತಿಯಿಂದ ಜನ್ಮಾದಿಗಳು ಹುಟ್ಟಿ ಸುಖದುಃಖಾದಿಗಳನ್ನು ಅನುಭವಿಸಬೇಕಾಯಿತು. ಈ ಶರೀರದಲ್ಲಿ ನಾನು ಇಲ್ಲ ಎಂದು ತಿಳಿದು, ತನಗೆ ಸಾಕ್ಷಿಮಾತ್ರವಾಗಿ ದೇವತೆಗಳು ಇದರಲ್ಲಿ ಇದ್ದಾರೆಂದು ತಿಳಿದು, ತನಗೆ ಸಾಕ್ಷಿಯಾಗಿದ್ದ ಪರಬ್ರಹ್ಮನನೊಡಗೂಡಿದರೆ ಜನನ ಮರಣಾದಿಗಳು ಇಲ್ಲದಲೆ ಶಿವಲೋಕದಲ್ಲಿ ಸುಖಿ

ಯಾಗಿ ಇರುವನು. ಪರಬ್ರಹ್ಮ ಸ್ವರೂಪವಾದ ಜೀವಕ್ಕೆ, ಅತ್ಯಂತ ಮಲಿನವಾದ ಶರೀರಕ್ಕೆ ಏಕತ್ವವಾಯಿತು ಎಂದರೆ — ಅದನ್ನು ವಿವರಿಸುತ್ತಿದ್ದೇವೆ.

## ಜೀವ-ದೇಹ

ಜೀವವು ದೇಹದ ವಾಸನೆಯಲ್ಲಿ ಕೂಡಿಕೊಂಡು ಅಹಂಕಾರ ಹೊಂದಿತ್ತು. ಅಹಂಕಾರ ಜಡವಾಗಿದ್ದ ಕಾರಣ ಬುದ್ಧಿಯಲ್ಲಿ ಕೂಡಿತು. ಬುದ್ಧಿಯು ಸಕಲ ವಸ್ತುಗಳ ಬಯಸುವ ಕಾರಣ ಮನಸ್ಸಿನಲ್ಲಿ ಕೂಡುವುದು. ಮನಸ್ಸು ಸಕಲ ಸಂಶಯಗಳಲ್ಲಿ ಇದ್ದಕಾರಣ ಇಂದ್ರಿಯ ಭ್ರಾಂತಿ ಹೊಂದಿತ್ತು. ಇವು ಇಷ್ಟು ಏಕವಾಗಿ ಚಿತ್ತವಹುದು. ಆ ಚಿತ್ತ ಅನೇಕ ಚಿತ್ತರೂಪವಾಗಿ ಜೀವ(ನ)ಕ್ಕೆ ಜನನ ಮರಣಾದಿಗಳು ಉದ್ಭವಿಸಿದವು. ಈ ಶರೀರಕ್ಕೆ ನಾನಾ ವಿಧ ಚೇಷ್ಟೆಗಳೆಂದು ಹೇಳಿದೆವಲ್ಲ. ಆ ಚೇಷ್ಟೆಗಳ ವಿವರಿಸುತ್ತಿರುವೆವು.

## ಜ್ಞಾನೇಂದ್ರಿಯಗಳ ಚೇಷ್ಟೆಗಳು

ಕಿವಿಗಳಿಗೆ ವಿಷಯ ಶಬ್ದ - ಆಕಾಶದಲ್ಲಿ ಕೂಡಿಕೊಂಡು ಸಕಲ ಧ್ವನಿಗಳು ಕೇಳುತ್ತವೆ. ಚರ್ಮಕ್ಕೆ ವಿಷಯ ಸ್ಪರ್ಶನ – ವಾಯುವಿನಲ್ಲಿ ಕೂಡಿಕೊಂಡು ತನ್ನ ಸೋಂಕಿದ ಸ್ಪರ್ಶಗಳನ್ನೆಲ್ಲ ಗುರುತಿಸುವದು. ಕಣ್ಣಿಗೆ ವಿಷಯ ರೂಪು - ಅಗ್ನಿಯಲ್ಲಿ ಕೂಡಿಕೊಂಡು ಸಕಲವಾದ ಪ್ರಪಂಚಗಳ ನೋಡುತ್ತ ಇರುವದು. ನಾಲಿಗೆಗೆ ವಿಷಯ ರಸ – ಉದಕದಲ್ಲಿ ಕೂಡಿಕೊಂಡು ಷಡ್‌ರುಚಿಗಳ ಗುರುತಿಸುವದು. ಮೂಗಿಗೆ ವಿಷಯ ಗಂಧ – ಭೂಮಿಯಲ್ಲಿ ಕೂಡಿಕೊಂಡು ಸುಗಂಧ ದುರ್ಗಂಧಗಳ ಗುರುತರಿವುದು. ಇವು ಜ್ಞಾನೇಂದ್ರಿಯ ಚೇಷ್ಟೆಗಳು– ಇನ್ನು—

## ಕರ್ಮೇಂದ್ರಿಯಗಳ ಚೇಷ್ಟೆಗಳು

ಬಾಯಿಗೆ ವಿಷಯ ವಚನ – ಆಕಾಶದಲ್ಲಿ ಕೂಡಿಕೊಂಡು ಸಕಲವಾದ ನುಡಿಗಳ ನುಡಿವುದು. ಕೈಗೆ ವಿಷಯ ದಾನ – ವಾಯುವಿನಲ್ಲಿ ಕೂಡಿಕೊಂಡು ತೆಗೆದುಕೊಂಬುದು, ಗುರುತು ಅರಿವುದು. ಪಾದಂಗಳಿಗೆ

ವಿಷಯ ಗಮನ – ಬೆಂಕಿಯಲ್ಲಿ ಕೂಡಿಕೊಂಡು ಸಂಸಾರ ಮಾಡುವದು. ಗುದಸ್ಥಾನಕ್ಕೆ ವಿಷಯ ಮಲವಿಸರ್ಜನೆ – ಉದಕದಲ್ಲಿ ಕೂಡಿಕೊಂಡು, ಮೂತ್ರ ಪೂರಿಷಗಳ ಬಿಡುವದು. ಶಿಶ್ನಕ್ಕೆ ವಿಷಯ ಸಂಗಮ – ಭೂಮಿ ಯಲ್ಲಿ ಕೂಡಿಕೊಂಡು ಆನಂದಪಡುವುದು – ಇವು ಕರ್ಮೇಂದ್ರಿಯಗಳ ಚೇಷ್ಟೆಗಳು. ಇನ್ನು—

## ಅಂತಃಕರಣಗಳ ಚೇಷ್ಟೆಗಳು

ಮನಸ್ಸು ಸಂಶಯಪಡುವುದು, ಬುದ್ಧಿ ನಿಶ್ಚೈಸುವುದು, ಚಿತ್ತ ಚಿಂತೆ ಮಾಡುವುದು, ಅಹಂಕಾರ ನಾನೆಂದು ನುಡಿವುದು. ಇವು ಎಲ್ಲಿ ಹುಟ್ಟುವವೊ ಅಲ್ಲೇ ಅಡಗುವವು. ಅವು ಹ್ಯಾಗಂದರೆ– ಶಬ್ದ ಕಿವಿಗಳಲ್ಲಿ ಆಕಾಶದಲ್ಲಿ ಅಡಗುವದು. ಸ್ಪರ್ಶ ವಾಯುವಿನಲ್ಲಿ, ಚರ್ಮದಲ್ಲಿ ಅಡಗು ವದು. ರಸ ಜಿಹ್ವೆಯಲ್ಲಿ, ಅಪ್ಪುವಿನಲ್ಲಿ ಅಡಗುವದು. ಗಂಧ ಪೃಥ್ವಿ ಯಲ್ಲಿ, ಮೂಗಿನಲ್ಲಿ ಅಡಗುವದು. ಮಲವಿಸರ್ಜನೆ ಉದಕದಲ್ಲಿ, ಗುದ ದಲ್ಲಿ ಅಡಗುವದು. ಆನಂದ ಪೃಥ್ವಿಯಲ್ಲಿ ಅಡಗುವದು. ಸಂಶಯ ಮನ ಸ್ಸಿನಲ್ಲಿ ಅಡಗುವದು. ಚಿತ್ತ ಚಿತ್ತದಲ್ಲಿ ಅಡಗುವದು. ಬಾಯಿಯಲ್ಲಿ ಅಹಂಕಾರ ಅಡಗುವದು. ಇದೇ **ಉತ್ಪತ್ತಿ-ಸ್ಥಿತಿ-ಲಯ**ವೆಂದು ಹೇಳ ಲ್ಪಡುವದು. ಹೀಗೆ ಹೇಳಿದ ಆದಿಭೂತಗಳೇ ಮನುಷ್ಯನಿಗೆ ವಿಷಯಗ ಳೆಂದು ಕಲ್ಪಿಸಿ, ವಿಷಯಗಳಲ್ಲಿ ವೈರಾಗ್ಯ ಹುಟ್ಟಿದರೆ **ಮೋಕ್ಷ** ಹೊಂದು ವನು. ವಿಷಯಗಳಲ್ಲಿ ಆಸಕ್ತಿಯುಂಟಾದರೆ **ಸಂಸಾರ ಬಂಧನ**. ಇದಕ್ಕೆ ಪ್ರಮಾಣ—

ಶ್ಲೋ|| ಮೋಕ್ಷ ವಿಷಯಂ ವೈರಾಗ್ಯಂ |
ಬಂಧಂ ವಿಷಯ ಮೋಹಕಂ ||

ಎಂದು ಅಂದಡೆ ವಿಷಯಗಳಲ್ಲಿ ವೈರಾಗ್ಯ ಹುಟ್ಟಿರಬೇಕು. ಅವು ಗಳ **ಪಂಚವಿಂಶತಿ**—

ಶ್ಲೋ|| ಅಸ್ಥಿ ಮಾಂಸ ತ್ವಚೋ ನಾಡೀ ರೋಮಶ್ಚೈವತು ಪಂಚಕಂ|
ಕ್ಷಿತೇಃ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ ||

ಎಂದು ಅಸ್ಥಿ ಮಾಂಸ ಚರ್ಮ ನರ ರೋಮ — ಇವು ಐದು ಪೃಥ್ವಿ ಯಿಂದಾದವು.

ಶ್ಲೋ॥ ಲಾಲಾಮೂತ್ರಂತ್ವಥಸ್ವೇದಃ ಶುಕ್ಲಶೋಣಿತಮೇವಚ ।
ಅಪಾಂ ಚೈವಂ ವಿಧಂ ಪ್ರೋಕ್ತಂಜ್ಞಾತವ್ಯಂಚ ಪ್ರಯತ್ನತಾಃ ॥

ಎಂದು ಶ್ಲೇಷ್ಮ ಮೂತ್ರ ಪಿತ್ತ ಶುಕ್ಲ ರಕ್ತ – ಈ ಐದು ಅಪ್ಪುವಿನಿಂದಾ ದವು.

ಶ್ಲೋ॥ ಕ್ಷುಧಾತೃಷ್ಣಾತಥಾ ನಿದ್ರಾಲಸ್ಯಂಸಂಗಂ ವಿಶೇಷತಃ ।
ಅಗ್ನೇಃ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ ॥

ಎಂದು ಕ್ಷುಧಾ ತೃಷೆ ನಿದ್ರೆ ಆಲಸ್ಯ ಸಂಗ - ಈ ಐದು ಅಗ್ನಿಯಿಂದಾ ದವು.

ಶ್ಲೋ॥ ಧಾವನಂ ವಲ್ಗನಂ ಚೈವ ಕುಂಚನಂಚ ಪ್ರಚಾರಣಂ । ವಿಯೋ
ಗಶ್ಚೇತಿವಿಜ್ಞೇಯೋ ವಾಯೋಃ ಪಂಚಗುಣಾಃ ಸ್ಮೃತಾಃ ॥

ಎಂದು ಪರಿವ ಪಾರುವ ಸುಳಿವ ಹುಬ್ಬುವ ಅಗಲುವ – ಈ ಐದು ವಾಯುವಿನಿಂದಾದವು.

ಶ್ಲೋ॥ ರಾಗ ದ್ವೇಷ ಭಯಂಲಜ್ಜಾ ಮೋಹಶ್ಚೈವ ಯಥಾತಥಾ ।
ನಭಸ್ಯ ಪಂಚಗುಣಾಃ ಪ್ರೋಕ್ತಾಸ್ತದಂಶಾಃ ಪರಿಕೀರ್ತಿತಾಃ ॥

ಎಂದು ರಾಗ ದ್ವೇಷ ಭಯ ಲಜ್ಜೆ ಮೋಹ– ಈ ೫ ಆಕಾಶದಿಂದಾದವು. ಇನ್ನು—

## ಪೃಥ್ವಿಯ ಪಂಚೀಕೃತಿ

ಶ್ಲೋ॥ ಚಿತ್ತಂಚ ಪ್ರಾಣವಾಯುಶ್ಚ ನಾಸಿಕಂ ಗಂಧ ಏವಚ।
ವಾಯುಃ ಪಂಚವಿಧಂ ಪ್ರೋಕ್ತಮಿತ್ಯೇತದ್ಭೂಮಿ ಪಂಚಕಂ ॥

## ಉದಕ ಪಂಚೀಕೃತಿ

ಶ್ಲೋ॥ ಬುದ್ಧಿಶ್ಚಪಾನವಾಯುಶ್ಚ ಜಿಹ್ವಾಚರಸ ಏವಚ ।
ಗುಹ್ಯಂ ಪಂಚವಿಧಂ ಪ್ರೋಕ್ತಂ ಏತತ್ ಸ್ಥಲ ಪಂಚಕಂ ॥

## ಅಗ್ನಿ ಪಂಚೀಕೃತಿ

ಶ್ಲೋ॥ ಅಹಂಕಾರೋ ವ್ಯಾನವಾಯುರ್ನೇತ್ರಂ ರೂಪಂ ತಥೈವಚ ।
ಪದಃ ಪಂಚವಿಧಂ ಪ್ರೋಕ್ತಂ ಇತ್ಯೇತದಗ್ನಿ ಪಂಚಕಂ ॥

## ವಾಯು ಪಂಚೀಕೃತಿ

ಶ್ಲೋ॥ ಮನಸೋವ್ಯಾನವಾಯುಶ್ಚ ಶ್ರೋತ್ರಂ ಶಬ್ದಂ ತಥೈವಚ ।
ಪಾಣಿ ಪಂಚವಿಧಂ ಪ್ರೋಕ್ತಂ ಇತ್ಯೇತದ್ವಾಯು ಪಂಚಕಂ ॥

## ಆಕಾಶ ಪಂಚೀಕೃತಿ

ಶ್ಲೋ॥ ಜ್ಞಾನಂ ಸಮಾನವಾಯುಶ್ಚ ಶ್ರೋತ್ರಂ ಶಬ್ದಸ್ತಥೈವಚ ।
ವಾಕ್ಯಂ ಪಂಚವಿಧಂ ಪ್ರೋಕ್ತಂ ಇತ್ಯೇತದ್ವ್ಯೋಮ ಪಂಚಕಂ॥

(ಮೇಲಿನ ಶ್ಲೋಕಗಳ ಟೀಕೆಗಳು ಇದೇ ಗ್ರಂಥದ ೯ ನೇ ಪುಟದಲ್ಲಿವೆ.)

## ಪಂಚಭೂತಗಳು

ಗುಣಗಳು, ಧರ್ಮಗಳು, ಕರ್ಮಾದಿಗಳು, ಆದಿದೈವತಗಳು – ಅವು ಯಾವುವೆಂದರೆ- ಅವಕ್ಕೆ ವಿವರ :– ಭೂಮಿ ಪಕ್ಕದಲ್ಲಿರುವದು ಅದು ಅರಶಿನದ ವರ್ಣ. ಬ್ರಹ್ಮ ಆದಿದೈವತ. ಶಬ್ದ, ಸ್ಪರ್ಶ, ರೂಪ,ರಸ, ಗಂಧ ಈ ಐದು ಗುಣಗಳು. ಕಠಿಣವೇ ಧರ್ಮ. ಪೃಥ್ವಿಗೆ ಧಾರಣವೇ ಕರ್ಮ. ಕ್ರಿಯಾಶಕ್ತಿ ಅಕಾರ ಮಾತ್ರಕ್ಕೆ. ಉದಕ ತೊಡೆಗಳ ಬದಿಯಲ್ಲಿರುವದು. ಅದು ಶ್ವೇತವರ್ಣ. ವಿಷ್ಣು ಆದಿದೈವತ. ಶಬ್ದ ಸ್ಪರ್ಶ, ರೂಪು, ರಸಗಳು ಈ ನಾಲ್ಕು ಗುಣಗಳು. ದ್ರವಿಸುವದೇ ಧರ್ಮ. ಅಪಹರಿಸುವದೇ ಕರ್ಮ. ಉಕಾರ ಮಾತ್ರಕ್ಕೆ ಜ್ಞಾನ ಶಕ್ತಿ ಸ್ವರೂಪ ಗಳು. ಅಗ್ನಿ ಹೊಟ್ಟೆಯೊಳಗಿರುವದು. ಇದು ರಕ್ತ ವರ್ಣ. ರುದ್ರ ಆದಿ ದೈವತ. ಶಬ್ದ ಸ್ಪರ್ಶ, ರೂಪು, ಈ ಮೂರು ಗುಣಗಳು. ಉಷ್ಣತೆ ಧರ್ಮ. ಪಚನವೇ ಕರ್ಮ. ಮಕಾರ ಮಾತ್ರಕ್ಕೆ ಇಚ್ಛಾಶಕ್ತಿ ಸ್ವರೂಪ ಗಳು. ವಾಯು ಕಂಠದಲ್ಲಿರುವದು. ಹಸಿರುವರ್ಣ. ಈಶ್ವರ ಆದಿದೈವತ. ಶಬ್ದ, ಸ್ಪರ್ಶ, ೨ ಗುಣಗಳು. ತಿರುಗುವದೇ ಧರ್ಮ. ಚಲಿಸದಿರುವದೇ ಕರ್ಮ. ಯಕಾರ ಮಾತ್ರಕ್ಕೆ ಆದಿಶಕ್ತಿ ಸ್ವರೂಪಗಳು. ಆಕಾಶ ಮರೆಯಲ್ಲಿ

ರುವದು. ಸದಾಶಿವ ಆಡಿದ್ಧೈವತ. ಶಬ್ದ ಒಂದೇ ಗುಣ. ಬಯಲಾಗಿರುವದೇ ಧರ್ಮ. ನೋಡಿದ್ದು ವಾಸಿಸುವದೇ ಕರ್ಮ. ಇಂದ್ರ ನೀಲವರ್ಣ. ಅಕಾರ ಮಾತ್ರಕ್ಕೆ ಪರಶಕ್ತಿ ಸ್ವರೂಪಗಳು.

ಇನ್ನು ಷಡ್‌ರಸಗಳಿಗೆ ರೂಪು ನಾಮ ಕ್ರಿಯಾ ಏನಂದರೆ, ಪೃಥ್ವಿಗೆ ಶಬ್ದ, ಸ್ಪರ್ಶ, ರೂಪು, ರಸ, ಗಂಧ, ಈ ೫, ಉದಕಕ್ಕೆ ಶಬ್ದ, ಸ್ಪರ್ಶ, ರೂಪು, ರಸ, ಈ ನಾಲ್ಕು, ಅಗ್ನಿಗೆ ಶಬ್ದ, ಸ್ಪರ್ಶ, ರೂಪು ಈ ಮೂರು, ವಾಯುವಿಗೆ ಶಬ್ದ, ಸ್ಪರ್ಶ ಈ ಎರಡು, ಆಕಾಶಕ್ಕೆ ಶಬ್ದ ೧ – ಇವು ಪಂಚಭೂತಗಳಿಗೆ ಪಂಚ ತನ್ಮಾತ್ರೆಗಳು. ಭೂಮಿಗೆ ಆಕಾರ ಮಾತ್ರಕ್ಕೆ ಕ್ರಿಯಾಶಕ್ತಿ, ಉದಕಕ್ಕೆ ಉಕಾರ ಮಾತ್ರಕ್ಕೆ ಜ್ಞಾನಶಕ್ತಿ, ಅಗ್ನಿಗೆ ಮಕಾರ ಮಾತ್ರಕ್ಕೆ ಇಚ್ಛಾಶಕ್ತಿ, ವಾಯುವಿಗೆ ಯಕಾರ ಮಾತ್ರಕ್ಕೆ ಆದಿ ಶಕ್ತಿ, ಆಕಾಶಕ್ಕೆ ಅಕಾರ ಮಾತ್ರಕ್ಕೆ ಪರಾಶಕ್ತಿ. ಇವು ಪಂಚಭೂತಗಳು. ಆಶ್ರಯ ಮಾಡಿಕೊಂಡು ಇರುವ ಶಕ್ತಿಗಳು ಮಾತ್ರಕ್ಕೆ ಭ್ರಮೆಯೆಂಬುದು ಬೀಜಗಳು. ಈ ಪ್ರಕಾರ ಪರಮಾತ್ಮಸಿದ್ಧನು. ಆ ಪರಬ್ರಹ್ಮನ ವಿವರಿಸುತ್ತಿದ್ದೇವೆ.

## ಷಟ್ಚಕ್ರಗಳು

ಷಟ್ಚಕ್ರಗಳಿಗೆ ನಾಮ ರೂಪ ಕ್ರಿಯ ವಿವರಿಸುತ್ತಿದ್ದೇವೆ. ಮೂಲಾಧಾರ, ಸ್ವಾದಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಗ್ನೇಯ– ಈ ಆರು ಚಕ್ರಗಳು ಬೆನ್ನೆಲಬುಗಳನ್ನು, ಕುದುರು ಎಲುಬುಗಳನ್ನು ಕೂಡಿಕೊಂಡು ಇರುವ ದಿಕ್ಕಿನಲ್ಲಿ ಶಿಶ್ನ ಇರುವುದು. ಶಿಶ್ನಕ್ಕೆ ಗುದಸ್ಥಾನಕ್ಕೆ ನಡುಮಧ್ಯೆ ನೆಲಚದರವಾಗಿರುವದು. ಅಲ್ಲಿ ಒಂದು ಪದ್ಮಾಕಾರ ಇರುವದು. ಅದಕ್ಕೆ ನಡುಮಧ್ಯೆ ತ್ರಿಕೋಣ ರೂಪದಿಂದ ಇರುವದು. ಅದು ಆಧಾರ ಚಕ್ರ ನಾಲ್ಕುದಳ ಪದ್ಮಾಕಾರ ಇರುವದು. ಅದಕ್ಕೆ ಅಕ್ಷರಗಳು, ವ, ಶ, ಷ, ಸ, ಈ ಚಕ್ರದ ವರ್ಣ ಅರಿಶಿನ. ಭೂಮಿಮುದ್ರೆ, ಇದಕ್ಕೆ ಆದಿದೈವ ವಿಘ್ನೇಶ್ವರ. ಈ ಚಕ್ರಕ್ಕೆ ಎರಡು ಅಂಗುಲದ ಮೇಲೆ ಸ್ವಾಧಿಷ್ಠಾನ ಚಕ್ರ, ಆರುದಳ ಪದ್ಮಾಕಾರ ಇರುವದು. ಅದಕ್ಕೆ ಅಕ್ಷರಗಳು ಬಭ-ಮ-ಯ-ರ-ಲ. ಈ ಚಕ್ರಗಳ ವರ್ಣ ಶ್ವೇತ, ಪಕ್ಷಿ ಮುದ್ರೆ, ಇದಕ್ಕೆ

ಆದಿದೈವ ಬ್ರಹ್ಮ. ಇದಕ್ಕೆ ಎಂಟು ಅಂಗುಲದ ಮೇಲೆ ಮಣಿಪೂರಕ ಚಕ್ರ. ಇದು ಕೋಳಿತತ್ತಿಯೋಪಾದಿಯಲ್ಲಿರುವದು. ಇದರ ಮೇಲೆ ಎಪ್ಪತ್ತೆರಡು ಸಾವಿರ ನಾಡಿಗಳು ಇರುವವು. ಆ ಚಕ್ರ ಹತ್ತುದಳ ಪದ್ಮಾಕಾರವಿರುವದು. ಅದಕ್ಕೆ ಅಕ್ಷರಗಳು ಡ-ಢ-ಣ-ತಥ-ದಧ-ನ-ಪಫ. ಈ ಚಕ್ರದ ವರ್ಣ ರಕ್ತಕಾಂತಿಯಲ್ಲಿರುವದು. ಪೀಠಮುದ್ರೆ. ಇದಕ್ಕೆ ಆದಿದೈವತ ವಿಷ್ಣು. ಇನ್ನು ಅನಾಹತ ಚಕ್ರ ಹೃದಯ ಕಮಲದಲ್ಲಿ ದ್ವಾದಶ ದಳದೋಪಾದಿಯಲ್ಲಿ ಇರುವದು. ಇದಕ್ಕೆ ಅಕ್ಷರಗಳು ಕ-ಖ-ಗ-ಘ-ಙ-ಚ-ಛ-ಜ-ಝ-ಞ-ಟ-ಠ ಈ ಚಕ್ರದಳಗಳ ವರ್ಣ ಮಾಂಜಿಷ್ಟ ವರ್ಣ. ಲಿಂಗಮುದ್ರೆ. ಇದಕ್ಕೆ ಆದಿದೈವತ ರುದ್ರ. ಇದು ವಾಯುಚಕ್ರ. ಇದರ ಮೇಲೆ ವಿಶುದ್ಧಿ ಚಕ್ರ ಕೊರಳ ಗುಂಡಿಗೆಯಲ್ಲಿರುವದು. ೧೬ ದಳದ ಪದ್ಮಾಕಾರವಾಗಿರುವದು. ಅಕ್ಷರಗಳು ಅಕಾರದಿಂದ ವಿಸರ್ಗದವರೆಗೆ ೧೬. ಕಪೋತವರ್ಣ. ಮತ್ಸ್ಯಮುದ್ರೆ - ಇದಕ್ಕೆ ಆದಿದೈವತ ಈಶ್ವರ. ಇನ್ನು ಆಜ್ಞಾಚಕ್ರ ಹತ್ತು ಅಂಗುಲದ ಮೇಲೆ ಅಗ್ನಿ–ಭ್ರೂಯುಗ ಮಧ್ಯದಲ್ಲಿರುವದು. ಎರಡುದಳ ಪದ್ಮಾಕಾರವಾಗಿಹುದು. ಅದಕ್ಕೆ ಅಕ್ಷರಗಳು ಹಂ-ಕ್ಷಂ. ಈ ಚಕ್ರದ ವರ್ಣ ಮಾಣಿಕ್ಯ ಕಾಂತಿಯೋಪಾದಿಯಲ್ಲಿರುವುದು. ಇದು ಪ್ರಕಾಶಮುದ್ರೆ. ಇದಕ್ಕೆ ಆದಿದೈವತಾ ಸದಾಶಿವ. ಇನ್ನು ಸಹಸ್ರ ದಳಗಳುಳ್ಳ ಬ್ರಹ್ಮಚಕ್ರ. (ವಿವರಗಳಿಗೆ ೩೦ನೇ ಪುಟ ನೋಡಬಹುದು.)

## ಮಂಡಲತ್ರಯ

ಇನ್ನು ಮಂಡಲಗಳು ಮೂರಕ್ಕೆ ವಿವರವು. ಸೂರ್ಯಮಂಡಲ, ಚಂದ್ರಮಂಡಲ, ಅಗ್ನಿಮಂಡಲ – ಇವು ಮಂಡಲತ್ರಯಗಳು. **ಅಗ್ನಿ ಮಂಡಲಕ್ಕೆ** ವಿವರ:– ನೆಲ ಚದರವಾಗಿರುವದು. ನಡುವೆ ತ್ರಿಕೋಣದ ಹಾಗೆ ಇರುವದು. ಭೂಮಿ ಉದಕವನ್ನು ಕೂಡಿದ ದಿಕ್ಕಿನಲ್ಲಿ ನಾಲ್ಕುದಳ ಪದ್ಮಾಕಾರದಿಂದ ಇರುವದು. ಅದರ ಮೇಲೆ ಪಂಚಾಕ್ಷರಿ ಉಂಟು. ಓಂ, ಹ್ರಾಂ, ಹ್ರೀಂ, ವಾಂ, ಸಾಂ ಇವು ಉಂಟು. ಇನ್ನು **ಸೂರ್ಯಮಂಡಲಕ್ಕೆ** ವಿವರ:– ಎಂಟುದಳ ಪದ್ಮಾಕಾರವಾಗಿರುವದು. ಇದು ಬಾಳೆಮೊಗ್ಗೆಯೋಪಾದಿ ಇರುವದು. ಅಧೋಮುಖವಾಗಿ

ರುವದು. ಇದಕ್ಕೆ ಅಕ್ಷರಗಳು ಯ-ರ-ಲ-ವ-ಶ-ಷ-ಸ-ಹ. ಇದು ಬಂಗಾರ ಬಣ್ಣದೋಪಾದಿಯಲ್ಲಿರುವದು. ಇದರ ಮಧ್ಯೆ ಮನೋನ್ಮನಿ ಶಿವಶಕ್ತಿ ವಾಸವಾಗಿರುವದು. ಇನ್ನು **ಚಂದ್ರಮಂಡಲಕ್ಕೆ** ವಿವರ:- ರವಿ, ಚಂದ್ರ ಅಗ್ನಿ ಪ್ರಭೆಗಳು ಹುಟ್ಟಿ, ಶಿರಸ್ಸಿನ ನಡುವೆ ಇರುವದು. ಅದು ಅಮೃತಕಲಶ ಅಗ್ನಿ ಮಂಡಲದ ಮೇಲೆ ಸಂತತೋದ್ಧಾರವಾಗಿ ಅಮೃತ ಸುರಿವುತ್ತಿರುವದು.

## ದಶನಾಡಿಗಳು *

ಈ ಶರೀರದಲ್ಲಿ ೭೨ ಸಾವಿರ ನಾಡಿಗಳುಂಟು. ಅವುಗಳಲ್ಲಿ ಈಡಾ, ಪಿಂಗಳ, ಸುಷುಮ್ನ, ಗಾಂಧಾರಿ, ಹಸ್ತಿಜಿಹ್ವೆ, ಪೂಷಾ, ಪಯಸ್ವಿನಿ, ಲಕುಹ, ಅಲಂಬು, ಶಂಕಿನಿ - ದಶಪ್ರಮುಖ ನಾಡಿಗಳು. ಇವುಗಳಲ್ಲಿ ಪ್ರಸಿದ್ಧವಾದಂಥ ಸುಷುಮ್ನ ನಾಡಿಯು ಶರೀರದಲ್ಲಿರುವಂಥ ವಿವರವನ್ನು ಹೇಳುತ್ತಿದ್ದೇವೆ.

ಈ ಶರೀರದಲ್ಲಿ ಮುಂದೆ ಹೇಳಿದ ಕಮಲಗಳು ಗುದಸ್ಥಾನದಿಂದ ಕಪಾಲ ಪರಿಯಂತರಕ್ಕೆ ವೀಣೆ, ದಂಡಿಗೆ, ಕುಂಬಳಕಾಯಿ ಪೋಣಿಸಿದ ಹಾಗೆ ಒಂದರಮೇಲೊಂದು ಅಡಕಲ ಗಡಿಗೆಯೋಪಾದಿಯಲ್ಲಿರುವವು. ಈ ಪ್ರಕಾರ ಎಲ್ಲಾ ದಿಕ್ಕಿನಿಂದ ಹತ್ತಿಕೊಂಡು ಗುದಸ್ಥಾನದಿಂದ ಕಪಾಲ ಪರಿಯಂತರಕ್ಕೂ ವೀಣೆ, ದಂಡಿಗೆಯೋಪಾದಿಯಲ್ಲಿ ಬೆನ್ನುಹಿಂದೆ ಎಲುಬಿಗೆ ಹತ್ತಿಕೊಂಡು ಇರುವವು. ಅದರ ನಡುವೆ ವೀಣೆ ಉಕ್ಕಿನ ತಂತಿಯೋಪಾದಿ ಸುಷುಮ್ನ ನಾಡಿ ಬೆನ್ನು ಎಲುಬಿನ ಉದ್ದವಾಗಿರುವದು. ಇದಕ್ಕೆ ಬಲಗಡೆ ಪಿಂಗಳ ನಾಡಿ ಅಂಬೋದು ಇರ್ರುವದು. ಈ ಪಿಂಗಳ ನಾಡಿಗೆ ಮೂಲಾಧಾರದಲ್ಲಿಂದ ಕಪಾಲ ಪರಿಯಂತರಕ್ಕೆ ಬಂದು ತಾಕಿ ಅಲ್ಲಿರುವಂಥ ಸೂರ್ಯಮಂಡಲವನ್ನು ವ್ಯಾಪಿಸಿಕೊಂಡು ಅಲ್ಲಿಂದ ತಿರುಗಿ, ಬಲಮೂಗಿನಲ್ಲಿ ಉಸಿರು ಹೊರಟುಹೋಗುವದು. ಸುಷುಮ್ನ ನಾಡಿಗೆ ಎಡಗಡೆಯಿಂದ ಈಡಾನಾಡಿ ಮೂಲಾಧಾರದಿಂದ ಕಪಾಲ ಪರಿಯಂತರಕ್ಕೂ ಬಂದು ತಾಕಿ ಅಲ್ಲಿರುವ ಚಂದ್ರ

---

* ಹೆಚ್ಚಿನ ವಿವರಗಳಿಗೆ ೧೬೭ನೆಯ ಪುಟ ನೋಡಬಹುದು.

ಮಂಡಲವನ್ನೇ ವ್ಯಾಪಿಸಿಕೊಂಡು ಅಲ್ಲಿಂದ ತಿರುಗಿ ಎಡಮೂಗಿನಿಂದ ಉಸಿರು ಹೊರಟುಹೋಗುವದು ಇಲ್ಲಿ ಯೋಗಮಾರ್ಗ ವಿಚಾರ ಪ್ರಯುಕ್ತವಾಗಿ ತಿಳಿಸುತ್ತಲಿದ್ದೇವೆ. ಮುಂದೆ ಸುಷುಮ್ನಾ ನಾಡಿಗೆ ಮೂಲಾಧಾರದಿಂದ ಕಪಾಲ ಪರಿಯಂತರಕ್ಕೂ ಬಂದು ಇದ್ದಿತ್ತಲ್ಲವೆಂದು ಹೇಳಿದ್ದೇವಷ್ಟೆ. ಇದಕ್ಕೆ ಪ್ರಮಾಣ—

ಶ್ಲೋ॥ ಗುದಪೃಷ್ಠಸ್ಯ ಭಾಗಾಸ್ಮಿನ್ ವೀಣಾದಂಡ ತನು ಭೃತಾ।
ದೀರ್ಘಾಸ್ಥಿ ಮುರ್ಧ್ನಿ ಪರ್ಯಂತಂ ಬ್ರಹ್ಮನಾಡಿ ವಿಕಾಸತೇ ॥

**ಟೀಕೆ—** ಈ ಪ್ರಕಾರ ಯೋಗಶಾಸ್ತ್ರದಲ್ಲಿರುವ ಅನ್ವಯ. ಈ ಪ್ರಕಾರ ಅಸಹ್ಯವಳಿದ ಬೆಳ್ಳಿಯೋಪಾದಿ, ಕಾಸಿದ ಭಂಗಾರದೋಪಾದಿ ಕೋಟಿ ಸೂರ್ಯ ಪ್ರಕಾಶವಾಗಿ ಹೊಳೆಯುತ್ತ ಇರುವದು. ಇದೇ ಬ್ರಹ್ಮನಾಡಿ. ಇದೇ ಮೂಲವಿದ್ಯಾ; ಇದೇ ಸಕಲ ಲೋಕಂಗಳಿಗೆ ಆಧಾರವಾಗಿ ತ್ರಿಪೂರ್ವ ಸ್ವರೂಪವನ್ನು ಹೊಂದಿರುವದು. ಈ ಸುಷುಮ್ನಾ ನಾಡಿ ಅಗ್ನಿಮಂಡಲದವರೆಗೆ ಬಂದಿರುವುದು. ಅಲ್ಲಿ ಸೂಕ್ಷ್ಮವಾದ ರಂಧ್ರ ಇರುವದು. ಅದೇ ದಶಮ ರಂಧ್ರ. ಇದಕ್ಕೆ ಪ್ರಮಾಣ—

ಶ್ಲೋ॥ ತಸ್ಯಾಂತೆ ಸುಷಿರಂ ಸೂಕ್ಷ್ಮಂ ಬ್ರಹ್ಮನಾಡಿ ಪ್ರಸೂತಿಭಿಃ

ಈ ಪ್ರಕಾರ ಬ್ರಹ್ಮನಾಡಿಯಲ್ಲಿ ಬ್ರಹ್ಮಾಂಡವೆಲ್ಲ ವ್ಯಾಪಿಸಿಕೊಂಡು ಇದ್ದಿತೆಂದು ವೇದಗಳೆಲ್ಲ ಹೇಳುತ್ತ ಇರುವದನ್ನು ವಿವರಿಸುತ್ತ ಇದ್ದೇವೆ. ಸೂರ್ಯನು, ಚಂದ್ರನು, ಅಗ್ನಿಹೋತ್ರನು, ಪರಮೇಶ್ವರನು, ಪಂಚಮಹಾಭೂತಂಗಳು, ಚತುರ್ದಶ ಭುವನಂಗಳು, ಕಾಶಿ ವೊಧಲ್ಗೊಂಡು ಪುಣ್ಯ ಕ್ಷೇತ್ರಗಳು, ಚತುರ್ವೇದಗಳು, ಸಪ್ತ ಸಮುದ್ರಗಳು, ಮೀಮಾಂಸಾದಿ ಶಾಸ್ತ್ರಗಳು, ಚೌಷಷ್ಠಿ ಕಲೆಗಳು, ಪಂಚ ಸದ್ವರ್ಣಗಳು, ಷೋಡಶ ಸ್ವರಗಳು, ಸತ್ವ ರಜಸ್ತಮೋಗುಣ ತ್ರಿವಿಧಂಗಳು, ಮೂಲ ಪ್ರಕೃತಿ, ಚತುರ್ವಿಂಶತಿ ತತ್ತ್ವಂಗಳು, ದಶಪ್ರಾಣ ವಾಯುಗಳು, ಜೀವನ ಈ ಸುಷುಮ್ನ ನಾಡಿ ಗ್ರಂಥದಲ್ಲಿ ಹೇಳಲ್ಪಟ್ಟಿವೆ. ಇದೇ ಕುಂಡಲಿ ಶಕ್ತಿ. ಇದು ಸರ್ವತೋಮುಖವಾಗಿರುವದು. ಇದಕ್ಕೆ ಪ್ರಮಾಣ—

ಶ್ಲೋ॥ ಶಸ್ಯಮಸ್ಯೆ ಗದಾಸೂರ್ಯ ಸೋಮಾಗ್ನಿ ಪರಮೇಶ್ವರ ।
ಭೂತಲೋಕಾದಿ ಸುಕ್ಷೇತ್ರಸ್ಸಮುದ್ರಾಃ ಪರ್ವತಾನಲಾಃ ॥
ದ್ವಿಪಂಚ ನಿಮ್ನಗಾ ವೇದಶಾಸ್ತ್ರ ವಿದ್ಯಾ ಕಳಾಕ್ಷರಃ ।
ಕ್ಷೇತ್ರಜ್ಞ ಪ್ರಾಣವಾಯುಶ್ಚ ಸುಷುಮ್ನಾಂತರ್ಗತಂ
ವಿಶ್ವಂತಸ್ಮಾತ್ಸರ್ವಂ ಪ್ರತಿಷ್ಠಿತಂ ॥

ಎಂಬುವಂಥ ನ್ಯಾಯ ಉಂಟು. ಈ ಬ್ರಹ್ಮರಂಧ್ರಾ ಸ್ಥಳವು ಮಹಾ ಗೋಪ್ಯವಾದುದು. ಇದನ್ನು ವಿವರಿಸುತ್ತಿದ್ದೇವೆ. ಯಮುನಾ ನಾಡಿ, ಈಡಾನಾಡಿ, ಚಂದ್ರನಾಡಿ ಈ ಮೂರು ಹೆಸರುಗಳು ಎಡಮೂಗಿಗೆ ಒಪ್ಪುವಂಥವು. ಗಂಗಾನಾಡಿ, ಪಿಂಗಳನಾಡಿ, ಸೂರ್ಯನಾಡಿ ಈ ಮೂರು ಹೆಸರು ಬಲಮೂಗಿನ ಉಸಿರಿಗೆ ಒಪ್ಪುವಂಥಹವು. ಸರಸ್ವತಿ ನಾಡಿ, ಸುಷುಮ್ನನಾಡಿ, ಅಗ್ನಿನಾಡಿ ಈ ಮೂರು ಹೆಸರು ಬ್ರಹ್ಮನಾಡಿಗೆ ಒಪ್ಪುವಂತಹವು. ಈ ಮೂರು ನಾಡಿಗಳು ನಾಸಿಕಾಗ್ರದಲ್ಲಿ ಕೂಡಿಕೊಂಡಿರುವವು. ಕಿವಿ ರಂಧ್ರಗಳು ಎರಡು ಅಲ್ಲೇ ಕೂಡಿ, ಮೂಗಿನ ರಂಧ್ರಗಳು ಸಹ ಎರಡು ಅಲ್ಲಿಯೇ ಕೂಡುವವು. ಆದಕಾರಣ ಸಕಲ ಶಾಸ್ತ್ರಗಳಲ್ಲಿ ಕುಂಡಲಿ ಸ್ಥಾನ, ದ್ವಾದಶಾಂತ, ಚತುಷಷ್ಠಿ, ತ್ರಿಕೂಟ, ತ್ರಿವೇಣಿ ಸಂಗಮ, ಮುಕ್ತಿದ್ವಾರ, ನಾದಬಿಂದು ಕಳಾವಾಸ, ಪೂರ್ಣ ಸ್ಮಶಾನ, ಶೃಂಗಾಟ ಮಂಡಲ, ದ್ವಿದಳ ಚಕ್ರದಲ್ಲಿ ಇರುವಂಥ ಹಂಸರೂಪ ಪರಮಾತ್ಮನಿದ್ದಾನೆಪ್ಪೆ. ಹಂಸಸ್ಥಲವೆಂದು ಶೃಂಗಾಟವೆಂದು ಸಕಲವಾದ ವೇದ ಶಾಸ್ತ್ರಂಗಳಲ್ಲಿ ಹೇಳಲ್ಪಟ್ಟದೆ. ಇಷ್ಟು ಹೆಸರುಗಳು ಉಂಟಾದ ಕಾರಣ ಕಣ್ಣಿನ ಬೊಂಬೆಗಳ ನಡುವೆ ಮುಂಚೆ ಹೇಳಿದ ಬ್ರಹ್ಮರಂಧ್ರ ಇದ್ದೀತು. ಈ ಬ್ರಹ್ಮ ರಂಧ್ರದಲ್ಲಿ ಹಂಸರೂಪದಿಂದ ಪರಬ್ರಹ್ಮ ಇದ್ದಾನೆ. ಆ ಹಂಸವು ತನ್ನ ನಂಬಿದಂಥವರ ಸಂಸಾರ ಹರಿಸಿ ಮೋಕ್ಷ ಕೊಡ್ವುವುದು. ಕಾರಣ ಹಂಸ ಎಂಬುವ ನಾಮಾಂಕಿತವಾಯಿತು. ಶರೀರದಲ್ಲಿ ಪರಮಾತ್ಮನಿರುವಂಥ ಸ್ಥಳಗಳು. ಅವು ಯಾವುವೆಂದರೆ – ಮುಂಚೆ ಹೇಳಿದ ಸುಷುಮ್ನ ನಾಡಿಯು ಹೊಕ್ಕಳದ ಬದಿಯಲ್ಲಿ ಬಾಳೆಯ ಮೊಗ್ಗೆಯೋಪಾದಿಯಾಗಿ, ಅಧೋಮುಖವಾಗಿ ಒಂದು ಕಮಲವಿದ್ದೀತು. ಆ

ಕಮಲ ಮಧ್ಯದಲ್ಲಿ ಜ್ಯೋತಿರೂಪದಿಂದ ಇದ್ದೀತು; ಆ ಕಮಲ ಮಧ್ಯ ದಲ್ಲಿ ಸೂರ್ಯಬಿಂಬದ ಹಾಗೆ ಇದ್ದೀತು. ಭ್ರೂಯುಗ ಮಧ್ಯದಲ್ಲಿ ಎರಡುದಳದ ಪದ್ಮಾಕಾರದಿಂದ ಇದ್ದೀತು. ಆ ಕಮಲ ಮಧ್ಯದಲ್ಲಿ ಹಂಸರೂಪದಿಂದ ಇದ್ದೀತು. ಶಿರಸ್ಸಿನ ನಡುವೆ ಸಾವಿರ ದಳಗಳ ಪದ್ಮಾ ಕಾರದಿಂದ ಇದ್ದೀತು. ಆ ಕಮಲ ಮಧ್ಯದಲ್ಲಿ ಬ್ರಹ್ಮರೂಪದಿಂದ ಇದ್ದೀ ತು. ಇದಕ್ಕೆ ಪ್ರಮಾಣ—

ಶ್ಲೋ।। ನಾಭಿ ಕಮಲ ಮಧ್ಯೆ ಜ್ಯೋತಿರಾನಂದ ರೂಪಂ
ಹೃದಯ ಕಮಲ ಮಧ್ಯೆ ಸೂರ್ಯಬಿಂಬಾನುರೂಪಂ
ಭ್ರೂಯುಗದಳ ಮಧ್ಯೆ ಹಂಸ ಮಾರ್ಗಾನು ರೂಪಂ
ದಶಶತದಳ ಮಧ್ಯೆ ಬ್ರಹ್ಮಪೂರ್ಣಾನುರೂಪಂ
ಸಕಲಮಿದ ಮಧ್ಯೆ ಸೂಕ್ಷ್ಮ ಸ್ಥೂಲಾನುರೂಪಂ
ನಳ ಪರತರಾ ರೂಪಂ ಪಾತುಮಾಂ ಪಾರ್ವತೀಶ್ವರಾ

ಇಂಥ ಪರಶಿವನ ಸ್ವರೂಪವಾದಂಥ ಪರಬ್ರಹ್ಮ ಧ್ಯಾನದಿಂದ ದರ್ಶನವಂ ಮಾಡಿದರೆ ಸಂಸಾರ ಹರಿದು ಮುಕ್ತನಾಗುವನು. ಆ ದರ್ಶನ ಮಾಡುವಂಥ ವಿಧಾನ ವಿವರಿಸುತ್ತೇವೆ.

## ಮುಕ್ತಿಮಾರ್ಗ ನಿರೂಪಣ

ಪದ್ಮಗಳಲ್ಲಿ ಶ್ರೀ ಮಹಾದೇವನ ಅನುಗ್ರಹದಿಂದ ಕೇಳೋಣವಾ ಯಿತು. ಯೋಗೀಶ್ವರರಿಗೆ ಬ್ರಹ್ಮದರ್ಶನ ಮಾಡುವ ಉದ್ದೇಶಕ್ಕೆ ನಾಲ್ಕು ಯೋಗಗಳು, ನಾಲ್ಕು ಮುದ್ರೆಗಳುಂಟು. ಅವು ಯಾವುವೆಂದರೆ– ಧ್ಯಾನ ಮುದ್ರೆ, ಷಣ್ಮುಖಮುದ್ರೆ, ಶಾಂಭವಿ ಮುದ್ರೆ, ಖೇಚರಿ ಮುದ್ರೆ – ಇವು ನಾಲ್ಕು ಮುದ್ರೆಗಳು. ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ – ಈ ನಾಲ್ಕು ಯೋಗಗಳು. (ವಿಶೇಷ ಪರಿಚಯಕ್ಕೆ ೮೩ನೆಯ ಪುಟ ಅವಲೋಕಿಸಬಹುದು.)

## ಮಂತ್ರಯೋಗ ಸಾಧಿಸುವ ಕ್ರಮವು

ಪಾದದ್ವಯದಿಂದ ಕೂಡಿದ ಮನುಷ್ಯ ಕಿಂಚಿತ್ ತತ್ತ್ವಜ್ಞಾನ

ಹುಟ್ಟಿ ಶುಚಿಯಾಗಿ, ಒಂದು ಸ್ಥಳದಲ್ಲಿ ಪದ್ಮಾಸನಸ್ಥನಾಗಿ ಕುಳಿತು ಕಣ್ಣಿನ ಎರಡೂ ನೋಟಗಳನ್ನೂ ನಾಸಿಕಾಗ್ರದಲ್ಲಿಟ್ಟು ಕಣ್ಣುಗಳ ಮುಚ್ಚಿಕೊಂಡು ತನಗೆ ಹಿತವಾದ ದೇವರನ್ನು ಧ್ಯಾನ ಮಾಡುತ್ತ ಪಂಚಾಕ್ಷರಿ ಮಂತ್ರಗಳು ಮೊದಲಾದ ಮಂತ್ರಗಳ ಜಪವ ಮಾಡುವದು. ಆ ಫಲ ಶಿವಾರ್ಪಣ ಮಾಡುವುದೇ ಮಂತ್ರಯೋಗ. ಅದೇ ಧ್ಯಾನ ಮುದ್ರೆ. ಅಧಮನು, ಶುದ್ಧನು, ಉತ್ತಮನು – ಇವರು ಈ ಯೋಗಕ್ಕೆ ಅಧಿಕಾರಿಗಳು. ಇನ್ನು

## ಲಯಯೋಗ ಸಾಧಿಸುವ ಕ್ರಮವು

ಲಯಯೋಗ ಸಾಧಿಸುವ ಕ್ರಮವು. ಇದಕ್ಕೆ ವಿವರಣವು:– ಕೆಳಗೆ ನಾಸಿಕಾಗ್ರದಲ್ಲಿ ನೋಡುತ್ತ ಕೆಳಗೆ ಇರುವದನ್ನು ಶೋಧಿಸುವದು. ತರ್ಜನೆಯ ಎರಡು ಬೆರಳಿಂದ ಎರಡು ಕಿವಿ ಮುಚ್ಚಿದರೆ ಅಲ್ಲಿ ಮಹಾಧ್ವನಿ ಕೇಳುವದು. ಆ ಧ್ವನಿ ಕೇಳ ಕೇಳುತ್ತ ಮುಂದೆ ಗೆಜ್ಜೆ ಶಬ್ದ ಕೇಳ್ವುದು. ಆ ಮೇಲೆ ಹಿರೇ ಗೆಜ್ಜೆಗಳ ಧ್ವನಿ ಕೇಳುವುದು. ಮತ್ತೆ ಕೇಳುತ್ತ ಕೇಳುತ್ತ ಘಂಟೆ, ಶಂಖ, ವೇಣು, ತಾಳ, ಪಿಳ್ಳಂಗೋವಿ, ಮದ್ದಳೆ, ಭೇರಿ, ಮೇಘ – ಇವು ಮೊದಲಾದ ದಶವಿಧ ನಾದಗಳು ಕೇಳುವವು. ಆದರಲ್ಲಿ ಒಂಬತ್ತು ನಾದಗಳನ್ನು ಪರಿತ್ಯಾಗ ಮಾಡಿ ಹತ್ತನೇ ನಾದ ಅಭ್ಯಾಸ ಮಾಡಿಕೊಳ್ಳುತ್ತ ಅಲ್ಲಿ ಮನಸ್ಸು ಲೀನವಾಗುವುದು. ಇದೇ ಮೋಕ್ಷಕ್ಕೆ ದಾರಿ. ಈ ನಾದವೇ ಪ್ರಣವನಾದ. ಅಕಾರ, ಉಕಾರ, ಮಕಾರಗಳು ಇವು ಮೂರು ಕಲಿತು ಪ್ರಣವ ರೂಪವಾಗಿ ಅನಾಹತ ಚಕ್ರದಲ್ಲಿ ಹುಟ್ಟಿ, ಅಲ್ಲಿಂದ ಪ್ರಜ್ವಲವಾಗಿ ಕಮಲದಲ್ಲಿ ಮಹಾಧ್ವನಿ ಆಗುತ್ತಿರುವುದು. ಇದಕ್ಕೆ ಸಂದೇಹವಿಲ್ಲ.

ಶ್ಲೋ|| ಅನಾಹತಸ್ಯ ಶಬ್ದಸ್ಯ ತಶ್ಶಬ್ದಸ್ಯಯೋಧ್ವನಿ |
ಧ್ವನಿರಂತರ್ಗತಂ ಜ್ಯೋತಿ ಜ್ಯೋತಿರಂತರ್ಗತಂಮನಃ |
ತನ್ಮನೋನಿಲಯಂ ಯಾಂತಿತ ದ್ವಿಪಲ್ಲಿ ಪರಮಂ ಪದಂ||

ಇದೇ ಖೇಚರಿ ಮುದ್ರೆ. ಇದೇ ಲಯಯೋಗ. ಮಂತ್ರಯೋಗಗಳಿಗಿಂತ ಉತ್ತಮ. ಶುದ್ಧ ಯೋಗಗಳಿಗಿಂತ ಮಧ್ಯಮ.

## ಹಠಯೋಗ ಸಾಧಿಸುವ ಕ್ರಮವು

ಎಡಗಾಲು, ಹಿಮ್ಮಡ, ಎರಡು ಪಕ್ಕೆಗಳ ನಡುವೆ ಇಟ್ಟು, ಬಲ ಹಿಮ್ಮಡದ ಹೊಕ್ಕುಳದ ಬದಿಯಲ್ಲಿಟ್ಟು ಗಟ್ಟಿಯಾಗಿ ಎದೆಯ ಮೇಲ ಕೈತ್ತಿ ಹೆಬ್ಬೆರಳಲ್ಲಿ ಎರಡು ಕಣ್ಣು ಮುಚ್ಚಿ ವಾಯುವೆಂಬ ಕೀಚಕ, ಪೂರಕ, ಕುಂಭಕ, ಉಪಾದಿ ಮೂಲಕ ಜಾಲಂಧರವೆಂಬುವದು ಮೂರು ಗ್ರಂಥ ಗಳನ್ನು ಶೋಧಿಸಿ, ಸುಷುಮ್ನಾ ನಾಡಿಯು ಸಂಗಡ ಸಹಸ್ರಾರು ಪರ್ಯಂತರ ತಂದಿಟ್ಟು, ಅಲ್ಲಿದ್ದ ಜ್ಯೋತಿ ಸ್ವರೂಪದಲ್ಲಿ, ಜೀವನವನ್ನು ಇಡುವುದೇ ಹಠಯೋಗ. ಇದೇ ಷಣ್ಮುಖಿ, ವಜ್ರೈ, ಇದೇ ಕೇವಲ ಕುಂಭಕ. ಇದೇ ಸಿದ್ಧಾಸನ. ಈ ಯೋಗ ಸಾಧಿಸುವವರು ರಾಜಯೋಗಿಗಿಂತ ಮಧ್ಯಮ. ಇದಕ್ಕೆ ಸಂದೇಹವಿಲ್ಲ.

## ರಾಜಯೋಗ ಸಾಧಿಸುವ ಕ್ರಮವು

ಸಕಲ ಯೋಗಗಳಿಗೆ ಅರಸಾದದ್ದು. ಅದಕ್ಕೆ ರಾಜಯೋಗವೆಂಬ ಹೆಸರುಂಟಾಯಿತು. ಈ ರಾಜಯೋಗಕ್ಕೆ ಏಳು ಹೆಸರುಗಳುಂಟು. ಅವು ಯಾವುವೆಂದರೆ – ಉನ್ಮನಿ, ಮನೋನ್ಮನಿ, ಸಹಜ, ಅಮನಸ್ಕ, ಜಡ, ನಿದ್ರೆ – ಈ ಏಳು ಹೆಸರುಗಳು. ರಾಜಯೋಗ ಮೂರು ವಿಧಗಳು – **ಸಾಂಖ್ಯ, ತಾರಕ, ಅಮನಸ್ಕ** – ಈ ಮೂರು ವಿಧಗಳು. ಇದರಲ್ಲಿ ತಾರಕಯೋಗ ಪೂರ್ಣವಾದದ್ದು. ಅಮನಸ್ಕ ಅಪರಯೋಗ. ಇವಕ್ಕೆ ಪೂರ್ವ ಅಪರಗಳೆಂಬುವ ಹೆಸರುಂಟಾಯಿತು. ತಾರಕ ಅಮನಸ್ಕಗಳಲ್ಲಿ ಕಿಂಚಿತ್ತು ಭೇದವಿದೆ. ವಿಶೇಷ ಕಾಣಲಿಕ್ಕೆ ಇಲ್ಲವು. ಈ ಯೋಗ ಸಾಧಿ ಸುವ ಕ್ರಮ ಹ್ಯಾಗಂದರೆ – ವಿವರಿಸುವೆವು.

ಈ ಶರೀರದಲ್ಲಿ ಮೊದಲು ಹೇಳಲ್ಪಟ್ಟ ಪಂಚವಿಂಶತಿ ತತ್ತ್ವಗ ಳನ್ನು ಕ್ರಮವಾಗಿ ವಿಂಗಡಿಸಿ ಈ ತತ್ತ್ವಗಳಿಗೆ ಪ್ರಧಾನ ತತ್ತ್ವವಾದ ಪರಬ್ರಹ್ಮವು ಸೂರ್ಯ, ಚಂದ್ರ, ಅಗ್ನಿ ಮಂಡಲಗಳನ್ನು ವ್ಯಾಪಿಸಿ, ನೇತ್ರರೂಪವಾಗಿ ಇರುವುದೆಂದು ತಿಳಿದು ಪರಬ್ರಹ್ಮ ಸ್ವರೂಪ ಸದಾಶಿವನ ಭಕ್ತಿ ಹುಟ್ಟುವುದೇ **ಸಾಂಖ್ಯವೆನಿಸುವುದು.** ಇದೇ ಶಿವಭಕ್ತರಿಗೆ ಮುಖ್ಯ ವಾದದ್ದು. ಇನ್ನು ತಾರಕಯೋಗವೆಂದರೆ, ಈ ಶರೀರದ ಒಳಹೊರಗೆ

ಪರಬ್ರಹ್ಮನು ಎಲ್ಲರಲ್ಲಿ ಇರುವನೆಂಬುವದನ್ನು ತಿಳಿದು ವೇದಗಳಲ್ಲಿ ಹೇಳುವ ಪ್ರಮಾಣ.

ಶ್ಲೋ॥ ಅಂತರ್ವಹಿಸ್ತ್ರತಸ್ಸರ್ವಂ ।
ವ್ಯಾಪ್ತಂ ಸದಾಶಿವ ಸ್ಥಿತಿ ॥

ಎಂದು ತಿಳಿಯುವುದು **ತಾರಕಯೋಗ.**

## ತಾರಕ ಅಮನಸ್ಕಗಳ ವಿವರ:–

ಶುಚಿಯಾದ ಸ್ಥಳದಲ್ಲಿ ಕುಳಿತು ಆಚಾರದ ಕಟ್ಟು ಕಟ್ಟಿಕೊಂಡು ಎರಡು ಕಣ್ಣಿನ ನೋಟಗಳು ಹೊರಗೆ ನಾಸಿಕಾಗ್ರದಲ್ಲಿ ಕಣ್ಣು ಬೊಂಬೆಗಳ ನಡುಮಧ್ಯದಲ್ಲಿ ಇಟ್ಟು ದಿನಾಲು ಕ್ರಮವಾಗಿ ನೋಡುತ್ತ ನೋಡುತ್ತ ಚಂದ್ರಮಂಡಲ, ಇಂದ್ರ ಧನಸ್ಸು, ದೀವಿಗೆ, ಮಾಣಿಕ್ಯ, ಅಗ್ನಿ ರಭಸಗಳು, ಧೂಮಕಿಂಚಿತ್ಕಾರಗಳ ಹಾಗೆ ನಾನಾ ವಿಧಗಳು ಕಾಣುವವು. ಈ ಅಷ್ಟರೂಪಗಳು ನಷ್ಟವಾಗಿ ಮತ್ತು ಮತ್ತು ನೋಡುತ್ತ ನೋಡುತ್ತ ಬೆಳದಿಂಗಳು ಕಾಣುವುದು. ಆ ಬೆಳದಿಂಗಳದೊಳಗೆ ಒಂದು ಚಿನ್ಮಯ ರೂಪು ಕಾಣುವುದು. ಇದೇ ಬ್ರಹ್ಮವೆಂದು ಶಾಸ್ತ್ರ ಪ್ರಮಾಣ. ಇದೇ ತಾರಕಯೋಗ. ಇದೇ ಬಾಹ್ಯ ಖೇಚರಿ. ಇದೇ ಪೂರ್ವ ಯೋಗ. ಇನ್ನು ರಾಜಯೋಗದಿಂದ ಪರಮಾತ್ಮನ ದರ್ಶನ ಮಾಡಿಕೊಳ್ಳುವ ಉದ್ದೇಶಕ್ಕೆ ಶಾಂಭವಿ ಮುದ್ರೆ. ಇದು ಪಾರ್ವತಿಗೆ ಪ್ರಿಯವಾದ ಮುದ್ರೆ. ಆದಕಾರಣ ಶಾಂಭವಿ ಮುದ್ರೆಯಾಯಿತು. ಇದು ಧ್ಯಾನ ಮಾಡಲಾಗಿ ಹುಟ್ಟಿದ ಚಿದಗ್ನಿಯಿಂದ ಪುರುಷರು ಅನೇಕ ಕೋಟಿ ಜನ್ಮಂಗಳಲ್ಲಿ ಮಾಡಿದ ಬ್ರಹ್ಮಹತ್ಯಾದಿ ಪಾಪಗಳನ್ನು ದಹಿಸುವ ಕಾರಣ ಶಾಂಭವಿ ಮುದ್ರೆ ಸಕಲ ಮುದ್ರೆಗಳಲ್ಲಿ ಪ್ರಸಿದ್ಧವಾಯಿತು. ಈ ಶಾಂಭವಿ ಮುದ್ರೆಯ ಲಕ್ಷಣವು ಮೂರು ವಿಧ. ಪೂರ್ಣ ದೃಷ್ಟಿಯನ್ನು ಶುಚಿಯಾದ ಸ್ಥಳದಲ್ಲಿ ಕುಳಿತುಕೊಂಡು ಆಚಾರದ ಕಟ್ಟನ್ನು ಕಟ್ಟಿಕೊಂಡು ಸದ್ಗುರುವಿನ ಸ್ಮರಣೆ ಮಾಡಿ ಮುಖವನ್ನು ಸ್ವಲ್ಪ ಕೆಳಗೆ ಇಟ್ಟು ಬಿಳಿಯ ಗುಡ್ಡಿಯು ಬಯಲಿಗೆ ಕಾಣುವಂತೆ ಸ್ಥಿರ ಮನಸ್ಸಿನಿಂದ ದಿನಾಲು ಅಭ್ಯಾಸ ಮಾಡಲು ಎರಡು ಘಳಿಗೆಯಾದರೂ ಆ ದೃಷ್ಟಿಗಳು ಸ್ಥಿರವಾಗಿ ನಿಂತಿರೆ,

ಗಾಢಾಂಧಕಾರವು ತೋರುವುದು. ಆ ಕತ್ತಲಲ್ಲಿ ನೋಡುತ್ತ ಹೋದರೆ ಮೊದಲು ಹೇಳಿದ ತಾರಕ ಚಿಹ್ನಗಳು ಕಾಣಬರುವವು. ಅವು ನಷ್ಟವಾದರೆ ಮುಂದೆ ಬೆಳದಿಂಗಳಲ್ಲಿ ಸಕಲ ಭೂತಗಳು ಕಾಣುವವು. ಅಲ್ಲಿ ಪರಮಾತ್ಮ ಸ್ವರೂಪ ಪರಬ್ರಹ್ಮವು ಕೋಟಿ ಸೂರ್ಯ ಪ್ರಕಾಶವಾಗಿ ತಾಲುಮೂಲದಲ್ಲಿ ಕಲಿತು ದ್ವಾದಶಾಂತರದ ನಡುವೆ ಕಣ್ಣು ಬೊಂಬೆಯ ಮಧ್ಯದಲ್ಲಿ ಇರುವ ಪರಮಾತ್ಮನನ್ನು ಸದ್ಗುರುವು ಒಂದು ಅರೆಕ್ಷಣದಲ್ಲಿ ತೋರಿಸುವನು. ಇದಕ್ಕೆ ಸಂದೇಹವೇ ಇಲ್ಲ.

ಅನೇಕ ವರ್ಷ ಪ್ರಯಾಸ ಪಟ್ಟರೂ, ಕಾಣಿಸದಂಥಾದ್ದು ಆಕ್ಷಣದಲ್ಲಿ ಕಾಣಿಸುವದೆಂತೆನೆ. ಪ್ರಮಾಣ—

ಶ್ಲೋ|| ಪ್ರಾಪ್ತಿ ಜ್ಞಾನೇನ ವಿಜ್ಞಾನಂಗಹೆಚಂದ್ರಾದಿವಸ್ಥಿತೆ |
ಲಬ್ಧಾ ಕಾಂತಿಕ ದೇಹಾನಾಂ ಯೋಗಜ್ಞಾನವಧಾರಿಣಃ ||

ಶಾಸ್ತ್ರ ಓದಿದ ಜ್ಞಾನವು ಆತ್ಮದರ್ಶನದ ಮೇಲೆ ಫಲಿಸುವ ಕಾರಣ, ಗುರು ಸೇವೆ ಮಾಡಿದ ಕಾರಣ ಗುರುಕೃಪಾವಿಶೇಷದಿಂದಲೇ ಶೀಘ್ರವಾಗಿ ಪರಮಾತ್ಮ ದರ್ಶನವಾಗುವದು.

ಷಡಂಗ ಯೋಗ, ಅಷ್ಟಾಂಗ ಯೋಗ ಮಾರ್ಗದಿಂದಾಚರಿಸಿ, ಮನೋಲಯವಿಲ್ಲದಿದ್ದರೂ ಪರಮಾತ್ಮನು ಕಾಣಿಸುವ ಬಗೆಯೆಂದರೆ, ಗುರುರಾಯನು ಕೃಪಾಭರಿತನಾಗಿ ಆತ್ಮೋಪದೇಶ ಮಾಡುವಲ್ಲಿ ಕಿವಿಯ ಬದಿಯಲ್ಲಿರುವ ಕಣ್ಣು ಬೊಂಬೆಗಳ ಮಲಕಿನಲ್ಲಿ ಎರಡು ಜ್ಯೋತಿಗಳು ಕಾಣಿಸುವವು. ಆಗಲೇ **ಮೋಕ್ಷ**ವಾಯಿತೆಂದು ತಿಳಿಯಬಹುದು. ಇನ್ನು ಮನುಷ್ಯನ **ಮರಣ ಕಾಲ ವಿಧಾನ**ವೆಂತೆನೆ :–

ಹಂಸ ಸ್ವರೂಪ ಬ್ರಹ್ಮಯಜ್ಞ ಮೊದಲಾದ ಸತ್ಕರ್ಮಗಳನೆಲ್ಲ ಶಿವಾರ್ಪಣ ಮಾಡಿದ ಪುಣ್ಯ ಪುರುಷ ಬಲಮೂಗಿನ ಪಿಂಗಳ ಮಾರ್ಗದಿಂದ ಹೊರಬಿದ್ದ ಜೀವವು ಬ್ರಹ್ಮಲೋಕವನ್ನು ಸೇರಿ ಬ್ರಹ್ಮನೊಡನೆ ಮುಕ್ತನಾಗುವನು. ಈ ಪ್ರಕಾರ ದೇವಮಾರ್ಗ, ಮುಕ್ತಿ ಮಾರ್ಗ, ಅರ್ಚಿರಾದಿ ಮಾರ್ಗದ ದಿವಸಗಳ ವಿವರ — ಉತ್ತರಾಯಣ, ಶುಕ್ಲ

ಪಕ್ಷ, ಹಗಲು ಹುಣ್ಣಿಮೆ ಮೊದಲಾದ ದಿವಸಗಳು. ಇನ್ನು ಯೋಗಾದಿ ಗಳನ್ನು ಡಂಭಾರ್ಥವಾಗಿ ಫಲಾಸೆಯಿಂದ ಮಾಡಿದವರಿಗೆ ಎಡಮೂಗಿನ ಈಡಾನಾಡೀ ಮಾರ್ಗವಾಗಿ ಹೊರಬಿದ್ದ ಜೀವನು ಸ್ವರ್ಗ ನರಕಾದಿಗಳ ನನುಭವಿಸಿ ಮತ್ತೆ ಪುನರ್ಜನ್ಮ ಹೊಂದುವನು. ಇದಕ್ಕೆ ಪಿತೃಯಾನ ವೆಂಬುವರು. ಈ ಮಾರ್ಗದ ದಿವಸಗಳ ವಿವರ — ದಕ್ಷಿಣಾಯನ ಕೃಷ್ಣಪಕ್ಷ ರಾತ್ರಿ ಅಮಾವಾಸ್ಯೆ – ಇವೇ ಪಿತೃಯಾನದ ದಿವಸಗಳು. ಇನ್ನು—

ಮಹಾದೇವರನ್ನೇ ಸಗುಣ ನಿರ್ಗುಣ ರೂಪಾರ್ಚನೆಯನ್ನು ವಿಶೇ ಷವಾದ ಭಕ್ತಿಯಿಂದಾಚರಿಸಿದ ಕಾರಣ ಆ ಮಹಿಮನು ಅಂತ್ಯ ಕಾಲ ದಲ್ಲಿ ಸುಷುಮ್ನ ನಾಡೀ ಮಾರ್ಗವಾಗಿ ಹೊರಬಿದ್ದು ಬ್ರಹ್ಮರಂಧ್ರಂ ಗೊಂಡು ಅಜಾತ ಮರಣ ಪರಬ್ರಹ್ಮಾಕಾರಿಯಾಗುವನು. ಇದು ವೇದಾನುಶಾಸನವು.

## ಪಿಂಡಾಂಡ–ಬ್ರಹ್ಮಾಂಡ

ಇನ್ನು ಮಹಾ ಪುರುಷನಿಂದ ಕಲ್ಪಿತವಾದ ಪಿಂಡಾಂಡ ಬ್ರಹ್ಮಾಂಡ ಗಳಿಗೆ ಅಭೇಧವು ಹ್ಯಾಗಂದಡೆ– ನಾಶಿಕಾಗ್ರ ಪ್ರದೇಶ ಪೂರ್ವ ದಿಕ್ಕಿನಲ್ಲಿ ಇಂದ್ರಲೋಕ. ಕಣ್ಣಿನಲ್ಲಿ ತೇಜೋವತಿಪುರ. ಬಲಕಿವಿಯಲ್ಲಿ ಯಮ ಪುರ, ಬೆನ್ನಿನಲ್ಲಿ ವರುಣನಗರ, ಕಂಠದಲ್ಲಿ ವಾಯುನಗರ. ಎಡದ ಕಿವಿ ಉತ್ತರ ದಿಕ್ಕಿನ ವಾಮದಲ್ಲಿ ಕುಬೇರನ ಪಟ್ಟಣ. ಎಡದ ಕಣ್ಣಿನಲ್ಲಿ ಶಿವ ಲೋಕ, ಶಿರಸ್ಸಿನಲ್ಲಿ ಬ್ರಹ್ಮಲೋಕ. ಎರಡು ಪಾದಗಳಲ್ಲಿ ಆದಿಶೇಷ· ಜೀವನಲ್ಲಿ ಕಾಲಾಗ್ನಿ ರುದ್ರಲೋಕ. ಅಂಗಾಲು ಅತಳಲೋಕ. ಹಿಮ್ಮಡ ವಿತಳ, ಪಾದದ ಸಂದು ಸುತಳ, ಪಕ್ಕೆಗಳು ತಳಾತಳ, ಮೊಣ ಕಾಲು ರಸಾತಳ, ತೊಡೆಗಳು ಮಹಾತಳ, ಕಟಿ (ನಡು) ಪಾತಾಳ – ಇವು **ಸಪ್ತ ಪಾತಾಳ ಲೋಕಗಳು.**

ಇನ್ನು ಆಧಾರ ಚಕ್ರಸ್ಥನಾದ ಶೇಷನು ಹೆಡೆ ಎತ್ತಿಕೊಂಡು ನಾಶಿ ಕಾಗ್ರದ ಬ್ರಹ್ಮ ರಂಧ್ರದಲ್ಲಿಟ್ಟುಕೊಂಡು ಪಾತಾಳಲೋಕ ದೊರೆಯಾಗಿರು

ವನು. ಅದೇ ಘೋರ ನರಕವೆನಿಸುವದು. ಸೂರ್ಯ ಮಂಡಲದಿಂದ ದೈವ ಮಂಡಲದತನಕ ಸ್ವರ್ಗ, ಹೊಕ್ಕಳು ಬದಿಯಲ್ಲಿ ಭೂಲೋಕ, ಕುಕ್ಷಿಯ ಬದಿಯಲ್ಲಿ ಭುವರ್ಲೋಕ, ಹೃದಯದಲ್ಲಿ ಸುವರ್ಲೋಕ, ಎದೆಯಲ್ಲಿ ಮಹಾಲೋಕ, ಕಂಠದಲ್ಲಿ ಜನಲೋಕ, ಕಣ್ಣು ಬೊಂಬೆಗಳಲ್ಲಿ ಮರ್ತ್ಯಲೋಕ, ಶಿರಸ್ಸಿನಲ್ಲಿ ಬ್ರಹ್ಮಲೋಕ – ಈ ಪ್ರಕಾರ ಬ್ರಹ್ಮಾಂಡ ಪಿಂಡಾಂಡದಲ್ಲಿದ್ದೀತು.

## ಚತುರ್ದಶ ನಾಡಿಗಳು ‡

ಸುಷುಮ್ನ, ಈಡಾ, ಪಿಂಗಳ, ಗಾಂಧಾರಿ, ಹಸ್ತಿಜಿಹ್ವೆ, ಪೂಷಾ, ಪಯಸ್ವಿನಿ, ಲಕುಹ, ಅಲಂಬು, ಶಂಕಿನಿ – ಈ ಹತ್ತು ನಾಡಿಗಳಲ್ಲದೆ, ಸರಸ್ವತಿ, ವಿಶ್ವೋದ್ಧತಿ, ಬ್ರಾಹ್ಮೀ, ವಾರುಣಿ ಎಂಬ ನಾಲ್ಕು ಪ್ರಮುಖ ನಾಡಿಗಳುಂಟು. ಅವುಗಳ ಸ್ಥಾನ ಮತ್ತು ದೇವತೆಗಳ ವಿವರ — ಸರಸ್ವತಿಗೆ ಜಿಹ್ವೆ ಸ್ಥಾನ, ವಿರಾಟ ಅಧಿದೇವತೆ, ವಿಶ್ವೋದ್ಧತಿಗೆ ಜಠರಸ್ಥಾನ, ಪಾವಕ ಅಧಿದೇವತೆ, ಬಾಹ್ಮೀಗೆ ವಾಮಪಾದಾಂಗುಷ್ಠ ಸ್ಥಾನ, ದಾರುಣನು ಅಧಿದೇವತೆ, ವಾರುಣಿಕೆಯು ಸರ್ವಾಂಗಗಾಮಿನಿಯು, ವಾಯು ಅಧಿದೇವತೆ. ಇವುಗಳ ಅನುಷ್ಠಾನ ಉಪದೇಶ ಕ್ರಮವನ್ನು ಗುರೂಪದೇಶದಿಂದರಿವುದು. ಇನ್ನು—

## ಚತುರ್ದಶ ವಾಯುಗಳ ವಿವರ

ಪ್ರಾಣ ಅಪಾನ ವ್ಯಾನ ಉದಾನ ಸಮಾನ ನಾಗ ಕೂರ್ಮ ಕ್ರಕರ ದೇವದತ್ತ ಧನಂಜಯ - ಇವಲ್ಲದೆ ಇನ್ನು ನಾಲ್ಕು ವಾಯುಗಳು ವಜ್ರನು, ಮುಖ್ಯನು, ಅಂತರ್ಯಾಮಿ, ಪ್ರಪಂಚಕನು - ಈ ನಾಲ್ಕು ವಾಯುಗಳು ನಡೆಯುವ ಕ್ರಮವು ಹೀಗೆ. ಪ್ರಾಣವಾಯುವು ನಾಡಿಗಳೆಲ್ಲಕ್ಕೂ ಸುತ್ತಿ ಮೂಲಾಧಾರದಲ್ಲಿ ಓಂ, ಮಣಿಪೂರಕದಲ್ಲಿ ಹಂ ಎಂದು ತಾಕಿ ಈಡಾ ಪಿಂಗಳದಲ್ಲಿ ಸಾರಿ ಕಪಾಲದಲ್ಲಿ ಸುತ್ತಿ ಅಲ್ಲಿಂದ ಮೂಗಿನಲ್ಲಿ ೧೨ ಅಂಗುಲ ಪ್ರಮಾಣ ಹೊರಬಿದ್ದು ನಾಲ್ಕಂಗುಲ ಲಯವಾಗಿ

‡ ದಶನಾಡಿಗಳ ವಿಸ್ತೃತ ವಿವರ ೧೬೬ನೆಯ ಪುಟದಲ್ಲಿದೆ.

೮ ಅಂಗುಲ ಊರ್ಧ್ವವಾಗಿ ತಿರುಗಿ ಒಳಗೆ ಹೋಗುವದು. ಇದು ಕಣ್ಣು ಬೊಂಬೆಗಳ ನಡುವೆ ಲಯವಾಗುವದು. ಹೀಗೆ ೬೦ ಘಳಿಗೆಗೆ ೨೧೬೦೦ ಉಶ್ವಾಸಗಳು ದಿನದಿನ ನಡೆಯುವವು. ೭೨೦೦೦ ಉಶ್ವಾಸಗಳು ನಷ್ಟವಾಗುವವು ೧೪೦೦೦ ಉಶ್ವಾಸಗಳು ನಿಲ್ಲುವವು.

ಈ ಪರಿಯಿಂದ ಪ್ರತಿದಿನವೂ ಮನುಷ್ಯ ಮೊದಲಾದ ಸಕಲ ಜಂತುಗಳ ಆಯುಷ್ಯ ಕ್ಷೀಣವಾಗುವುದು. ಇನ್ನು—

## * ದಶ ವಾಯುಗಳ ಸ್ಥಾನ – ಕಾರ್ಯಗಳು

ಪ್ರಾಣವಾಯು ಹೃದಯಸ್ಥಾನದಲ್ಲಿದ್ದು ಉಶ್ವಾಸ–ನಿಶ್ವಾಸಗಳಂ ಮಾಡಿ ಅನ್ನ ಜೀರ್ಣಿಕರಣಮಂ ಮಾಡಿಸುತ್ತಿಹುದು. ಅಪಾನವಾಯು ಗುದಸ್ಥಾನದಲ್ಲಿದ್ದು ಮಲಮೂತ್ರ ವಿಸರ್ಜನೆಗೈಸಿ ಅನ್ನ ರಸವಂ ವ್ಯಾಪ್ತಿಯಂ ಮಾಡಿಸುವದು. ವ್ಯಾನವಾಯು ಸರ್ವ ಸಂಧಿಯಲ್ಲಿದ್ದು ಅನ್ನಪಾನಮಂ ತುಂಬಿಸುತ್ತಿಹುದು. ಉದಾನವಾಯು ಕಂಠಸ್ಥಾನದಲ್ಲಿದ್ದು ಅನ್ನರಸ ಆಹಾರ ಸ್ಥಾಪನಂಗೈಯ್ಯುತ್ತಿರುವುದು. ಸಮಾನವಾಯು ನಾಭಿ ಸ್ಥಾನದಲ್ಲಿದ್ದು ಅನ್ನ ರಸಮಂ ಎಲ್ಲ ರೋಮನಾಳಂಗಳಿಗೆ ಹಂಚಿಕ್ಕುತ್ತಿಹುದು. ನಾಗವಾಯು ರೋಮನಾಳಗಳಲ್ಲಿದ್ದು ಚಲನೆಯಿಲ್ಲದೆ ಆಡಿಸುತ್ತಿಹುದು. ಕೂರ್ಮವಾಯು ಉದರ ಲಲಾಟದಲ್ಲಿದ್ದು ನೇತ್ರದಲ್ಲಿ ಉನ್ಮೀಲನಮಂ ಮಾಡಿಸುತ್ತಿಹುದು. ಕ್ರಕರವಾಯು ನಾಸಿಕಾಗ್ರದಲ್ಲಿರ್ದು ಗಮನಾಗಮನಂಗಳಂ ಮಾಡಿಸುತ್ತಿಹುದು. ದೇವದತ್ತವಾಯು ಗುಹ್ಯ ಕಟಿಸ್ಥಾನದಲ್ಲಿರ್ದು ಮರಣ ಕಾಲಕ್ಕೆ ನಿರ್ಘೋಷಮಪ್ಪುದು.

## ಇನ್ನುಳಿದ ನಾಲ್ಕು ವಾಯುಗಳು

**ವಜ್ರವಾಯು**— ೪೮ ಎಲುವುಳ್ಳ ಕಾಲಿನಲ್ಲಿ ಸೇರಿದ್ದು ದೇಹವು ಸುಕ್ಕಿಹೋದ ಹಾಗೆ ಮಾಡುವದು.

**ಮುಖ್ಯವಾಯು**— ಎಲುವುಗಳು ಕೂಡಿದ ದಿಕ್ಕಿನಲ್ಲಿ ಭುಜಗಳಲ್ಲಿ ನಿಂತು ತತ್ತ್ವಗಳನ್ನೆಲ್ಲ ಒಂದು ಮುಖಕ್ಕೆ ತರುವದು.

---

* ಈ ದಶವಾಯುಗಳ ಸ್ಥಾನ, ಧರ್ಮ, ಕರ್ಮ, ವರ್ಣಗಳ ಬಗ್ಗೆ ವಿಶೇಷ ವಿವರಗಳು ೧೩ನೆಯ ಪುಟದಲ್ಲಿ ಅಚ್ಚಾಗಿವೆ.

**ಅಂತರ್ಯಾಮಿ ವಾಯು**— ಪುರುಷಗೆ ವಾಹನವಾಗಿ ನಿಂತು ಪ್ರಾಣವಾಯುವಿನ ರಕ್ಷಣೆ ಮಾಡುವದು.

**ಪ್ರಪಂಚವಾಯು**— ಶರೀರಕ್ಕೆ ಬೇರಾಗಿ ದೇಹಸಂಚಲನವೆಸಗುವದು

ಇವೆಲ್ಲವೂ ಅಂಗವಗಲಿದರೆ ಕೆಟ್ಟುಹೋಗುವವು.

## ಸಪ್ತ ಧಾತುಗಳು

ರಸ, ರುಧಿರ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜೆ, ಶುಕ್ಲ – ಇಂತಿವು ಸಪ್ತಧಾತುಗಳು. (ವಿವರಗಳಿಗೆ ೨೨ನೆಯ ಪುಟ ನೋಡಬಹುದು )

## ಪಂಚಕೋಶಗಳು

ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ – ಇವು ಪಂಚಕೋಶಗಳು. (ವಿವರಗಳು ೨೫ನೆಯ ಪುಟದಲ್ಲಿ.)

## ಪಂಚಾವಸ್ಥೆಗಳು

ಜಾಗ್ರ, ಸ್ವಪ್ನ, ಸುಷುಪ್ತಿ, ತೂರ್ಯ, ತೂರ್ಯಾತೀತ – ಪಂಚಾವಸ್ಥೆಗಳು. ವಿವರ :–

**೧. ಜಾಗ್ರಾವಸ್ಥೆ**— ಪಂಚಭೂತ, ದಶೇಂದ್ರಿಯ, ಪ್ರಾಣಪಂಚಕ, ಅಂತಃಕರಣ, ಚತುಷ್ಟಯವೆಂಬ ೨೪ ತತ್ತ್ವಾತ್ಮಕ ಸ್ಥೂಲ ಶರೀರದಲ್ಲಿ, ಸತ್ವಗುಣ, ಅಕಾರಾಕ್ಷರ, ವಿಷ್ಣು ಅಧಿದೇವತೆ, ನೇತ್ರಸ್ಥಾನ, ಹೃದಯಕಮಲದ ಅಷ್ಟಗತಿಗಳಿಂದ ವಿಶ್ವ ಜೀವನು, ವಿರಾಟ ಸಂಜ್ಞಿಕನಾದ ಈಶ್ವರನು ಒಂದಾಗಿ ವನಿತಾದಿ ವಿಷಯ ಭೋಗಮಂ ಸಕಲ ಕರಣ ಸಾಮಗ್ರಿಯಿಂದ ಅನುಭವಿಸುವುದು.

**೨. ಸ್ವಪ್ನಾವಸ್ಥೆ**— ಲೋಚನಾಗ್ರದಲ್ಲಿದ್ದಾತ್ಮನು, ಗಳಸ್ಥಾನಕ್ಕಿಳಿದು ಬಂದಾಗ ಕನಸು ಕಾಂಬುದೇ ಸ್ವಪ್ನ. ಇಪ್ಪತ್ತುನಾಲ್ಕು ತತ್ತ್ವಗಳೊಳಗೆ ಸ್ಥೂಲಭೂತ ಐದನ್ನು, ಚಿತ್ತ ಬುದ್ಧಿಗಳೆರಡನ್ನು ಬಿಟ್ಟು ಮಿಕ್ಕ ಹದಿನೇಳು ತತ್ತ್ವ ಸಮಷ್ಟಿಯಾಗಿ ನಿಂದು ಸ್ಥೂಲ ತನುವಿನ ಮರವೇ ಸೂಕ್ಷ್ಮ ತನುವಿನೊಡನೆ ಕೂಡಿಕೊಂಡು ದೃಶ್ಯಾದೃಶ್ಯವಾದ

ಕಲ್ಪಿತ ರೂಪಿನ ಕಾಣಿಕೆಯಾಗಿಪ್ಪ ಸುಖದುಃಖ ಮೋಹ ರೂಪವಾದ ಸ್ವಪ್ನಂಗಳ ಕಾಣುವುದೇ ಸ್ವಪ್ನಾವಸ್ಥೆ. ಇಲ್ಲಿ ಸೂಕ್ಷ್ಮತನು, ರಜೋಗುಣ, ಉಕಾರಾಕ್ಷರ, ಬ್ರಹ್ಮನಧಿದೇವತೆ, ಕಂಠಸ್ಥಾನ, ಹೃತ್ಕಮಲ ಕರ್ಣಿಕಾಗತಿಗಳಿಂದ ತೈಜಸ ಜೀವನು, ಸೂತ್ರಾತ್ಮ ಸಂಜ್ಞಿತನಾದ ಈಶ್ವರನು ಒಂದಾಗಿ ಜಾಗ್ರದ್ವಾಸನಾ ವಿಷಯ ಭೋಗವಂ ಮನವೆಂಬ ಕರಣದಿಂದ ಅನುಭವಿಸುವದು.

**೩. ಸುಷುಪ್ತಾವಸ್ಥೆ**— ಸಮಸ್ತ ಕಾರ್ಯವನೊಳಕೊಂಡು ತತ್ಸಂಸಾರ ಸಹಿತವಾಗಿ ಆತ್ಮಾಶ್ರಯದಲ್ಲಿ ನಿರವಸ್ಥೆಯಿಂದಿರ್ಪ ಪ್ರಕೃತಿ ರೂಪ ಕಾರಣ ದೇಹದಲ್ಲಿ ತಮೋಗುಣ, ಮಕಾರಾಕ್ಷರ, ರುದ್ರನಧಿದೇವತೆ, ಹೃತ್ಕಮಲ ಕರ್ಣಿಕಾ ಮಧ್ಯ ಗತಿಗಳಿಂದ ಪ್ರಾಜ್ಞ ಜೀವನು, ಅಂತರ್ಯಾಮಿಯಾದ ಈಶ್ವರನು ಒಂದಾಗಿ ಬ್ರಹ್ಮಾನಂದ ವಿಷಯ ಭೋಗವಂ ಮಾಯಾ ವೃತ್ತಿಯೆಂಬ ಸೂಕ್ಷ್ಮ ಕರಣದಿಂದ ಅನುಭವಿಸುವುದು.

**೪. ತೂರ್ಯಾವಸ್ಥೆ**— ಮರಣಾವಸ್ಥೆಯಂ ಪಡೆದಂತೆ ವ್ಯಾಪಾರಶೂನ್ಯನಾಗಿದ್ದರೂ, ನಿತ್ಯನಾಗಿ ಮನೋವ್ಯಾಪಾರವಿಲ್ಲದೆಯೂ, ಶಾಂತನಾಗಿ ಅಹಂಕಾರ ಮಮಕಾರವಿಲ್ಲದೆಯೂ, ಸುಖದುಃಖ ಮೋಹಾತ್ಮಕ ಗುಣತ್ರಯದ ವಾಸನೆ ಇಲ್ಲದೆಯೂ ಹೃದಯಾಸ್ಥಾನವನ್ನು ಮೀರಿದುದೇ ತೂರ್ಯಾವಸ್ಥೆಯು.

**೫. ತೂರ್ಯಾತೀತಾವಸ್ಥೆ— ದೇಹದೊಡಗೂಡಿದರೂ ನಿರ್ಲೇಪವಾಗಿರುವ ಜೀವನ್ಮುಕ್ತ ಸ್ಥಿತಿಯು ತೂರ್ಯಾತೀತಾವಸ್ಥೆಯು.**

ಮಾನವರಿಗೆ ಮೊದಲಿನ ಮೂರು ಅವಸ್ಥೆಗಳು ತಮ್ಮಿಂದ ತಾವೇ ತೋರಿ ಸಂಸಾರಾತ್ಮಕವಾಗಿಹವು. ಮಿಕ್ಕವೆರಡವಸ್ಥೆಗಳು ಯೋಗಾಭ್ಯಾಸದಿಂದ ಜನಿಸಿ ಮುಕ್ತಿಸಾಧನಗಳಾಗಿರುವವು. ಈ ಅವಸ್ಥೆಗಳಂ ಗುರು ಕೃಪೆಯಿಂದರಿದು ಜೀವನ್ಮುಕ್ತರಾಗುವದು. ಇನ್ನು—

## ಮೂರು ನದಿಗಳ ವಿವರ

**ಕಣ್ಣಿನ ನೀಲ ಮಧ್ಯದಲ್ಲಿರುವ ಉದಕವೇ ಗಂಗೆ. ಆ ನೀಲ**

ಮಧ್ಯದಲ್ಲಿರುವ ವಿದ್ಯುಲ್ಲೇಖೆಯೇ **ಸರಸ್ವತಿ.** ಆ ಶಿಖಾ ಮಧ್ಯದಲ್ಲಿರುವ ಅಂಗುಷ್ಠ ಮಾತ್ರ ಪುರುಷನ ಕಳೆಯೇ **ಯಮುನೆ.**

ಈ ನೀಲತೋಯ ಮಧ್ಯಸ್ತವಾದ ಮಂಡಲತ್ರಯಗಳ ಮೇಲಿರುವ ವಿದ್ಯುಲ್ಲೇಖೆಯೇ ಷೋಡಶ ಕಳಾಸಂಪೂರ್ಣಲಿಂಗವು. ಅದೇ ಸರ್ವಸಾಕ್ಷಿ ಸರ್ವ ಕಾರಣವಾದ ವಿರೂಪಾಕ್ಷನ ಸ್ಥಾನ. ಅದೇ ಮೇರು ಶಿಖರ. ಅದೇ ವೈಕುಂಠ ಕೈಲಾಸಗಳ ಸ್ಥಾನ. ಇದೇ ತಾರಕ ಸ್ವರೂಪವಾದ ಲಕ್ಷಸ್ಥಾನ. ಇದೇ ಸಕಲ ಜಗದ್ಭರಿತ ದಿವ್ಯಪ್ರಕಾಶ. ಇದು ಅಮನಸ್ಕ ರಾಜಯೋಗ ಫಲಸಿದ್ಧಿಯು.

ಶ್ಲೋ|| ಆರಾಧಯಾಮಿ ಮಣಿಸನ್ನಿಭಮಾತ್ಮಲಿಂಗಂ
ಕಾಯ ಸ್ವರೂಪ ಹೃದಯಾಂಬುಜ ಸನ್ನಿವಿಷ್ಟಂ
ಶ್ರದ್ಧಾನದೀ ವಿಮಲಚಿತ್ತ ಜಲಾಭಿಷೇಕಂ
ನಿತ್ಯಂ ಸಮಾಧಿ ಕುಸುಮಂಚ ಭವದೂರಣಾಯ

ಹಿಂದೆ ಹೇಳಿದ ಮಂತ್ರ, ಲಯ, ಹಠ, ರಾಜಾದಿಯೋಗ ಸ್ಥಾಪನೆಯು ಕಷ್ಟತಮವೆಂದು ಶರಣರು ಶಿವಯೋಗವನ್ನಂಗೀಕರಿಸಿದರು.

## ಶಿವಯೋಗ ಲಕ್ಷಣ

ಬಳಿಕಾ ಯೋಗವೆಂತೆನೆ – ಶಿವಚೈತನ್ಯಕ್ಕಿಂತಲೂ ಜೀವಚೈತನ್ಯವು ಬೇರೆಯೆಂದರಿತಿರುವ, ಅವಿದ್ಯೆಯ ಪಾಶಮಂ ಪರಿಹರಿಸಲು ಶಿವಜೀವಯೋಗವೆಂಬೈಕ್ಯ ಜ್ಞಾನಸಿದ್ಧಿಯಂ ಪಡೆಯಲೋಸುಗ ಶಿವಲಿಂಗದೊಳು ನಿರ್ಭೇದವಾದ ಐಕ್ಯವೇ **ಶಿವಯೋಗ**ವೆಂದರಿವುದು ತತ್ತ್ವಜ್ಞಾನಿಗಳು.

ಎಂಬಲ್ಲಿಗೆ ಶ್ರೀ ಚೆನ್ನಬಸವೇಶ್ವರದೇವರು ನಿರೂಪಿಸಿದ
**ಘಟಚಕ್ರ**ವು ಸಮಾಪ್ತಂ. ಮಂಗಳ ಮಹಾ ಶ್ರೀ ಶ್ರೀ.

---

*

# ಕುಂಡಲಿಯ ಉದ್ಧರಣೆ ನಿರ್ದೇಶ

ಸಮಸ್ತ ವಿಶ್ವವನ್ನುಳ್ಳ ಪಶು-ಪ್ರಾಣಿಗಳನ್ನು ಮುರಿದು ನುಂಗುತ್ತಿಹುದು ಕಾಲವು. ಆ ಕಾಲ ವ್ಯಾಘ್ರನೆಂಬುದೆ ಹುಲಿಯೆಂಬ ಶಬ್ದಕ್ಕೆ ಅರ್ಥ. ಆ ಕಾಲ ವ್ಯಾಘ್ರನನೆ ಶಿರಪ್ರಧಾನವ ಮಾಡಿಕೊಂಡು ಮಾಯೆಯೆಂಬ ಹರಿಣಿ ಇಪ್ಪಳು. ಈ ಮಾಯೆಯೆಂಬ ಹರಿಣಿಯನೆ ಸಿರ ಪ್ರಧಾನವ ಮಾಡಿಕೊಂಡು ಇಪ್ಪ ತತ್ಕಾಲ ವ್ಯಾಘ್ರನು. ಅಂಥ ಕಾಲ ವ್ಯಾಘ್ರನ ಮುಖದಿಂದ ಮಾಯೆ ಲೋಕವ ಸಂಹರಿಸುತ್ತಿಪ್ಪಳು. ಆ ಕಾಲವ್ಯಾಘ್ರನು ಮಾಯೆಯ ಮುಖದಿಂದ ಲೋಕವ ಸಂಹರಿಸುತ್ತಿಪ್ಪುದು. ಹರಿಣಿಯೆಂದಡೆ ಮಾಯೆಯಾದ ಪರಿಯೆಂತೆಂದಡೆ – ಹರಿಣಿಯೆಂಬುದು ತಾನು ಅರಣ್ಯ ಪ್ರವೇಶಿಯಾಗಿಪ್ಪುದು. ಸಂಚಲ್ಯ ಗುಣಯುತೆಯಾಗಿರ್ಪುದು. ವೃಥಾ ಭ್ರಾಂತು ಲಕ್ಷಣ ಸಂಬಂಧಿಯಾಗಿರ್ಪುದು. ಇತರ ದೃಷ್ಟಿಗೆ ಸ್ವರೂಪಿಣಿಯಾಗಿರ್ಪುದು. ತೃಣಾಂಶು ಗ್ರಾಸಿಯಾಗಿರ್ಪುದು. ಆ ಹಾಂಗೆ ಮಾಯೆಯು ಭವಾರಣ್ಯ ಪ್ರವೇಶಿಯಾಗಿಯೂ, ಸಂಚಲ ಗುಣಯುತೆ ಸಂಬಂಧಿಯಾಗಿಯೂ ವೃತಾ, ಭ್ರಾಂತು, ಲಕ್ಷಣೆಯಾಗಿಯೂ, ಭಿನ್ನ ದೃಷ್ಟಿಗೆ ಸ್ವರೂಪಿಣಿಯಾಗಿಯೂ, ತೃಣ ಪತ್ತಿಪತ್ತಾಗುತ್ತಿಹ ಸಂಸಾರವನು ವಿಷಯ ರಸೋದಕವನು ಕೊಂಡಿಪ್ಪಳಾಗಿ ಹರಿಣಿಯಂದಡಂ ಮಾಯೆಯಂದಡಂ ಏಕಾರ್ಥ. ಈ ಮಾಯೆಗೆ ದುರ್ವಿವೇಕವೆಂಬ ಶಿರಸ್ಸು, ದುರ್ವಾಸನ ಸ್ವೀಕಾರವೆಂಬ ನಾಶಿಕ, ಅಮುಕ್ತಿಯೇ ಮೂಗುತಿ, ಅಪೇಕ್ಷೆಯೇ ಜಿಹ್ವೆ, ಸಂಕಲ್ಪ ವಿಕಲ್ಪವೆಂಬವೇ ದಂತಪಂಕ್ತಿಗಳು, ಜ್ಞಾನಾಜ್ಞಾನವೆಂಬವೇ ನಯನಗಳು, ಶೃತ ಅಶೃತವೆಂಬವೆರಡು ಕರ್ಣಂಗಳು, ಅಹಂಕಾರ ಮಮಕಾರವೆಂಬೆರಡು ಕೋಡುಗಳು, ಅಧೃಢವೆಂಬ ಕೊರಳು, ಕುಚಿತ್ತ, ಕುಬುದ್ಧಿ, ಕುಮನ, ಕುಭಾವ ಈ ನಾಲ್ಕು ಹಸ್ತಂಗಳು, ತಥ್ಯವನೆ ಮಿಥ್ಯವ ಮಾಡಿ, ಮಿಥ್ಯವನೆ ತಥ್ಯವ ಮಾಡುವುದಕ್ಕೆ ಮೂಲಹಂಕಾರವೇ ಕಂಠ, ಈ ದೇಹವೇ ವಾಲೆ, ಅವ್ಯೈತವ ವಿಷವ ತುಂಬುವುದಕ್ಕೆ ಪಾತ್ರ ಅಪಾತ್ರವೆಂಬ ಕುಂಭಂಗಳು, ಸಂಸಾರ ವಿಷಯರಸದ ಘಟ ಸ್ವರೂಪಮಪ್ಪ ಸ್ತನಂಗಳು,

ಸಂಸಾರ ಘಾತವ ಕಾಣಬಾರದೆಂಬುದೀಗ ಗರ್ಭವೆಂಬ ಶಬ್ದಕ್ಕೆ ಅರ್ಥ, ಸಕಲ ಪ್ರಪಂಚವೆಂಬುದೆ ನಡು, ದುಶ್ಚರಿತ್ರವೆಂಬ ಚರಣ, ಕ್ರೋಧವೆಂಬ ಹುಲಿ, ಮೋಹವೆಂಬ ಸಿಂಹ, ಜೀವವೆಂಬ ಪಶು, ಅಧರ್ಮ, ಅಜ್ಞಾನ, ಅನವೈರಾಗ್ಯ ಅನೈಶ್ವರ್ಯ – ಈ ನಾಲ್ಕು ಚರಣಂಗಳು. ಧರ್ಮಾರ್ಥ ಕಾಮ ಮೋಕ್ಷ – ಈ ನಾಲ್ಕು ಸ್ತನಂಗಳು, ಆ ಸ್ತನಂಗಳನುಂಬ ಸಕಲ ಜೀವರು. ಆ ಶಕ್ತಿಗೆ ಬಾಲವಾಗಿ ಒಪ್ಪುವ ಕುಂಡಲಿಯ ಸರ್ಪ ಸ್ವರೂಪವೆಂತೆಂದಡೆ– ತಲೆ ಹದಿನಾಲ್ಕು, ವಡಲಾರು, ಬಾಲವ ಬ್ರಹ್ಮ ಲೋಕಕ್ಕೆ ಇಟ್ಟು, ಶಿರವ ಹರಿಯ ದ್ವಾರದಲ್ಲಿರಿಸಿ, ಕಾಳಕೂಟ ವಿಷವನೆ ಉಗುಳಿ ಶಿವಶರಣರಲ್ಲದವರನೆಲ್ಲರ ಸುಡುವುತಿಪ್ಪುದು ಚಾಪದಟ್ಟಿನ ಹಾಂಗೆ, ದಹನಲೋಕನಾಕಾರದ ಹಾಂಗೆ. ಸಪ್ತ ಕುಟಿಲಾಕಾರವಾಗಿ ಅಜ್ಞ ಪ್ರಕೃತಿ ಸ್ವರೂಪವಾಗಿ ಸಮಸ್ತ ಜೀವರುಗಳಿಗೆ ಉತ್ಪತ್ತಿ ಕಾರಣ ವಾಗಿರ್ಪುದು. ಅಜ್ಞಾನವೇ ಆಲಗಾಗಿ ಈ ಸರ್ಪನ ಆಳಕಿಸಿಕೊಂಡಿ ಹುದು. ಕಾಲಮೃತ್ಯು, ಅಪಮೃತ್ಯುವೆಂಬೆರಡು ಶಿರಸ್ಸುಗಳು. ವ್ಯಾಧಿ ರೂಪು ಮರಣ ಕಾರಣವಾಗಿಹುದು. ಅಧೋಕುಂಡಲಿ ಉದ್ಧರಣೆ ವಾಚ್ಯ ಸಂಪೂರ್ಣ.

## ಊರ್ಧ್ವ ಕುಂಡಲಿ ಉದ್ಧರಣೆ

ಆ ಶಕ್ತಿಯೇ ಭಕ್ತಿ ಶಕ್ತಿಯಾದಲ್ಲಿ, ಮುಕ್ತಾಂಗನೆಯೆನಿಸಿತ್ತು. ಆ ಮುಕ್ತಾಂಗನೆಯ ಸ್ವರೂಪು ಎಂತೆಂದಡೆ – ವಿವೇಕವೆಂಬ ಶಿರಸ್ಸು, ಸದ್ವಾಸನೆಯೆಂಬ ನಾಸಾಪುಟ, ಮುಕ್ತಿಯೆಂಬ ನಾಮವುಳ್ಳ ಮುಕ್ತಿಯೇ ಮೂಗುತಿಯು, ಚಿದಾಪೇಕ್ಷೆಯೆಂಬ ಜಿಹ್ವೆ, ನಿರ್ವಿಕಲ್ಪ ಸುವಿಕಲ್ಪವೆಂಬ ದಂತಗಳು. ಜ್ಞಾನ ಸುಜ್ಞಾನವೆಂಬೆರಡು ನಯನಗಳು, ನಿರ್ಮಮಕಾರ ನಿರಹಂಕಾರವೆಂಬೆರಡು ಕೋಡುಗಳು, ಬೋಧೆ ಸದ್ಬೋಧೆಗಳೆಂಬ ಎರಡು ಕರ್ಣಂಗಳು, ಸದ್ವೃಢವೆಂಬ ಕೊರಳು, ಸುಚಿತ್ತ, ಸುಬುದ್ಧಿ, ಭಾವ, ಸದ್ಭಾವವೆಂಬ ಈ ನಾಲ್ಕು ಹಸ್ತಂಗಳು, ಪರಮಾಮೃತ ಚಿದಾಮೃತವ ತುಂಬುವುದಕ್ಕೆ ಪಾತ್ರ ಸತ್ಪಾತ್ರವೆಂಬ ಕುಂಭ, ಸುಜ್ಞಾನವೆಂಬ ಕಂಠ, ಆಚಾರವೆಂಬ ವಾಲೆ, ಭಕ್ತಿರಸಾಮೃತ ತುಂಬಿದ ಸ್ತನಂಗಳು, ಎಲ್ಲಕ್ಕೂ

ಆಶ್ರಯವಾದ ಚಿದ್ಗರ್ಭ, ಅಂಗ ಲಿಂಗವೆಂಬೆರಡನು ಸಂಬಂಧಿಸಿದ ಶ್ರದ್ಧೆ ಯೇ ನಡು, ಸಚ್ಚರಿತ್ರವೆಂಬ ಚರಣ, ನಿಃಕ್ರೋಧ ನಿರ್ದ್ರೋಹ ಕಾಮ ಧೇನುವೆಂಬಿವು ವಾಹನಂಗಳು, ಕ್ರಿಯಾಪಾದ, ಚರ್ಯಾಪಾದ, ಯೋಗ ಪಾದ,ಜ್ಞಾನಪಾದ, ಈ ನಾಲ್ಕು ಪಾದಂಗಳು, ಶಿವಧರ್ಮ, ಗುರುಲಿಂಗ ಪಾದೋದಕ,ಪ್ರಸಾದ– ಈ ನಾಲ್ಕು ಸ್ತನಂಗಳು. ಈ ಪರಮಾಮೃತವ ಸ್ವೀಕರಿಸುವ ಶರಣನಾಗಿ, ಆ ಶರಣನ ಶಿವಜ್ಞಾನಾಗ್ನಿಗೆ ಕುಂಡಲಿಯ ಸರ್ಪನು ಅಂಜಿ ಅಧೋಮುಖವಾಗಿ ಇರ್ದುದು, ಊರ್ಧ್ವ ಮುಖವಾಗಿ ಅಗ್ನಿಮಂಡಲದಿಂದ ಸೂರ್ಯಮಂಡಲಕ್ಕೆ ಬಂದು, ಸೂರ್ಯಮಂಡಲ ದಿಂದ ಚಂದ್ರಮಂಡಲಕ್ಕೆ ಬಂದು, ಚಂದ್ರಮಂಡಲದಿಂದ ಆಜ್ಞಾ ಸ್ಥಾನಕ್ಕೆ ಬಂದಲ್ಲಿ ಸತ್ಪ್ರಾಣವ ಸ್ವರೂಪವನೈದಿ ಲಿಂಗಾಂಗ ಸಮರಸವಾ ಯಿತ್ತು. ಎಡಬಲದ ಎರಡು ಶಿರಸ್ಸುಗಳು ವ್ಯಾಧಿರೂಪವೇ ಲಿಂಗಾರ್ಪಿ ತವಾಗಿ ಪ್ರಸಾದವಾಯಿತ್ತು. ಮರಣವಳಿದು ನಿತ್ಯತ್ವವಾಯಿತ್ತು. ಊರ್ಧ್ವ ಕುಂಡಲಿಯ ಶಕ್ತಿಯ ವ್ಯಾಖ್ಯಾನ ಸಮಾಪ್ತಂ. ಮಂಗಳ ಮಹಾ ಶ್ರೀ ಶ್ರೀ.



# ಅಕ್ಕಗಳ ಸೃಷ್ಟಿ ವಚನವು

ಉಡುತಡಿಯೆಂಬ ಪಟ್ಟಣದಲ್ಲಿ ನಿರ್ಮಲ ಸುಮತಿಯರೆಂಬ ಶಿವ ಭಕ್ತೆಯರ ಗರ್ಭದಲ್ಲಿ ಹುಟ್ಟಿ, ತನಗೆ ಮಾನವಿಟ್ಟ ಭವಿಯಾದ ಕೌಶಿಕರಾಯ ನಂ ತ್ಯಜಿಸಿ, ವೈರಾಗ್ಯದಿಂದ ನಿರ್ವಾಣ ಗುಣಶೀಲೆಯರಾಗಿ, ಕಲ್ಯಾಣ ಪಟ್ಟಣಕ್ಕೆ ಬಂದು, ಅಲ್ಲಿ ಬಸವಾದಿ ಪ್ರಮಥಗಣಂಗಳ ದರ್ಶನವಂ ಮಾಡಿ, ಅಲ್ಲಿಂದ ಶ್ರೀಶೈಲಕ್ಕೆ ಹೋಗಿ, ಚನ್ನಮಲ್ಲಿಕಾರ್ಜುನ ಲಿಂಗದ ಕರುಣವಂ ಪಡೆದು, ಅಲ್ಲಿಂದಲ್ಲಮಪ್ರಭುಸ್ವಾಮಿಗಳೆಂಬ ಕದಳಿಯಲ್ಲಿ ನಿರ್ವಯಲಾಗಿ ಕೈಲಾಸಕ್ಕೆ ಹೋದ ಮಹದೇವಿಯಕ್ಕಗಳೆಂಬ ಚಿಚ್ಛಕ್ತಿ ಯರು, ಷಟ್‌ಸ್ಥಲ ಪರಿಕ್ರಮವಿಡಿದುಪದೇಶಿಸಿದೂರ್ಧ್ವಸೃಷ್ಟ್ಯಧೋಸೃಷ್ಟಿ ಗಳ ಕ್ರಮವನ್ನು ಹೇಳುವ ವಚನವು ಮತ್ತಂತುಮಲ್ಲದೆ, ಅಂಗಲಿಂಗೋ ದ್ಭವಂಗಳ ಸ್ವರೂಪವನ್ನು ಹೇಳುವ ವಾಕ್ಯಾನುಭಾವವು.

ಆದಿಯೆಂದರೆ ಶಕ್ತಿತತ್ತ್ವ, ಅನಾದಿಯೆಂಡರೆ ಶಿವತತ್ತ್ವ, ಆ ವಂಶಿಕನಾದಾತ್ಮನೆ ಶಾಶ್ವತನಾದಾತ್ಮನು, ಆ ಶಕ್ತ್ಯಂಶವಾದ ದೇಹವೆ ಅಶಾಶ್ವತವಾದುದು, ಎಂಬ ನಿಲುಕಡೆಯನ್ನು ತಿಳಿಯಲರಿಯದೆ, ಪರ ಬ್ರಹ್ಮವೆಂದು ನುಡಿವಾತ್ಮಂಗೆ ತನುವಿಲ್ಲ, ಕರಣವಿಲ್ಲ, ಇಂದ್ರಿಯ ವಿಷ ಯಂಗಳ ವ್ಯಾಪಾರಂಗಳಿಲ್ಲ. ಆತ್ಮನೆ ಸಾಕ್ಷಾತ್ಪರಬ್ರಹ್ಮವೆಂದು ಗಳಪುವ ವಾಯುಪ್ರಾಣಿಗಳವರು ತಮಗಿಲ್ಲವೆಂದು, ತನುಕರಣೇಂದ್ರಿಯ ವಿಷಯ ಪ್ರಪಂಚಿನಲ್ಲಿ ನುಸುಳಿ ಚರಿಸುವ ಮಿಥ್ಯಾ ಜೀವರುಗಳು ತಾವು, ಆ ಪ್ರಸಿ ದ್ಧವಾದ ಪರಬ್ರಹ್ಮದ ಸಕಲ ತತ್ತ್ವಂಗಳಿಗು ಪರಿಯಾಗಿ ತೋರುವ ಪರವಸ್ತುವಿನ ನಿಜದ ನಿಲವ ಸ್ವಸ್ವರೂಪವನ್ನೆತ್ತಬಲ್ಲರೊ? ಆ ಪರಬ್ರಹ್ಮವು ಹೋದ ಹೊಲಬು, ಬಂದ ಬಟ್ಟೆ, ಬಂದ ನಿಲುಕಡೆಯನು ಏನೆಂದೂ ತಿಳಿಯರು. ಅವರು ತಿಳಿಯದಿರುವ ವಿಚಾರವು ಹ್ಯಾಗಿಪ್ಪುದಲೆ ಸ್ವಾಮಿ ಯೆಂದು ಬೆಸಗೊಂಡೊಡೆ — ಆದಿಯೆಂದಡೆ ದೇಹ, ಅನಾದಿಯೆಂಡಡೆ ನಿರ್ದೇಹವಾದಾತ್ಮನು. ಅನಾದಿಯೆ ಸಕಲ ಸಾಕಾರವಾದುದು, ಅನಾ ದಿಯೆ ಆತ್ಮನ ನಿಃಕಲ ನಿರಾಕಾರವಾದಾತ್ಮನು. ಆದಿಯೆ ಅಚೇತನವಾ

ದುದು. ಆತ್ಮನೆ ಜಡರಹಿತವಾದಾತನು. ದೇಹವೆ ಜೀವಂಗೊಡಲಾಗಿ ಹುದು. ಆತ್ಮವೆ ಪ್ರಾಣ-ತದ್ದೇಹಕ್ಕೆ ಚೈತನ್ಯಸ್ವರೂಪನಾಗಿರುವನು. ಈ ದೇಹಾತ್ಮರುಗಳೆಂಬೆರಡರ ಕೂಟವನ್ನು ಭೇದಿಸಿ, ತನ್ನ ಕೃತಿಮತಿಜ್ಞಾನ ದಿಂದ ವಿಚಾರಿಸಿ, ತಾನೇ ವೇದಾಂತಿ, ತಾನೇ ತಿಳಿದುನೋಡಲು. ಆ ದೇಹದಲ್ಲಿ ಸಂಬಂಧವಪ್ಪ ಭೂತಂಗಳು, ಪೃಥ್ವಿ ಅಪ್ಪು ತೇಜ ವಾಯು ಆಕಾಶವೆಂಬೈದು ತತ್ತ್ವಂಗಳು ನಾನಲ್ಲ, ನಿಜಾತ್ಮ ಸ್ವರೂಪವು ಅಲ್ಲ. ದಶವಿಧೇಂದ್ರಿಯಂಗಳು, ದಶವಾಯುಗಳು, ಅಂತರಂಗದಷ್ಟಮದಂಗಳು, ಬಹಿರಂಗದಷ್ಟಮದಂಗಳು, ಅಷ್ಟಮೂರ್ತಿಮದಂಗಳು, ಅರಿಷಡ್ವರ್ಗಂ ಗಳು, ಷಡೂರ್ಮಿಗಳು, ಷಡ್ಭ್ರಮೆಗಳು, ಷಡ್ಭಾವವಿಕಾರಗಳು, ಅಸಿ ಮಸಿ ಕೃಷಿ ವಾಣಿಜ್ಯ ಯಾಚನೆ ಗೋಪಾಲತ್ವವೆಂಬಾರು ಕರ್ಮಗಳು, ಮತ್ತಂತುಮಲ್ಲದೆ ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹವೆಂಬಾರು ಉದ್ಯೋಗಂಗಳು, ರಸ,ರುಧಿರ,ಮಾಂಸ,ಮೇಧಸ್ಸು, ಅಸ್ಥಿ, ಮಜ್ಜೆಯೆಂಬಾರು ಪ್ರಕಾರವಾದ ಧಾತುಗಳು, ಸಪ್ತವ್ಯಸನಗಳು, ತನುತ್ರಯಂಗಳು, ಜೀವತ್ರಯಂಗಳು, ಜೀವಾತ್ಮ, ಅಂತರಾತ್ಮ, ಪರ ಮಾತ್ಮರೆಂಬಾತ್ಮತ್ರಯಂಗಳು, ಮನ,ಮನನ, ಮನನೀಯವೆಂಬ ಮನ ತ್ರಯಂಗಳು, ಆಣವ, ಮಾಯಾ, ಕಾರ್ಮಿಕವೆಂಬ ಮಲತ್ರಯಂಗಳು, ಗುಣತ್ರಯಂಗಳು, ಸದ್ಭಾವತ್ರಯಂಗಳು, ದುರ್ಭಾವತ್ರಯಂಗಳು, ಅವ ಸ್ಥಾತ್ರಯಂಗಳು, ಇಹಲೋಕದ ತಾಪತ್ರಯಂಗಳು, ಪರಲೋಕದ ತಾಪತ್ರಯಂಗಳು, ಮನ, ಬುದ್ಧಿ, ಚಿತ್ತ, ಅಹಂಕಾರಗಳೆಂಬ ಚತುಃ ಕರಣಂಗಳು, ಈ ಪ್ರಕಾರದಿಂದ ಹೇಳಲ್ಪಟ್ಟವು. ಇಪ್ಪತ್ತೈದೆಪ್ಪತ್ತೈದು ತತ್ತ್ವಂಗಳಾದಿಯಾಗಿ ತೋರುವ ತೋರಿಕೆಯೇನೊ ಈ ಸಕಲ ತತ್ತ್ವಂ ಗಳ ಸಾಕಾರಂಗಳೊಂದು ನಾನಲ್ಲ. ನಿಜಾತ್ಮಸ್ವರೂಪವು ಅಲ್ಲ. ನನ್ನವು ಆತ್ಮಸಂಬಂಧವಾದ ತತ್ತ್ವಂಗಳಲ್ಲ. ಈ ಸಕಲ ತತ್ತ್ವಂಗಳು ನನ್ನಾ ತ್ಮನ ಆಧೀನವಾಗಿಪ್ಪವು. ಚೈತನ್ಯವಿಡಿದು ಚೇಷ್ಟಿಸುತಿಹವು. ನಾನು ಆತ್ಮನು. ಈ ಸಕಲ ತತ್ತ್ವಂಗಳ ಆಧೀನವಿಡಿದು ಚೇಷ್ಟಿಸುವಾತನಲ್ಲ. ಆತ್ಮನು ಮತ್ತೆಂಥವನಯ್ಯ ಎಂದಡೆ – ತೂರ್ಯಾತೂರ್ಯಾತೀತವಪ್ಪ ತೂರ್ಯವೆಂದರೆ ಅರಿವು, ಆತೂರ್ಯವೆಂದಡೆ ಮರವೆ, ಅತೀತವಪ್ಪ ಅರಿವು

ಮರವೆಗಳೆರಡನು ಮೀರಿ ತೋರುವ ಸತ್ ಉಂಟಾದ ಚಿತ್ ಜ್ಞಾನಮ
ಯವಾದ, ಆನಂದ ಸುಖಸ್ವರೂಪವಾದ, ನಿತ್ಯಶಾಶ್ವತವಾದ ಪರಿಪೂರ್ಣ
ಜಗದ್ವ್ಯಾಪಕತ್ವವನುಳ್ಳ ಪರಬ್ರಹ್ಮವೇ ತನ್ನ ಆತ್ಮನ ಇರವೆಂದು ತಿಳಿ
ಯಲು, ಆ ತಿಳಿದ ಮಾತ್ರದಿಂದಲೆ ದೇಹದ ಬೆಸುಗೆಯಂ ವಿಸರ್ಜಿಸಿ
ಅಡಿಮುಡಿ ಒಡಲಘಾತವ ಕಾಣಿಸಿಕೊಳ್ಳದ ಪರಬ್ರಹ್ಮದೊಳಗೆ ತಾನೆಂಬ
ಭಾವವನು ಏಕರಸವ ಮಾಡಿ ಕೂಡಲರಿಯದೆ, ಮತ್ತೆಯು, ಹೀಗೆಂದು
ತಿಳಿದ ಬಳಿಕಲೂ, ತನಗೆ ಗುರುಕಾರುಣ್ಯ ಲಿಂಗಾಂಗ ಸಂಬಂಧವು ದೊರ
ಕೊಳ್ಳದ ಕಾರಣ, ಪುನಃ ಪಂಚಭೂತಯುಕ್ತವಾದ ದೇಹದಲ್ಲಿ ಸಂಬಂ
ಧಿಯಾಗಿ ಕೂಡಿರುತಿರಲು, ದೇಹದಲ್ಲಿ ದೇಹಿಕನಾಗೊಪ್ಪುತಿರಲು, ಅದು
ಕಾರಣವಾಗಿ ಅವರುಗಳಿಗಾ ಪರಬ್ರಹ್ಮವು, ಹೋದ ಹೊಲಬು ಬಂದ
ಬಟ್ಟೆ, ನಿಂದ ನಿಲುಕಡೆಯೇನೆಂದು ತಿಳಿಯಬಾರದು. ಇಂತೀ ಆತ್ಮಾ
ನಾತ್ಮ ತತ್ತ್ವಂಗಳಿಗೆ ಮೂಲಕಾರಣವಾದ ಪರಬ್ರಹ್ಮವು, ತಾನು ಹ್ಯಾಗಿ
ಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ– ಆ ಸಕಲ ತತ್ತ್ವಂಗಳಿಗೂ
ಪರಿಯಾಗಿ ತೋರುವ ಪರವಸ್ತುವಪ್ಪ, ಶಾಶ್ವತವಾದ ನಿರಾಳ ಅಡಿಮುಡಿ
ಒಡಲಘಾತವ ಕಾಣಿಸಿಕೊಳ್ಳದ ತನುಮನಕರಣ ಶೂನ್ಯವಾದ ಲಿಂಗವೇ
ನಿಃಕಲಬ್ರಹ್ಮವು. ಇಲ್ಲಿಗೆ **ನಿಃಕಲಲಿಂಗಸ್ಥಲ.** ತನ್ನ ಸಗುಣಾನಂದ
ಲೀಲೆಗೊದಗಿದಂತಾದ್ದೆ ಚಿತ್ತ. ಆ ಚಿತ್ತಿನ ವಿಳಾಸದಿಂದ ತಾನೆ ಆ
ನಿಃಕಲ ಲಿಂಗವು. ಆ ಚಿತ್ತಿನ ಚಿನ್ನಾದವೇ ಸುನಾದ. ಆ ಚಿತ್ತುವಿನ
ಚಿದ್ಬಿಂದುವೆ ಬಿಂದುಪ್ರಕಾಶ. ಆ ಚಿತ್ತುವಿನ ಚಿತ್ಕಳೆಯೆ ಪ್ರಕಾಶ
ತೇಜೋಮೂರ್ತಿಯಾಗಿ ಈ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲ
ಚಿತ್ತೆಂಬ ಚತುರ್ವಿಧ ಘಟ್ಟಿಗೊಂಡು ಅಖಂಡ ಗೋಳಕಾಕಾರ ತೇಜೋ
ಮೂರ್ತಿಯಾಗಿ ನಿಂದು ಮಹಾಲಿಂಗವೆನಿಸಿತ್ತು. ಇಲ್ಲಿಗೆ **ಮಹಾಲಿಂಗ
ಸ್ಥಲ.** ಆ ಪರಿಪೂರ್ಣ ಪರಂಜ್ಯೋತಿ ಸ್ತಂಭಾಕಾರವಾದ ಮಹಾಲಿಂಗವು
ತಾನೊಂದೆ ಕರ್ಮಸಾದಾಖ್ಯ, ಕರ್ತುಸಾದಾಖ್ಯ, ಮೂರ್ತಿ ಸಾದಾಖ್ಯ,
ಅಮೂರ್ತಿ ಸಾದಾಖ್ಯ, ಶಿವಸಾದಾಖ್ಯವೆಂಬೈದು ಸಾದಾಖ್ಯಲಿಂಗ
ಸ್ವರೂಪವ ತಳೆಯಿತು ಎಂಬಲ್ಲಿ ಕರ್ಮಸಾದಾಖ್ಯವೆ ಆಚಾರಲಿಂಗದ
ಪ್ರಕಾಶ, ಕರ್ತುಸಾದಾಖ್ಯವೆ ಗುರುಲಿಂಗ ಪ್ರಕಾಶ, ಮೂರ್ತಿಸಾದಾಖ್ಯವೆ

ಶಿವಲಿಂಗ ಪ್ರಕಾಶ, ಅಮೂರ್ತಿ ಸಾದಾಖ್ಯವೆ ಜಂಗಮಲಿಂಗ ಪ್ರಕಾಶ, ಶಿವಸಾದಾಖ್ಯವೆ ಪ್ರಸಾದ ಲಿಂಗಪ್ರಕಾಶ ಸ್ವರೂಪವ ತಳೆಯಿತು. ಆ ಐದುಲಿಂಗದ ಬೆಳಗೆ ಪಂಚಮುಖವೆಂದೆನಿಸಿತು, ಎಂಬಲ್ಲಿ ಆಚಾರಲಿಂಗ ಪ್ರಕಾಶವೆ ಸದ್ಯೋಜಾತ ಮುಖ, ಗುರುಲಿಂಗ ಪ್ರಕಾಶವೆ ವಾಮದೇವ ಮುಖ, ಶಿವಲಿಂಗ ಪ್ರಕಾಶವೆ ಅಘೋರಮುಖ, ಜಂಗಮಲಿಂಗ ಪ್ರಕಾಶವೆ ತತ್ಪುರುಷ ಮುಖ, ಪ್ರಸಾದಲಿಂಗ ಪ್ರಕಾಶವೆ ಈಶಾನ್ಯ ಮುಖ-ಇವುಗಳ ಸ್ವರೂಪವನ್ನು ತಳೆಯಿತು. ಆ ಪಂಚಮುಖದಿಂದಲೆ ಪಂಚಾಕ್ಷರಂಗಳುತ್ಪತ್ತಿಯೆಂಬಲ್ಲಿ ಸದ್ಯೋಜಾತ ಮುಖದಿಂದ ನಕಾರ ಪ್ರಣವವು ವಾಮದೇವ ಮುಖದಿಂದ ಮಕಾರ ಪ್ರಣವವು, ಅಘೋರ ಮುಖದಿಂದ ಶಿಕಾರ ಪ್ರಣವವು, ತತ್ಪುರುಷ ಮುಖದಿಂದ ವಕಾರ ಪ್ರಣವವು, ಈಶಾನ್ಯ ಮುಖದಿಂದ ಯಕಾರ ಪ್ರಣವವು ಹುಟ್ಟಿದವು. ಆ ಪಂಚಾಕ್ಷರಂಗಳಿಂದಲೆ ಪಂಚಕಲೆಗಳುತ್ಪತ್ತಿಯು ಎಂಬಲ್ಲಿ ನಕಾರ ಪ್ರಣವದಿಂದ ನಿವೃತಿಕಲೆ, ಮಕಾರ ಪ್ರಣವದಿಂದ ಪ್ರತಿಷ್ಠಾಕಲೆ, ಶಿಕಾರ ಪ್ರಣವದಿಂದ ವಿದ್ಯಾಕಳೆ, ವಕಾರ ಪ್ರಣವದಿಂದ ಶಾಂತಿಕಲೆ, ಯಕಾರ ಪ್ರಣವದಿಂದ ಶಾಂತಾತೀತ ಕಲೆ ಹುಟ್ಟಿದವು. ಆ ಪಂಚಕಲೆಗಳಿಂದಲೆ ಪಂಚಶಕ್ತಿಗಳುತ್ಪತ್ತಿ. ಅದು ಹ್ಯಾಗೆಂದರೆ – ನಿವೃತಿಕಲೆಯಿಂದ ಕ್ರಿಯಾಶಕ್ತಿ, ಪ್ರತಿಷ್ಠಾ ಕಲೆಯಿಂದ ಜ್ಞಾನಶಕ್ತಿ, ವಿದ್ಯಾಕಲೆಯಿಂದಿಚ್ಛಾಶಕ್ತಿ, ಶಾಂತಿಕಲೆಯಿಂದಾದಿಶಕ್ತಿ, ಶಾಂತಾತೀತ ಕಲೆಯಿಂದ ಪರಶಕ್ತಿಯು ಹುಟ್ಟಿದವು. ಆ ಪಂಚಶಕ್ತಿಗಳಿಂದಲೆ ಪಂಚಕರಣಂಗಳುತ್ಪತ್ತಿಯು ಎಂಬಲ್ಲಿ ಕ್ರಿಯಾಶಕ್ತಿಯಿಂದ ಚಿತ್ತ, ಜ್ಞಾನಶಕ್ತಿಯಿಂದ ಬುದ್ಧಿ, ಇಚ್ಛಾಶಕ್ತಿಯಿಂದ ಅಹಂಕಾರ, ಆದಿಶಕ್ತಿಯಿಂದ ಮನ, ಪರಶಕ್ತಿಯಿಂದ ಜ್ಞಾನವೆಂಬ ಕರಣಗಳು ಹುಟ್ಟಿದವು. ಪಂಚಕರಣಗಳಿಂದಲೆ ಪಂಚ ತನ್ಮಾತ್ರೆಗಳುತ್ಪತ್ತಿಯಾಯ್ತು, ಎಂಬಲ್ಲಿ ಚಿತ್ತವೆಂಬ ಕರಣದಿಂದ ಗಂಧ ವಿಷಯವು, ಬುದ್ಧಿಯೆಂಬ ಕರಣದಿಂದ ರಸ ವಿಷಯವು, ಅಹಂಕಾರವೆಂಬ ಕರಣದಿಂದ ರೂಪು ವಿಷಯವು, ಮನವೆಂಬ ಕರಣದಿಂದ ಸ್ಪರ್ಶನ ವಿಷಯವು, ಜ್ಞಾನವೆಂಬ ಕರಣದಿಂದ ಶಬ್ದ ವಿಷಯವು ಪುಟ್ಟಿದವು. ಆ ಪಂಚ ತನ್ಮಾತ್ರೆಗಳಿಂದಲೆ ಪಂಚಭೂತಂಗಳುತ್ಪತ್ತಿಯು. ಗಂಧ ವಿಷಯದಿಂದ

ಪೃಥ್ವಿ, ರಸ ವಿಷಯದಿಂದ ಅಪ್ಪು, ರೂಪು ವಿಷಯದಿಂದ ಅಗ್ನಿ, ಸ್ಪರ್ಶನ ವಿಷಯದಿಂದ ವಾಯು, ಶಬ್ದ ವಿಷಯದಿಂದ ಆಕಾಶವೆಂಬೈದು ತತ್ತ್ವಂಗಳು ಹುಟ್ಟಿದವು. ಇಲ್ಲಿಗೆ ಪಂಚಸಾದಾಖ್ಯ, ಪಂಚಮೂರ್ತಿ ಲಿಂಗಸ್ಥಲ ಆ ಪಂಚಭೂತಂಗಳೇ ಪಂಚೀಕರಣವನೈದಿ, ಒಂದೊಂದು ತತ್ತ್ವಂಗಳು ಐದು ತತ್ತ್ವಗಳಲ್ಲಿ ಕೂಡಿ ಇಪ್ಪತ್ತೈದು ತತ್ತ್ವಗಳಾಗಿ ಆ ಇಪ್ಪತ್ತೈದು ತತ್ತ್ವಯುಕ್ತವಾದ ಶರೀರವು, ಶಿವಾಂಶಿಕನಾದ ಮೂಲಾತ್ಮನಿಗೆ ಅಂಗ ವಾಯ್ತು. ಇಲ್ಲಿಗೆ **ಶರೀರ ಸಂಬಂಧಿಸ್ಥಲ.** ಆ ದೇಹಕ್ಕೆ ಅರಿವು ರೂಪ ಮಾದಿಂದ್ರಿಯಂಗಳು ಕ್ರಿಯಾರೂಪಮಾದಿಂದ್ರಿಯಂಗಳು ಪ್ರತ್ಯಂಗವೆನಿಸಿತು. ದೇಹವಿದ್ದರೂ ಬೇರಾಗಿ ತೋರುತಿಹುದಾದಕಾರಣ ಪೃಥಕ್ಶರೀರವೆಂದೆ ಹೇಳಿಸಿಕೊಂಡಿತು. ಇಲ್ಲಿಗೆ **ಸಂಸಾರಸಂಬಂಧಿ ಸ್ಥಲ.** ಈ ಪ್ರಕಾರದಿಂದ ಹೇಳಲ್ಪಟ್ಟೀ ಶರೀರ ಸಂಬಂಧವನ್ನು ನಿಃಕಲ ಪರಶಿವನು ತನ್ನಯ ಚಿದಂಶೀಭೂತನಾದ ಮೂಲಾತ್ಮಂಗೆ ಸಂಬಂಧಿಸಿಕೊಟ್ಟವನಾದಕಾರಣ ಇಲ್ಲಿಗೆ **ಪಿಂಡಸ್ಥಲ.** ಆ ಸ್ವಾಯತವ ಮಾಡಿಕೊಟ್ಟ ದೇಹಸಂಬಂಧವಾದ ಪೂರ್ವಾಶ್ರಯವು, ಇಪ್ಪತ್ತೈದು ತತ್ತ್ವಂಗಳು ಯಾವ ಕಡೆಯಿಂದುಂಟಾಯ್ತು, ಎತ್ತಣಿಂದ ಬಂದು ದೊರಕೊಂಡಿತು ಎಂಬಲ್ಲಿ ಮೊದಲು ನಿರಾಕಾರವಾದ ನಿಃಕಲ ಬ್ರಹ್ಮವು, ಆ ನಿಃಕಲ ಬ್ರಹ್ಮನಿಂದ ಚಿತ್ತು, ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಪುಟ್ಟಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆಮುಲಚಿತ್ತೆಂಬ ಚತುರ್ವಿಧವು ಘಟ್ಟಿಕೊಂಡು ಆ ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯ್ತು. ಆ ಮಹಾಲಿಂಗವೆ ಪಂಚಸಾದಾಖ್ಯಮೂರ್ತಿಯೆಂದೆನಿಸಿತು. ಆ ಪಂಚ ಸಾದಾಖ್ಯವೆ ಪಂಚಲಿಂಗಪ್ರಕಾಶವೆಂದೆನಿಸಿತು; ಆ ಪಂಚಲಿಂಗಪ್ರಕಾಶವೆ ಪಂಚಮುಖವೆನಿಸಿತು. ಆ ಪಂಚಮುಖದಿಂದಲೆ ಪಂಚಾಕ್ಷರಂಗಳುತ್ಪತ್ತಿ, ಆ ಪಂಚಾಕ್ಷರಗಳಿಂದಲೆ ಪಂಚಕಲೆಗಳುತ್ಪತ್ತಿ, ಆ ಪಂಚಕಲೆಗಳಿಂದಲೆ ಪಂಚಶಕ್ತಿಗಳುತ್ಪತ್ತಿ, ಆ ಪಂಚಶಕ್ತಿಗಳಿಂದಲೆ ಪಂಚಕರಣಂಗಳುತ್ಪತ್ತಿ, ಆ ಪಂಚಕರಣಂಗಳಿಂದಲೆ ಪಂಚತನ್ಮಾತ್ರೆಗಳುತ್ಪತ್ತಿ, ಆ ಪಂಚ ತನ್ಮಾತ್ರೆಗಳಿಂದಲೆ ಪಂಚಭೂತಂಗಳುತ್ಪತ್ತಿ, ಆ ಪಂಚಭೂತಂಗಳೆ ಪಂಚ ಕರಣತ್ವವನೈದಿ ಒಂದೊಂದು ತತ್ತ್ವಂಗಳು ಐದು ಐದು ತತ್ತ್ವಂಗಳ

ಸ್ವರೂಪವನ್ನು ತಾಳಿ, ಇಪ್ಪತ್ತೈದು ತತ್ತ್ವಂಗಳಾಗಿ ಆ ಇಪ್ಪತ್ತೈದು ತತ್ತ್ವಾತ್ಮಕವಾದ ಶರೀರವು ತನಗೆ ಬಂದು ದೊರಕೊಂಡಿತಲಾ ಎಂದು ವಿವೇಕಿಸುವದೇ **ಪಿಂಡಜ್ಞಾನಸ್ಥಲ.** ಅಲ್ಲಿಯೆ ಅಡಗಿಸಿ ಯದ್ದೃಷ್ಟಂ ತನ್ನಷ್ಟಂ ಎಂದು ಹೇಳುತಿಹುದಾದಕಾರಣ ಯಾವಲ್ಲಿ ಹುಟ್ಟಿದ ವಸ್ತು ವೆಂಬುದು ತಾನು ಅದರೊಳಗೆ ಅಡಗುತಿಹುದು. ಅದು ಹ್ಯಾಗಂದರೆ, ಆ ದೇಹಸಂಬಂಧವಾದ ಇಪ್ಪತ್ತೈದು ತತ್ತ್ವಂಗಳನ್ನೆ, ಪಂಚಭೂತಂಗಳಲ್ಲಿ, ಪಂಚವಿಷಯಂಗಳನ್ನೆ ಪಂಚಕರಣಂಗಳಲ್ಲಿ, ಆ ಪಂಚಕರಣಂಗಳನೆ ಪಂಚಶಕ್ತಿಗಳಲ್ಲಿ, ಆ ಪಂಚಶಕ್ತಿಗಳನ್ನೆ ಪಂಚಕಲೆಗಳಲ್ಲಿ, ಆ ಪಂಚ ಕಲೆಗಳನ್ನೆ ಪಂಚಾಕ್ಷರಂಗಳಲ್ಲಿ, ಆ ಪಂಚಾಕ್ಷರಂಗಳನ್ನೆ ಪಂಚಮುಖಂಗ ಳಲ್ಲಿ ಆ ಪಂಚಮುಖಂಗಳನ್ನೆ, ಪಂಚಲಿಂಗ ಪ್ರಕಾಶಂಗಳಲ್ಲಿ ಆ ಪಂಚ ಲಿಂಗ ಪ್ರಕಾಶಂಗಳನ್ನೆ, ಪಂಚಸಾದಾಖ್ಯಂಗಳಲ್ಲಿ ಆ ಪಂಚಸಾದಾಖ್ಯಂ ಗಳನ್ನೆ, ಮೇಲಣ ಪಂಚಸಾದಾಖ್ಯವಾದ ಮಹಾಲಿಂಗದಲ್ಲಿ ಅಡಗಿಸಿ, ಮಹಾಲಿಂಗಸ್ವರೂಪವೆ ತಾನು ಎಂದು ತಿಳಿಯುವುದೆ **ಸಂಸಾರಹೇಯ ಸ್ಥಲ.** ಆ ಸಕಲ ಸಂಸಾರ ಪ್ರಪಂಚವನ್ನು ತಿರಸ್ಕರಿಸಿ ಗುರೂಪಾವಸ್ಥೆ ಯಂ ಮಾಡಲು, ಆ ಉಪಾವಸ್ಥೆಗೋಸ್ಕರ ನಿಃಕಲ ಪರಶಿವನು ತಾನೆ ಗುರುವಾಗಿ ಬಂದು, ಕ್ರಿಯಾಘನ ಗುರುಮೂರ್ತಿಯಾಗಿ ಬಿಜಯಂಗೈದು ಇಲ್ಲಿಗೆ **ಗುರುಕಾರುಣ್ಯಸ್ಥಲ.** ಆ ದೇಹಸಂಬಂಧವಾದ ಪೂರ್ವಾಶ್ರಯ ವಂ, ಇಪ್ಪತ್ತೈದು ತತ್ತ್ವಂಗಳ ವರ್ತನೆಯನ್ನು ನಷ್ಟವ ಮಾಡಿ ಇಪ್ಪ ತ್ತೈದು ಮಂತ್ರ ತತ್ವಂಗಳಾಗಳವಡಿಸಿ, ಆ ಮಂತ್ರಾಂಗಕ್ಕೆ, ಮಹಾಘನ ಲಿಂಗವನ್ನು ವೇದಿಸಿ, ಭಾವಾದಿನಯನಂಗಳಿಂದ ಬಹಿಷ್ಕರಿಸಿ, ತನುವಿನ ವಾಮಭಾಗದ ಕರಸ್ಥಳದಲ್ಲಿಪ್ಪ ಇಷ್ಟಲಿಂಗ ಲಕ್ಷಣವೆಂಬ ಕುಮಾರ ಮೂರ್ತಿಯಲ್ಲಿ ವುದುಗೊಳಿಸಿ, ಆ ಚಿತ್ಕಲಾಲಿಂಗವನ್ನು ಕೊಟ್ಟು, ಸಂಬಂ ಧವ ಮಾಡಿಯಿತ್ತು, ಇಲ್ಲಿಗೆ **ಲಿಂಗಧಾರಣಸ್ಥಲ.** ಆ ಚಿತ್ಕಲಾಲಿಂಗ ವನ್ನು ಕೊಟ್ಟು, ಅಂಗಕ್ಕೆ ಸಂಬಂಧವ ಮಾಡಿ ಇತ್ತ ಸದ್ಗುರುದೇವನು ಶಿಷ್ಯಂಗೆ, ಇಂದ್ರಿಯಂಗಳಲ್ಲಿ ಲಿಂಗಸಂಬಂಧವ ಮಾಡಿಕೊಂಡು ಆಚರಿಸು ವಂತೆ ಷಟ್‌ಸ್ಥಲ ಜ್ಞಾನೋಪದೇಶವನ್ನು ಕರುಣಿಸಿಕೊಟ್ಟ ಪರಿಕ್ರಮಮಂ ತರುವಾಯದನಿಲುಕಡೆಯು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂ

ಡೊಡೆ – ಮೂಲಾತ್ಮ ಸಹವಾಗಿ ಪಂಚಭೂತಂಗಳನ್ನೆ ಷಡಂಗವೆನಿಸಿ, ಅವರವರ ಮದಗುಣ ಅಂಶಗುಣಂಗಳಳಿದು, ಆರು ಪ್ರಕಾರವಾದ ಅಂಗಂಗಳಾಗಿರ್ಪುದೆಂದು ತಿಳಿಹಿಕೊಟ್ಟು, ಎಂಬಲ್ಲಿ ಪೃಥ್ವಿಯಳಿದು, ಚಿತ್ಪೃಥ್ವಿ ಸ್ವರೂಪಿನಿಂದ ಭಕ್ತಂಗೆ, ಇದೇ ರೀತಿಯಲ್ಲಿ ಆತ್ಮನಳಿದು, ಚಿದಾತ್ಮ ಸ್ವರೂಪಿನಿಂದೈಕ್ಯಂಗೊಡಲಾಗಿಪ್ಪುದೆಂದು ತಿಳಿಹಿಸಿಕೊಟ್ಟು, ಆ ಭಕ್ತಾದ್ಯೈಕ್ಯಾಂತವಾದ ಆರಂಗಕ್ಕೆ ನಿವೃತ್ತ್ಯಾದಿ ಶಾಂತಾತೀತೋತ್ತರಾಂತ್ಯಮಾದ ಆರು ಕಲೆಗಳನ್ನೆ, ಆರು ಪ್ರಕಾರಮಾದ ಶಕ್ತಿಗಳಾಗಿರ್ಪುವೆಂದು ತಿಳಿಹಿಸಿಕೊಟ್ಟು, ಎಂಬಲ್ಲಿ ನಿವೃತ್ತಿ ಕಲಾಪರಿಯಾಯನಾಮವನ್ನುಳ್ಳ ಕ್ರಿಯಾಶಕ್ತಿಯು ಭಕ್ತಂಗೆ ಇದೇ ರೀತಿಯಲ್ಲಿ, ಶಾಂತಾತೀತೋತ್ತರ ಕಲಾಪರಿಯಾಯ ನಾಮವನುಳ್ಳ ಚಿಚ್ಛಕ್ತಿಯೈಕ್ಯಂಗೆ ಶಕ್ತಿಯಾಗಿರ್ಪಳೆಂದು ತಿಳುಹಿಕೊಟ್ಟು, ಆ ಕ್ರಿಯಾದಿ ಚಿದಂತ್ಯಮಾದ ಆರು ಶಕ್ತಿಗಳಿಗೆ ಷಡ್ವಿಧ ಭಕ್ತಿಯಿಂದಳವಡಿಸಿ, ಅಂಗವ ಮಾಡಿಕೊಟ್ಟು ಆ ಶ್ರದ್ಧಾದಿ ಸಮರಸಾಂತಮಾದ ಆರು ಭಕ್ತಿಗಳಿಗೆ, ಭಾವ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳೆಂಬ ಷಟ್ಕರಣಂಗಳು ಷಡ್ವಿಧ ಹಸ್ತಂಗಳೆಂದೆನಿಸಿ ಅವರವರ ಪೂರ್ವ ಪ್ರವರ್ತನೆಯಳಿದು ಆರು ಪ್ರಕಾರವಾದ ಕರಣಂಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ, ಕುಚಿತ್ತವಳಿದು ಸುಚಿತ್ತವೆ ಶ್ರದ್ಧಾಭಕ್ತಿಗೆ, ಇದೇ ರೀತಿಯಲ್ಲಿ ದುರ್ಭಾವವಳಿದು ಸದ್ಭಾವವೆ ಸಮರಸ ಭಕ್ತಿಗೆ, ಹಸ್ತವಾಗಿರ್ಪುದೆಂದು ತಿಳಿಹಿಕೊಟ್ಟು, ಆ ಸುಚಿತ್ತಾದಿ ಸದ್ಭಾವಾಂತ್ಯಮಾದ ಆರು ಕರಕಮಲಂಗಳಿಗೆ, ಆ ಮಹಾಲಿಂಗವೆ ಮೊದಲಾದ ಪಂಚಲಿಂಗಗಳನೆ, ಐದು ತತ್ತ್ವಲಿಂಗಗಳನೆ, ಆರು ಪ್ರಕಾರವಾದ ಲಿಂಗಂಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ ಸುಚಿತ್ತ ಹಸ್ತಕ್ಕೆ, ಆಚಾರಲಿಂಗವಿದೇರೀತಿಯಲ್ಲಿ ಸದ್ಭಾವಹಸ್ತಕ್ಕೆ ಮಹಾಲಿಂಗವೆ ಲಿಂಗವಾಗಿರ್ಪುದೆಂದು ತಿಳಿಹಿಕೊಟ್ಟು ಆಚಾರಾದಿ ಮಹಾಲಿಂಗಾಂತ್ಯಮಾದ ಆರು ಲಿಂಗಂಗಳಿಗೆ, ಷಟ್ಪ್ರಣವಂಗಳನ್ನೆ ಷಡ್ವಿಧ ಮಂತ್ರಂಗಳೆಂದೆನಿಸಿ, ಆರು ಪ್ರಕಾರಮಾದ ಮಂತ್ರಂಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ ಆಚಾರಲಿಂಗವ ನೆನಹುದಕ್ಕೆ ನಕಾರ ಪ್ರಣವವೆ ಮಂತ್ರ, ಇದೇ ರೀತಿಯಲ್ಲಿ ಮಹಾಲಿಂಗವ ನೆನಹುದಕ್ಕೆ ಓಂಕಾರ ಪ್ರಣವವೆ ಮಂತ್ರವಾಗಿ

ರ್ಪುದೆಂದು ತಿಳಿಹಿಕೊಟ್ಟು, ಆ ಷಡಕ್ಷರ ಮಂತ್ರ ಸ್ವರೂಪವಾದ ಷಡ್ವಿಧ ಲಿಂಗಂಗಳಿಗೆ, ಹೃದಯೇಂದ್ರಿಯ ಸಹವಾಗಿ ಪಂಚೇಂದ್ರಿಯಂಗಳನ್ನೆ, ಆರು ಪ್ರಕಾರವಾದ ವದನಂಗಳಾಗಿರ್ಪವೆಂದು ತಿಳಿಹಿಕೊಟ್ಟು ಎಂಬಲ್ಲಿ ನಕಾರ ಮಂತ್ರಮೂರ್ತಿಯಾದ ಆಚಾರಲಿಂಗಕ್ಕೆ ಘ್ರಾಣೇಂದ್ರಿಯವೆ ಮುಖ, ಇದೇ ರೀತಿಯಲ್ಲಿ ಓಂಕಾರ ಮಂತ್ರಮೂರ್ತಿಯಾದ ಮಹಾ ಲಿಂಗಕ್ಕೆ ಹೃದಯೇಂದ್ರಿಯವೆ ವದನವಾಗಿರ್ಪುದೆಂದು ತಿಳಹಿಕೊಟ್ಟು, ಆ ಷಡ್ವಿಧ ವದನಂಗಳಿಗೆ, ಷಡ್ವಿಧ ವಿಷಯಂಗಳನ್ನೆ, ದ್ರವ್ಯ ಪದಾರ್ಥಂ ಗಳೆಂದೆನಿಸಿ, ನೈವೇದ್ಯ ದ್ರವ್ಯಂಗಳಾಗಿರ್ಪುದೆಂದು ತಿಳಿಹಿಕೊಟ್ಟು ಎಂ ಬಲ್ಲಿ ಘ್ರಾಣೇಂದ್ರಿಯ ಮುಖಕ್ಕೆ ಗಂಧ ವಿಷಯವೆ ಪದಾರ್ಥ, ಇದೇ ರೀತಿಯಲ್ಲಿ ಹೃದಯೇಂದ್ರಿಯ ಮುಖಕ್ಕೆ ತೃಪ್ತಿ ವಿಷಯವೆ ಪದಾರ್ಥವಾ ಗಿರ್ಪುದೆಂದು ತಿಳಿಹಿಕೊಟ್ಟು, ಆ ದ್ರವ್ಯಪದಾರ್ಥಂಗಳೆ, ಆ ನೈವೈದ್ಯ ದ್ರವ್ಯಂಗಳೆ ಆಯಾಯ ಮುಖದ ಲಿಂಗಂಗಳಲ್ಲಿ, ಆ ಷಡಿಂದ್ರಿಯಂಗಳನ್ನೆ ವದನ ಮಾಡಿಕೊಂಡಿರುವ ಷಡ್ವಿಧ ಲಿಂಗಂಗಳೊಳಗೆ ನಿರಂತರ, ಸಾವ ಧಾನದಿಂದ, ಅಷ್ಟವಿಧ ಸಕೀಲಂಗಳಿಂದರ್ಪಿತವಾಗಿ ಸಮರ್ಪಣೆಯಾಗಿ ಎಂಬಲ್ಲಿ, ಪೃಥ್ವಿಯಳಿದು, ಚಿತ್ಪೃಥ್ವಿಯೆ ಒಡಲಾದ ಭಕ್ತನು, ಸುಚಿತ್ತ ಹಸ್ತದಿಂದ ಸುಗಂಧ ಪದಾರ್ಥವ ಪಿಡಿದು, ತನ್ನ ಪ್ರಾಣ ಸ್ವರೂಪವಾದ ಆಚಾರಲಿಂಗಕ್ಕೆ ಕ್ರಿಯಾಶಕ್ತಿಯುಕ್ತವಾಗಿ ಶ್ರದ್ಧಾಭಕ್ತಿಯಿಂದ,ಘ್ರಾಣೇಂ ದ್ರಿಯ ಮುಖದಲ್ಲಿ ನಕಾರ ಮಂತ್ರ ಸ್ಮರಣೆಯಿಂದ, ಇದೇ ರೀತಿಯಲ್ಲಿ, ಆತ್ಮನಳಿದು, ಚಿದಾತ್ಮನೆ ಒಡಲಾದೈಕ್ಯನೂ, ಸದ್ಭಾವ ಹಸ್ತದಿಂದ, ಸುತೃಪ್ತಿ ಪದಾರ್ಥವಿಡಿದು, ತನ್ನ ಪ್ರಾಣಸ್ವರೂಪವಾದ ಮಹಾಲಿಂಗಕ್ಕೆ ಚಿಚ್ಛಕ್ತಿಯುಕ್ತವಾಗಿ ಸಮರಸಭಕ್ತಿಯಿಂದ, ಹೃದಯೇಂದ್ರಿಯಮುಖ ದಲ್ಲಿ, ಓಂಕಾರಮಂತ್ರಸ್ಮರಣೆಯಿಂದ ಸಮರ್ಪಣೆಯಾಗಿ, ಬೀಗಲೊಡನೆ ಅಂಗಲಿಂಗದಾಚರಣೆ ನಿಃಪತಿಯಾದ ಕೂಡಲೆ, ಅಂಗಸ್ಥಲಂಗಳಡಗಿ, ಷಡ್ವಿಧಲಿಂಗಂಗಳಾಚರಣೆಯೆ ತ್ರಿವಿಧಾಂಗಲಿಂಗಂಗಳಲ್ಲಿ ಲೀನವಾಗಿ, ತ್ರಿವಿಧ ಲಿಂಗಾಂಗಸ್ಥಲಂಗಳಳಿದು ತ್ರಿವಿಧಾಂಗಲಿಂಗಂಗಳಾಚರಣೆಯ ಳಿದು ಅವಶೇಷವಾಗಿ ಕಾಯಗುರು ಆಚಾರಗುರು ಸಂಬಂಧವೆಂದು ಹೇಳುತ್ತಿಹುದಾದ ಕಾರಣ ಅಂಗಾಪ್ತಸ್ಥಾನ ಸದ್ಭಾವವೆಂಬ ಚತುರ್ವಿಧ

ಭಕ್ತಿಯ ಮಾಡುವ ನೆವದಿಂದ ಅಂಗವೆಂಬ ಪದಾರ್ಥವನ್ನು ಗುರುವಿಂಗೆ ಸಮರ್ಪಿಸಲು, ಆ ಗುರುವನರ್ಪಿಸಿಕೊಂಡ ಅಂಗವೆಲ್ಲ ಗುರುಸ್ವರೂಪವಾಗಿರ್ಪುದು. ಪ್ರಾಣಲಿಂಗ, ಇಷ್ಟಾರ್ಥಲಿಂಗ ಸಂಹಿತೆಯೆಂದು ಹೇಳುತ್ತಿಹುದಾದಕಾರಣ, ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡುವ ಭಕ್ತಿಯ ನೆವದಿಂದ, ಪ್ರಾಣದ್ರವ್ಯ ಪದಾರ್ಥವನ್ನು ಲಿಂಗಕ್ಕೆ ಸಮರ್ಪಿಸಲು, ಆ ಲಿಂಗ ಸಮರ್ಪಿಸಿಕೊಂಡ ಪ್ರಾಣದ್ರವ್ಯ ಪದಾರ್ಥವೆಲ್ಲ ಲಿಂಗಸ್ವರೂಪವಾಗಿರ್ಪುದು. ಜ್ಞಾನ, ಜ್ಞಾನಜಂಗಮ, (ಸುಜ್ಞಾನ ಜಂಗಮ ಚೈತನ್ಯ) ಎಂದು ಹೇಳುತ್ತಿಹುದಾದಕಾರಣ, ಅನ್ನ ವಸ್ತ್ರ ಗಂಧ ಮಣಿ ಭೂಷಣ ತಾಂಬೂಲ ವನಿತಾ ಗೀತ ಮುಂತಾದ ಸಕಲಪದಾರ್ಥಂಗಳಂ ಕೊಟ್ಟು ಮಾಡುವ ಭಕ್ತಿಯ ನೆವದಿಂದ ಜ್ಞಾನ ದ್ರವ್ಯ ಪದಾರ್ಥವನ್ನು ಜಂಗಮಕ್ಕೆ ಸಮರ್ಪಿಸಲು, ಆ ಜಂಗಮವರ್ಪಿಸಿಕೊಂಡ ಜ್ಞಾನದ್ರವ್ಯ ಪದಾರ್ಥವೆಲ್ಲ ಜಂಗಮ ಸ್ವರೂಪವಾಗಿರ್ಪುದು. ಗುರುವಿನಲ್ಲಿ **ಶುದ್ಧ ಪ್ರಸಾದ** - ತನಗೆ ದೀಕ್ಷಾತ್ರಯಂಗಳಿಂದ ಅಂಗಕ್ಕೆ ಲಿಂಗ ಸಂಬಂಧವನ್ನು ಕರುಣಿಸಿಕೊಟ್ಟಂಥಾ ಸದ್ಗುರುದೇವಂಗೆ, ಸಕಲ ಪದಾರ್ಥಂಗಳ ಸಮರ್ಪಿಸಲು ಆ ಗುರು ಸಮರ್ಪಿಸಿಕೊಂಡು, ಆ ಗುರುಮುಖದಿಂದುಳುಮೆಯಾಗಿ ಬಂದುದೇ ಶುದ್ಧಪ್ರಸಾದ. ಲಿಂಗದಲ್ಲಿ **ಸಿದ್ಧ ಪ್ರಸಾದ** - ಆ ಗುರುಮುಖದಿಂ ಬಂದ ಇಷ್ಟಲಿಂಗಕ್ಕೆ ಸಕಲ ಪದಾರ್ಥಂಗಳ ಸಮರ್ಪಿಸಲು, ಆ ಲಿಂಗ ಸಮರ್ಪಿಸಿಕೊಂಡು ಆ ಲಿಂಗಮುಖದಿಂದುಳುಮೆಯಾಗಿ ಬಂದುದೆ ಸಿದ್ಧ ಪ್ರಸಾದ. ಜಂಗಮದಲ್ಲಿ **ಪ್ರಸಿದ್ಧ ಪ್ರಸಾದ** - ಶ್ರೀಗುರುವಿಗೂ ಲಿಂಗಕ್ಕೂ ಪ್ರಾಣಕಲಾ ಚೈತನ್ಯ ಸ್ವರೂಪನಾದ ಚರಲಿಂಗಕ್ಕೆ ಸಕಲ ಪದಾರ್ಥಂಗಳ ಸಮರ್ಪಿಸಲು, ಆ ಜಂಗಮ ಅರ್ಪಿಸಿಕೊಂಡು ಆ ಜಂಗಮ ಮುಖದಿಂದುಳುಮೆಯಾಗಿ ಬಂದುದೆ ಪ್ರಸಿದ್ಧ ಪ್ರಸಾದ. ಈ ಪ್ರಕಾರದಿಂದ ಹೇಳಲ್ಪಟ್ಟೀ ತ್ರಿವಿಧ ಪ್ರಸಾದವು, ಈ ಶುದ್ಧ–ಸಿದ್ಧ–ಪ್ರಸಿದ್ಧವೆಂಬ ಮೂರು ಪ್ರಸಾದಂಗಳೂ, ಒಂದರೊಳಗೊಂದು ಸಮರಸವಾಗಿ ಎಂಬಲ್ಲಿ, ಶುದ್ಧವೆ ಸಿದ್ಧದಲ್ಲಿ, ಸಿದ್ಧವೆ ಪ್ರಸಿದ್ಧದಲ್ಲಿ, ಪ್ರಸಿದ್ಧವೆ ಚಿತ್ಕಲಾ ಪ್ರಸಾದದಲ್ಲಿ ಸಮರಸವಾಗಿ, ಮಹಾ ದೊಡ್ಡಿತ್ತಾದ, ಘನ ಸಾಂದ್ರವಾದ, ಪರಿಪೂರ್ಣ ಜಗದ್ವ್ಯಾಪಕತ್ವವನುಳ್ಳ

ಪ್ರಸಾದಂ ಚಿತ್ಕಲಾ ಪ್ರಸಾದದಲ್ಲಿ ಕೂಡುವ ಕೂಟವೂ, ಅಳವಟ್ಟು ಅಂಗವಾದ ಶಿವಶರಣನು ಜ್ಞಾನಿಯಲ್ಲ. ಘಟಪಟಾದಿಗಳ ಇದಿರಿಟ್ಟು ಕೊಂಡರಿವೋಪಾದಿಯಲ್ಲಿ, ತನ್ನಿಂದ ವಸ್ತುವ ಭಿನ್ನವಿಟ್ಟುಕೊಂಡು ತಿಳಿವ ಖಂಡಿತಜ್ಞಾನಿಯೂ ಅಲ್ಲ. ಅಜ್ಞಾನಿ ಮುನ್ನವೇ ಅಲ್ಲ. ತನ್ನ ಲಿಂಗದ ನಿಜವನು ತಿಳಿಯದೆ ಇರುವ ಮತ್ತಜ್ಞಾನಿಯು ಮುನ್ನವೆ ಅಲ್ಲ; ಶೂನ್ಯನಲ್ಲ, ಜೀವನವರ್ತನೆಯುಳ್ಳಾತನು ಅಲ್ಲ. ನಿಶ್ಶೂನ್ಯಂಪರ ಮನ ವರ್ತನೆಯುಳ್ಳಾತನು ಮುನ್ನವೇ ಅಲ್ಲ, ದ್ವೈತಿಯಲ್ಲ, ಲಿಂಗಾಂಗವೆರ ಡಕ್ಕೆ ಭಿನ್ನವಿಟ್ಟುಕೊಂಡು ಪೂಜಿಸಿ, ಫಲಪ್ರದಂಗಳ ಪಡೆದನುಭವಿಸಿ, ಭವವನಯ್ದಿ ಹೋಗುವ ಸಿದ್ಧಾಂತಮಾರ್ಗವುಳ್ಳಾತನು ಅಲ್ಲ, ಅದ್ವೈತಿ ಮುನ್ನವೆ ಅಲ್ಲ. 'ಆತ್ಮಾಯಃಕೇವಲಶ್ಶಿವಃ' ಆತ್ಮನೆ ಬ್ರಹ್ಮವೆಂದು ನುಡಿವ ವೇದಾಂತಮಾರ್ಗವುಳ್ಳಾತನು ಮುನ್ನವೇ ಅಲ್ಲ. ಈ ಪ್ರಕಾರ ದಿಂದ ಹೇಳಲ್ಪಟ್ಟೀ ಉಭಯಾತ್ಮಕ ತಾನೆಯಾಗಿ ಈ ಎರಡರ ಸ್ವರೂಪ ವಾಗಿರುವ ಪರಬ್ರಹ್ಮವೇ ಶಿವಶರಣ ತಾನಾಗಿ, ಇದುಕಾರಣ ಈ ಷಟ್ ಸ್ಥಲಂಗಳು, ಆಗು, ಆಗೆ, ಮಹಾಲಿಂಗ, ಆ ಮಹಾಲಿಂಗದಿಂದ ಐಕ್ಯ, ಐಕ್ಯನಿಂದ ಶರಣ, ಶರಣನಿಂದ ಪ್ರಾಣಲಿಂಗಿ, ಪ್ರಾಣಲಿಂಗಿಯಿಂದ ಪ್ರಸಾದಿ, ಪ್ರಸಾದಿಯಿಂದ ಮಹೇಶ್ವರ, ಮಹೇಶ್ವರನಿಂದ ಭಕ್ತ, ಆ ಭಕ್ತ ನಿಂದ ಸರ್ವಾಚಾರ ಸಂಪತ್ತಿನಾಚರಣೆಯೆಲ್ಲ ಆದಂಥಾದ್ದೀಗ ಆಗು, ಹೋಗು. ಆ ಸರ್ವಾಚಾರ ಸಂಪತ್ತಿನಾಚರಣೆವಿಡಿದು, ಆಚರಿಸುಪ ಪರಿ ಯಂತರವೂ ಆಚರಿಸಿ, ಆ ಆಚರಣೆಯು ಸಮಾಪ್ತಿಯಾದ ಬಳಿಕ ಆ ಸರ್ವಾಚಾರ ಸಂಪತ್ತಿನಾಚರಣೆಯೆಲ್ಲಾ ಭಕ್ತನಲ್ಲಿ ಅಡಗಲು, ಆ ಭಕ್ತನೆ ಮಹೇಶ್ವರನಲ್ಲಿ, ಮಹೇಶ್ವರನೇ ಪ್ರಸಾದಿಯಲ್ಲಿ, ಪ್ರಸಾದಿಯೆ ಪ್ರಾಣ ಲಿಂಗಿಯಲ್ಲಿ, ಪ್ರಾಣಲಿಂಗಿಯೆ ಶರಣನಲ್ಲಿ, ಶರಣನೆ ಐಕ್ಯನಲ್ಲಿ, ಆ ಐಕ್ಯನೆ ಮಹಾಲಿಂಗದಲ್ಲಿ, ಅಡಗಿಹೋದಂಥಾದ್ದೀಗ, ಭಕ್ತನ ಅಷ್ಟವಿಧ ಸಕೀಲ, ಮಹೇಶ್ವರ ಅಷ್ಟವಿಧ ಸಕೀಲ, ಪ್ರಸಾದಿಯ ಅಷ್ಟವಿಧ ಸಕೀಲ, ಪ್ರಾಣ ಲಿಂಗಿಯ ಅಷ್ಟವಿಧ ಸಕೀಲ, ಶರಣನ ಅಷ್ಟವಿಧ ಸಕೀಲ, ಐಕ್ಯನ ಅಷ್ಟ ವಿಧ ಸಕೀಲ ಸಂಬಂಧವು. ಭಕ್ತನ ಅಷ್ಟವಿಧ ಸಕೀಲವೇ ಇಷ್ಟಲಿಂಗದ ಶಕ್ತಿಪೀಠದಲ್ಲಿ, ಮಹೇಶ್ವರನ ಅಷ್ಟವಿಧ ಸಕೀಲವೆ ಇಷ್ಟಲಿಂಗದ ಕಟ

ಯಲ್ಲಿ, ಪ್ರಸಾದಿಯ ಅಷ್ಟವಿಧ ಸಕೀಲವೆ ಇಷ್ಟಲಿಂಗದ ವರ್ತುಳದಲ್ಲಿ, ಪ್ರಾಣಲಿಂಗಿಯ ಅಷ್ಟವಿಧ ಸಕೀಲವೇ ಇಷ್ಟಲಿಂಗದ ಗೋಮುಖದಲ್ಲಿ, ಶರಣನ ಅಷ್ಟವಿಧ ಸಕೀಲವೇ ಇಷ್ಟಲಿಂಗದ ನಾಳದಲ್ಲಿ, ಐಕ್ಯನ ಅಷ್ಟ ವಿಧ ಸಕೀಲವೆ ಇಷ್ಟಲಿಂಗದ ಗೋಮುಖದಲ್ಲಿ, ಸ್ವಾಯತವಾಗಿರುವಂಥ ನಿಲುಕಡೆಯನು ಚೆನ್ನ, ಕಾಯಕಾಂತಿಯ ಲಾವಣ್ಯವನುಳ್ಳಂಥ, ಮಲ್ಲಿಕ, ಮಲ್ಲಿಗೆಯ ಹೂವಿನೋಪಾದಿಯಲ್ಲಿ, ಅರ್ಜುನ, ಧವಳಾಂಗವನುಳ್ಳ, ಆಯ್ಯಾ, ಎಲೆ ಸ್ವಾಮಿಯೆಂಬುದು ಸರಿ. ಮತ್ತಂತುಮಲ್ಲವೆ, ಚೆನ್ನಾ ಎಂದಡೆ, ಮಾದಾರಚನ್ನಯ್ಯಗಳು, ಮಲ್ಲಿಕಾ ಎಂದಡೆ ಮಲ್ಲಿಕಾ ವೇದಿಯು, ಅರ್ಜುನಯ್ಯ ಎಂದಡೆ ಕಿರೀಟಿಯು ಐಯ್ಯ. ನಿಮ್ಮ ಭಕ್ತ ರಾದ ಈ ಮೂವರಭಿದಾನದಿಂದ ಕರಸಿಕೊಳ್ಳಲ್ಪಟ್ಟ ಲಿಂಗವ, ನಿಮ್ಮ ಶಿವಶರಣರೆ ತಿಳಿದಿರ್ಪರು. ಮಿಕ್ಕಿನ ಅಜ್ಞಾನ ಜೀವಿಗಳೊರ್ವರಿಗೂ ತಿಳಿ ಯಬಾರದು ಎಂಬ ಶಬ್ದಕ್ಕರ್ಥವು.

ಶ್ರೀ ಅಕ್ಕಗಳ ವಚನವು ಸಂಪೂರ್ಣವು.

---

# ಶ್ರೀ ಪ್ರಭುದೇವರ ಸೃಷ್ಟಿ ವಚನವು

ಸ್ವತಂತ್ರ ಕರ್ತರ್ುವಾದ ಅಲ್ಲಮ ಪ್ರಭುಸ್ವಾಮಿಗಳೆಂಬ ನಿರಂಜನ ಗಣಾಧೀಶ್ವರನು, ನಿರೂಪಿಸಿದ ಸೃಷ್ಟಿವಚನ. ಊರ್ಧ್ವಸೃಷ್ಟಿ ಅಧೋ ಸೃಷ್ಟಿಗಳ ಕ್ರಮುವನ್ನು ಹೇಳುವ ವಚನ. ಮತ್ತಂತುಮಲ್ಲದೆ ಅಂಗ ಲಿಂಗೋದ್ಭವಂಗಳ ಸ್ವರೂಪವನ್ನು ಹೇಳುವ ವಚನ.

ಮೊಟ್ಟಮೊದಲೊಳಗೆ ಬ್ರಹ್ಮವು, ಏನೇನು ಇಲ್ಲದಂದು, ಅಷ್ಟತನು ಶಿವಶಕ್ತಿಗಳ ಸಾಕಾರಗಳೊಂದು ಕುರುಹು ಕಾಣಿಸದ ಕಾಲದಲ್ಲಿ, ಮಹಾ ದೊಡ್ಡಿತ್ತಾದ, ಘನ ಸಾಂದ್ರವಾದ ಶೂನ್ಯ, ತನುಶೂನ್ಯ, ಮನಶೂನ್ಯ, ಕರಣಶೂನ್ಯವಾದ ಬ್ರಹ್ಮನಾಗೊಪ್ಪುತಿರ್ದುದು. ಅಂತಿರ್ದ ಹಾಗೆ, ನಿರ ವಯ ನಿರಾಕಾರವಾಗೊಪ್ಪುತಿರ್ದ ಪರವಸ್ತು ತಾನೆ, ತನ್ನೆಯ ಮನೋ ಹರವಾದ, ಸುಗುಣಾದಂದ ಲೀಲಾವಿನೋದಕ್ಕೊದಗಿದಂಥಾದ್ದೇ ಸ್ವಲೀ ಲಾ. ಆ ಸ್ವಲೀಲೆಯು ಚಿತ್ತು, ಆ ಚಿತ್ತಿನ ಸ್ವಭಾವದಿಂದ ಆತ್ಮನೆಂದು, ಮೂಲಾತ್ಮನೆಂದು ಹೇಳುವ ಅಂಗಸ್ಥಲವೊಂದಾದುದು. ಅದು ಹ್ಯಾಗಂ ದಡೆ ಮೊದಲು ನಿಃಕಳ ಬ್ರಹ್ಮವು, ಆ ನಿಃಕಲ ಬ್ರಹ್ಮದಿಂದ ಚಿತ್ತು, ಆ ಚಿತ್ತುವಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಪುಟ್ಟಿದವು. ಆ ಚಿನ್ನಾದ ಚಿದ್ಬಿಂದು ಚಿತ್ಕಳೆ ಮೂಲಚಿತ್ತೆಂಬ ಚತುರ್ವಿಧವು ಘಟ್ಟಿಗೊಂಡು, ಅಖಂಡಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾ ಯಿತು. ಆ ಮಹಾಲಿಂಗದಿಂದ ಸದಾಶಿವಮೂರ್ತಿ ಪುಟ್ಟಿದನು. ಆ ಸದಾ ಶಿವನ ಪಂಚಮುಖದಿಂದ ಪಂಚಭೂತಂಗಳು ಪುಟ್ಟಿದವು. ಗೋಪ್ಯ ಮುಖದಲ್ಲಿ ಆತ್ಮನು ಪುಟ್ಟಿದನು. ಅಂತಪ್ಪ ಪರಬ್ರಹ್ಮದಿಂದಾದ ಚಿದಾತ್ಮ ನೆಂಬ ಜ್ಞಾನಕಲಾತ್ಮನೆಂದು ಹೇಳುವ ಅಂಗಸ್ಥಲವೊಂದಕ್ಕೆ ಕವಳಿಗೆ ಯಾಗಿ ಸೇರಿದ ಇಪ್ಪತ್ತೈದು ತತ್ತ್ವಂಗಳು ಅವೆಂತಾದವೆಲೆಸ್ವಾಮಿ ಯೆಂದು ಬೆಸಗೊಂಡೊಡೆ – ಅರಿವು ರೂಪವಾದ ಶ್ರವಣಾದಿ ಇಂದ್ರಿಯ ಗಳೈದು, ಕರ್ಮ ಕ್ರಿಯಾರೂಪವಾದ ವಾಗಾದಿ ಇಂದ್ರಿಯಂಗಳೈದು, ಶಬ್ದ ವಿಷಯವೆ ಮೊದಲಾದ ವಿಷಯಂಗಳೈದು, ಪ್ರಾಣಾದಿ ವಾಯುಗ ಳೈದು, ಮನ, ಬುದ್ಧಿ, ಚಿತ್ತ, ಅಹಂಕಾರ ಮೂಲಾತ್ಮನೆಂಬ ಅಂತಃ

ಕರಣಂಗಳೈದು- ಈ ಪ್ರಕಾರದಿಂದ ಹೇಳಲ್ಪಟ್ಟವುಗಳಿಂದ ಕೂಡಿರುವದೆ ಅಂಗವು. ತನ್ನಲ್ಲಿ ಏಕಾರ್ಥವಾಗಬೇಕೆಂಬ ನಿಮಿತ್ಯಭಕ್ತಿ ಹಿತಾರ್ಥವಾಗಿ, ಜೀವಾದ್ವೈತ ಭಕ್ತಿಕಾರಣಾರ್ಥವಾಗಿ ಶಿಷ್ಯನುಪಾವಸ್ಥೆ ಭಕ್ತಿ ನಿಮಿತ್ಯರ್ಥವಾಗಿ ಎಂಬುವದು ಸರಿ. ಮತ್ತಂತುಮಲ್ಲದೆ ಜ್ಞಾನೋದಯವಾಗಿ ಅಡಿಗೆರಗಿಬಂದ ಜ್ಞಾನಕಲಾತ್ಮನ ವಿಶ್ವಾಸಕ್ಕೋಸ್ಕರ ಪರಾತ್ಪರವಪ್ಪ ಆವುದು ಪರವಾಗಿಹುದೊ ಅದಕ್ಕೆ ಪರವಾದ ಮನೋಹರವಾದ ಮಹಾಲಿಂಗವು ತಾನೆ ಹನ್ನೊಂದು ತೆರನಾಯಿತು. ಏಕಾದಶ ತತ್ತ್ವ ಸ್ವರೂಪವನ್ನು ತಳೆಯಿತು. ಇಂತು ಏಕಾದಶ ತತ್ತ್ವ ಸ್ವರೂಪವನ್ನು ತಾಳಿದ ಪರಿಕ್ರಮಂ ತರುವಾಯದ ನಿಲುಕಡೆಯು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ – ಶಾಂತಿಶಕ್ತಿಯೆ ಮೊದಲಾದ ಶಕ್ತಿಗಳೈದು ಶಿವಸಾದಾಖ್ಯವೆ ಮೊದಲಾದ ಕರ್ತುಗಳೈದು, ಈ ಎಲ್ಲಕ್ಕೂ ಸರಿಯಾಗಿ ತೋರುವ ಮೇಲಣ ಮಹಾಲಿಂಗ ತತ್ತ್ವ ತಾನೊಂದು. ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗಸಂಬಂಧವಾದ ತತ್ತ್ವಂಗಳಿಪ್ಪತ್ತೈದು ಲಿಂಗಸಂಬಂಧವಾದ ತತ್ತ್ವಂಗಳು ಹನ್ನೊಂದು, ಅಂಗಲಿಂಗ ಸಂಬಂಧವಾದುಭಯತತ್ತ್ವಂಗಳು ಕೂಡಿ ಮುವ್ವತ್ತಾರು ತತ್ತ್ವಂಗಳಾದವು. ಈ ಮುವ್ವತ್ತಾರು ತತ್ತ್ವಂಗಳ ಸಮರಸೈಕ್ಯವೆಂಬುವದು ಸರಿ. ಅಂಗತತ್ತ್ವವಿಪ್ಪತ್ತೈದು ಕಲಾಶಕ್ತಿಯರ ಬಲದಿಂದ ಸಾದಾಖ್ಯಂಗಳಲ್ಲಿ ಸಮರಸವಾಗುವ ನಿಲುಕಡೆಯು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ ಕರ್ಮ ಕ್ರಿಯಾರೂಪವಾದ ವಾಗಾದಿ ಇಂದ್ರಿಯಂಗಳೈದು, ನಿವೃತ್ತಿ ಕಲಾಪರ್ಯಾಯನಾಮವನುಳ್ಳ ಕ್ರಿಯಾಶಕ್ತಿಯನ್ನು ಕೂಡಿ ಎಂಬಲ್ಲಿ – ಶಿವ ಎಂಬುದೆ ವಾಕ್ಕು, ಶಿವಾಚಾರವನ್ನು ದೃಢವಿಡುವುದೆ ಪಾಣಿ, ಗುರುಮಾರ್ಗಾಚಾರದಲ್ಲಿ ಆಚರಿಸುವದೆ ಪಾದ, ಅಧೋಗತಿಗಿಳಿಸುವ ಮಲತ್ರಯಂಗಳನ್ನು ವಿಸರ್ಜಿಸಿಬಿಡುವುದೆ ಪಾಯು, ಶಿವಾನುಭಾವಿಗಳ ಸತ್ಸಂಗದಲ್ಲಿ ಸದಾ ಆನಂದಿಸುವುದೇ ಗುಹ್ಯವು - ಈ ರೀತಿಯಾಗಿ ವಾಗಾದಿ ಕರ್ಮೇಂದ್ರಿಯಂಗಳು ನಿವೃತ್ತಿಯಾಗಿ, ನಿವೃತ್ತಿ ಕಲಾ ಪರಿಯಾಯ ನಾಮವನುಳ್ಳ ಕ್ರಿಯಾಶಕ್ತಿಯನ್ನೈದಿ, ಆ ಕ್ರಿಯಾಶಕ್ತಿಯ ಬಲದಿಂದ ಕರ್ಮಸಾದಾಖ್ಯ ಸ್ವರೂಪವಾದ ಆಚಾರಲಿಂಗವನ್ನೊಡಗೂ

ಡಿದಲ್ಲಿ ಪೃಥ್ವೀತತ್ತ್ವ ಬಯಲಾಯಿತು. ಪೃಥ್ವಿಯಳಿದು ಚಿತ್ಪೃಥ್ವಿಯ ಸ್ವರೂಪಿನಿಂದ ಭಕ್ತಂಗೊಡಲಾಗಲು ಆ ಭಕ್ತನು ಆಚಾರಲಿಂಗದಂಗ ವಾಗಿ ಆಚಾರಲಿಂಗದಲ್ಲಿಯೇ ಅಡಗಿದನು ಎಂಬುದರ್ಥ. ಶಬ್ದ ವಿಷ ಯವೇ ಮೊದಲಾದೈದು ತನ್ಮಾತ್ರೆಗಳು ಪ್ರತಿಷ್ಠಾ ಕಲಾಪರಿಯಾಯ ನಾಮವನುಳ್ಳ ಜ್ಞಾನಶಕ್ತಿಯನ್ನು ಕೂಡಿ ಎಂಬಲ್ಲಿ ಶಬ್ದ ಗುರು, ಸ್ಪರ್ಶನ ಲಿಂಗ, ರೂಪು ಶಿವಲಾಂಛನ, ರಸ ಶಿವಪ್ರಸಾದ, ಗಂಧ ಶಿವನಿರ್ಮಾಲ್ಯ, ಶಬ್ದಾದಿ ವಿಷಯಂಗಳೈದು ನಿವೃತ್ತಿಯಾಗಿ, ಪ್ರತಿಷ್ಠಾ ಕಲಾಪರಿಯಾಯ ನಾಮವನುಳ್ಳ ಜ್ಞಾನಶಕ್ತಿಯನ್ನು ಕೂಡಿ ಆ ಜ್ಞಾನಶಕ್ತಿಯ ಬಲದಿಂದ, ಕರ್ತೃ ಸಾದಾಖ್ಯ ಸ್ವರೂಪವಾದ ಗುರುಲಿಂಗವನ್ನೊಡಗೂಡಿದಲ್ಲಿ, ಅಪ್ಪುತತ್ತ್ವ ಬಯಲಾಯಿತು. ಅಪ್ಪುವಳಿದು ಚಿದಪ್ಪು ಸ್ವರೂಪಿನಿಂದ ಮಹೇಶ್ವರಂಗೊಡಲಾಗಲು, ಆ ಮಹೇಶ್ವರನು ಗುರುಲಿಂಗವಾಗಿ, ಗುರು ಲಿಂಗದಲ್ಲಿಯೆ ಅಡಗಿದನೆಂಬುದರ್ಥ. ಅರಿವು ರೂಪವಾದ ಶ್ರವಣಾದಿ ಇಂದ್ರಿಯಂಗಳೈದು, ವಿದ್ಯಾ ಕಲಾ ಪರಿಯಾಯ ನಾಮವನುಳ್ಳ ಇಚ್ಛಾ ಶಕ್ತಿಯನ್ನು ಕೂಡಿ ಎಂಬಲ್ಲಿ, ಶ್ರೋತ್ರದಲ್ಲಿ ಶಿವಕಥಾ ಶಿವಪುರಾಣಾದ್ಯರ ವಚನವಲ್ಲದೆ ಅನ್ಯವಪ್ಪ ಮಾಯಾ ಕುಶಾಸ್ತ್ರ ಕುಭಾಷೆಗಳಂ ಕೇಳದಿ ಹುದು, ತ್ವಕ್ಕಿನಲ್ಲಿ ಶ್ರೀ ವಿಭೂತಿ ರುದ್ರಾಕ್ಷಿ ಶಿವಲಿಂಗ ಧಾರಣವಲ್ಲದೆ ಅನ್ಯವಪ್ಪ ಮಾಯಾಚೋಹಂಗಳಂ ಧರಿಸದಿಹುದು, ನೇತ್ರದಲ್ಲಿ ಶಿವ ಲಿಂಗ ನಿರೀಕ್ಷಣೆಯಲ್ಲದೆ ಅನ್ಯವಪ್ಪ ಮಾಯಾ ಕುಶಾಸ್ತ್ರ ಕುಭಾಷೆಗಳಂ ರೂಪಂಗಳಂ ನೋಡದಿಹುದು, ಜಿಹ್ವೆಯಲ್ಲಿ ಶಿವಸುಖ ಪ್ರಸನ್ನೇತಿ ಪ್ರಸಾದ ಸ್ವೀಕಾರವಲ್ಲದೆ, ಅನ್ಯವಪ್ಪ ಮಾಯೋಚ್ಛಿಷ್ಟಂಗಳಂ ಭುಂಜಿಸ ದಿಹುದು, ಘ್ರಾಣದಲ್ಲಿ ಶಿವನಿರ್ಮಾಲ್ಯ ಗಂಧವಲ್ಲದೆ, ಅನ್ಯವಪ್ಪ ಮಾಯಾ ದುರ್ವಾಸನೆಯ ಘ್ರಾಣಿಸದಿಹುದು - ಈ ರೀತಿಯಲ್ಲಿ ಶ್ರೋ ತ್ರಾದಿ ಜ್ಞಾನೇಂದ್ರಿಯಂಗಳೈದು ನಿವೃತ್ತಿಯಾಗಿ, ವಿದ್ಯಾ ಕಲಾ ಪರಿ ಯಾಯ ನಾಮವನುಳ್ಳ ಇಚ್ಛಾಶಕ್ತಿಯನ್ನು ಕೂಡಿ, ಆ ಇಚ್ಛಾಶಕ್ತಿಯ ಬಲದಿಂದ ಮೂರ್ತಿ ಸಾದಾಖ್ಯ ಸ್ವರೂಪವಾದ ಶಿವಲಿಂಗವನ್ನೊಡಗೂಡಿ ದಲ್ಲಿ, ಅಗ್ನಿತತ್ತ್ವ ಬಯಲಾಯಿತು. ಅಗ್ನಿಯಳಿದು ಚಿದಗ್ನಿ ಸ್ವರೂಪಿ ನಿಂದ ಪ್ರಸಾದಿಗೊಡಲಾಗಲು ಆ ಪ್ರಸಾದಿಯು ಶಿವಲಿಂಗದಂಗವಾಗಿ,

ಆ ಶಿವಲಿಂಗದಲ್ಲಿಯೆ ಅಡಗಿದನೆಂಬುದರ್ಥ. ಪ್ರಾಣವಾಯುವೆ ಮೊದಲಾದ ವಾಯುಗಳೈದು, ಶಾಂತಿ ಕಲಾ ಪರಿಯಾಯ ನಾಮವನುಳ್ಳ ಆದಿ ಶಕ್ತಿಯನ್ನು ಕೂಡಿ ಎಂಬಲ್ಲಿ ಪ್ರಾಣವಾಯುವೆ ಸತ್, ಅಪಾನವಾಯುವೆ ಚಿತ್, ವ್ಯಾನವಾಯುವೆ ಆನಂದ, ಉದಾನವಾಯುವೆ ನಿತ್ಯ, ಸಮಾನ ವಾಯುವೆ ಪರಿಪೂರ್ಣ - ಈ ರೀತಿಯಲ್ಲಿ ಪ್ರಾಣಾದಿ ವಾಯುಗಳು, ಪಂಚಲಕ್ಷಣ ಸ್ವರೂಪಿನಿಂದ ನಿವೃತ್ತಿಯಾಗಿ, ಶಾಂತಿ ಕಲಾ ಪರಿಯಾಯ ನಾಮವನುಳ್ಳ ಆದಿಶಕ್ತಿಯನ್ನು ಕೂಡಿ, ಆ ಆದಿಶಕ್ತಿಯ ಬಲದಿಂದ ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮಲಿಂಗವನ್ನೊಡಗೂಡಿದಲ್ಲಿ ವಾಯುತತ್ತ್ವ ಬಯಲಾಯ್ತು. ವಾಯುವಳಿದು, ಚಿದ್ವಾಯು ಸ್ವರೂಪಿನಿಂದ ಪ್ರಾಣಲಿಂಗಿಗೊಡಲಾಗಲು, ಆ ಪ್ರಾಣಲಿಂಗಿಯು ಜಂಗಮಲಿಂಗಕ್ಕಂಗವಾಗಿ, ಆ ಜಂಗಮಲಿಂಗದಲ್ಲಿಯೆ ಅಡಗಿದನೆಂಬುದರ್ಥ. ಮನ, ಬುದ್ಧಿ, ಚಿತ್ತ, ಅಹಂಕಾರ ಮೂಲಾತ್ಮವೆಂದ್ಯೆದಂತಃಕರಣಂಗಳು, ಶಾಂತಾತೀತ ಕಲಾ ಪರಿಯಾಯ ನಾಮವನುಳ್ಳ ಪರಶಕ್ತಿಯನ್ನು ಕೂಡಿ ಎಂಬಲ್ಲಿ, ಮನದಲ್ಲಿ ಶಿವಧ್ಯಾನ, ಬುದ್ಧಿಯಲ್ಲಿ ನಿರ್ವಂಚನೆ, ಚಿತ್ತದಲ್ಲಿ ದಾಸೋಹ, ಅಹಂಕಾರದಲ್ಲಿ ನಿರಹಂಕಾರ ಜೀವನಳಿದು ಸಜ್ಜೀವ. ಈ ರೀತಿಯಲ್ಲಿ ಮನಸಾದಿ ಕರಣಂಗಳೈದು ನಿವೃತ್ತಿಯಾಗಿ ಶಾಂತಾತೀತ ಕಲಾ ಪರಿಯಾಯ ನಾಮವನುಳ್ಳ ಪರಶಕ್ತಿಯನ್ನು ಕೂಡಿ ಎಂಬಲ್ಲಿ ಆ ಪರಶಕ್ತಿಯ ಬಲದಿಂದ ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗವನ್ನೊಡಗೂಡಿದಲ್ಲಿ, ಆಕಾಶತತ್ತ್ವ ಬಯಲಾಯ್ತು. ಆ ಆಕಾಶವಳಿದು ಚಿದಾಕಾಶ ಸ್ವರೂಪಿನಿಂದ ಶರಣಂಗೊಡಲಾಗಲು, ಆ ಶರಣನು ಪ್ರಸಾದ ಲಿಂಗದಂಗವಾಗಿ, ಪ್ರಸಾದ ಲಿಂಗದಲ್ಲಿಯೆ ಅಡಗಿದನೆಂಬುದರ್ಥ. ಇಂತು ಈ ದೇಹಸಂಬಂಧವಾದಿಪ್ಪತ್ತೈದು ತತ್ತ್ವಂಗಳು ಕಲಾದಿಶಕ್ತಿಯರ ಬಲ ದಿಂದ, ಸಾದಾಖ್ಯಾದಿ ಲಿಂಗಗಳಲ್ಲಿ ಸಮರಸವಾದ ಕೂಡಲೆ, ಆ ಲಿಂಗ ಸಂಬಂಧವಾದ ಹನ್ನೊಂದು ತತ್ತ್ವಂಗಳು, ಒಂದೊಂದು ತತ್ತ್ವವು ಒಂದೊಂದು ತತ್ತ್ವದೊಡನೆ ಬೆರೆಯಲು ಎಂಬಲ್ಲಿ ನಿವೃತ್ತಿ ಕಲಾ ಪರ್ಯಾಯ ನಾಮವನುಳ್ಳ ಕ್ರಿಯಾಶಕ್ತಿಯೆ ಪ್ರತಿಷ್ಠಾ ಕಲಾ ಪರ್ಯಾಯ ನಾಮವನುಳ್ಳ ಜ್ಞಾನಶಕ್ತಿಯನ್ನು, ಪ್ರತಿಷ್ಠಾ ಕಲಾ ಪರಿಯ ನಾಮವನುಳ್ಳ

ಜ್ಞಾನಶಕ್ತಿಯೆ, ವಿದ್ಯಾ ಕಲಾ ಪರಿಯಾಯ ನಾಮುವನುಳ್ಳ ಇಚ್ಛಾಶಕ್ತಿ ಯನ್ನು, ವಿದ್ಯಾ ಕಲಾ ಪರ್ಯ್ಯಾಯ ನಾಮವನುಳ್ಳ ಇಚ್ಛಾಶಕ್ತಿಯೆ ಶಾಂತಿ ಕಲಾ ಪರ್ಯ್ಯಾಯನಾಮುವನುಳ್ಳ ಆದಿಶಕ್ತಿಯನ್ನು, ಶಾಂತಿಕಲಾ ಪರ್ಯ್ಯಾಯ ನಾಮುವನುಳ್ಳ ಆದಿಶಕ್ತಿಯೆ ಶಾಂತಾತೀತ ಕಲಾ ಪರ್ಯ್ಯಾಯ ನಾಮುವನುಳ್ಳ ಪರಶಕ್ತಿಯನ್ನು, ಶಾಂತಾತೀತ ಕಲಾ ಪರ್ಯ್ಯಾಯ ನಾಮು ವನುಳ್ಳ ಪರಶಕ್ತಿಯೆ ಶಾಂತಾತೀತೋತ್ತರ ಕಲಾ ಪರ್ಯ್ಯಾಯ ನಾಮುವ ನುಳ್ಳ ಚಿಚ್ಛಕ್ತಿಯನ್ನು ಬೆರದೇಕಾರ್ಥವಾಗಿದ್ದಾಗ ಎಂಬಲ್ಲಿ, ಕರ್ಮ ಸಾದಾಖ್ಯ ಸ್ವರೂಪವಾದ ಆಚಾರಲಿಂಗವೆ ಕರ್ತುಸಾದಾಖ್ಯ ಸ್ವರೂಪ ವಾದ ಗುರುಲಿಂಗದಲ್ಲಿ, ಕರ್ಮಸಾದಾಖ್ಯ ಸ್ವರೂಪವಾದ ಗುರುಲಿಂಗವೆ ಮೂರ್ತಿ ಸಾದಾಖ್ಯ ಸ್ವರೂಪವಾದ ಶಿವಲಿಂಗದಲ್ಲಿ, ಮೂರ್ತಿಸಾದಾಖ್ಯ ಸ್ವರೂಪವಾದ ಶಿವಲಿಂಗವೆ ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮಲಿಂಗದಲ್ಲಿ, ಅಮೂರ್ತಿ ಸಾದಾಖ್ಯ ಸ್ವರೂಪವಾದ ಜಂಗಮ ಲಿಂಗವೆ ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗದಲ್ಲಿ, ಶಿವಸಾದಾಖ್ಯ ಸ್ವರೂಪವಾದ ಪ್ರಸಾದಲಿಂಗವೆ ಮುಹಾಸಾದಾಖ್ಯ ಸ್ವರೂಪವಾದ ಮುಹಾಲಿಂಗದಲ್ಲಿ ಸಮರಸವಾಗಲು ಉಳಸ್ಥಲಂ, ಅಂಗಲಿಂಗದಾಚರಣೆ ಯುಡಗಿತು; ನಿಃಪತಿಯಾಗಿಹೋಯ್ತು. ಇಂತು ಅಂಗಲಿಂಗದಾಚರ ಣೆಯು ನಿಃಪತಿಯಾದ ಕೂಡಲೆ, ಪರಾತ್ಪರವಪ್ಪ ಮಹಾಲಿಂಗವು ಒಂದಾ ನೊಂದು ಪಯೋಧರೋಪಲವು ನೋಡನೋಡುತ ಕರಗಿ, ಶೀತಳ ನೀರಾದಂತೆ ತನ್ನ ಪರಮು ನಿರ್ಗುಣಾನಂದ ಲೀಲಾ ವಿಲಾಸದಿಂದಲೆ ತೋರಿಕೆಯನ್ನೆಲ್ಲಾ ತನ್ನಲ್ಲಿ ಒಳಗೊಂಡು, ತಾನೆಂದಿನಂತೆ ನಿರಾಕಾರವಾ ಯಿತು. ಆ ವಿಚಾರವು ಹ್ಯಾಗಿಪ್ಪುದೆಲೆ ಸ್ವಾಮಿಯೆಂದು ಬೆಸಗೊಂಡೊಡೆ ಗುರುವಾಕ್ಯಕ್ಕೆ ಸದೃಶವಾದ ಹರವಾಕ್ಯವನ್ನು ನಿರೂಪಿಸುತಿಹರು. ಪೂರ್ವ ದಲ್ಲಿ ಪ್ರಸಿದ್ಧವಾದ ಖಲದ ತಂಡುಲದೋಷಾದಿಯಲ್ಲಿ ಸಕಲ ತತ್ತ್ವಂಗ ಳಾವರ್ಣವಿಲ್ಲದ ಪರಬ್ರಹ್ಮವು (ಕರ್ತಾಕರ್ಮವಿವರ್ಜಯೆತ್) ಕರ್ತಾ- ಪೂಜಿಸುವ ಭಕ್ತನು, ಕರ್ಮ-ಪೂಜಾಕ್ರಿಯೆಗಳನ್ನು, ವಿವರ್ಜಯೇತ್- ಬಿಡಬೇಕು. ಅಂದರೆ ಇವೇನೂ ಇಲ್ಲದೆ ತಾನೊಂದೊಪ್ಪುತಿರ್ದಿತು ಹಾಗೆ ನಿರವಯ ನಿರಾಕಾರವಾಗೊಪ್ಪುತ್ತಿರ್ದ ಪರಬ್ರಹ್ಮವು ತಾನೆ

ಸಾಕಾರವಾದ ಶರಣನಾದನು. ಸಾಕಾರನಾದ ಶರಣನಾಗಿ, ಸರ್ವಾಚಾರ ಸಂಪತ್ತುವಿಡಿದಾಚರಿಸಿ, ಆ ಆಚರಣೆ ಸಮಾಪ್ತವಾದ ಬಳಿಕ ಸ್ವಯ ಮೇವ ಅವನ್ನೆಲ್ಲವ ತನ್ನಲ್ಲೊಳಕೊಂಡು, ತಾನೆಂದಿನಂತೆ ನಿರಾಕಾರವಾಗುತಿದ್ದಿತು. ಅಂತಿರ್ದ ಪರಬ್ರಹ್ಮಕ್ಕೆ ಅಂತರಂಗವು ಬಹಿರಂಗವು, ಭೂವ್ಯಾಕಾಶ ಮೊದಲಾದ ಹತ್ತು ದಿಕ್ಕುಗಳು, ಇಲ್ಲ - ನಿರ್ದ್ವಂದಂ, ಕರ್ತೃ ಕರ್ಮಗಳೆಂಬ ಭೇದಪ್ರಪಂಚವಿಲ್ಲದಂಥಾದ್ದು. ಪರಮಂ ಪದಂ-ಉತ್ಕೃಷ್ಟವಾದ ಪರಬ್ರಹ್ಮವಾದಂಥಾದ್ದು. ಹೀಗೆಂಬುದಾಗಿ ಶ್ರುತಿವಾಕ್ಯವು ಹೇಳುತ್ತಿಹುದಾದಕಾರಣ ಪ್ರಥಮದಲ್ಲಿ ನಿರೂಪಣವ ಪಾಲಿಸಿದ ಅಂಗಸಂಬಂಧವಾದ ತತ್ತ್ವಂಗಳಿಪ್ಪತ್ತೈದು, ದ್ವಿತೀಯದಲ್ಲಿ ನಿರೂಪಣವ ಪಾಲಿಸಿದ ಲಿಂಗಸಂಬಂಧವಾದ ತತ್ತ್ವಂಗಳು ಹನ್ನೊಂದು. ಈ ಉಭಯ ತತ್ತ್ವಂಗಳು ಕೂಡಿ ಮುವ್ವತ್ತಾರು ಒಂದರೊಳಗೊಂದು ಸಮರಸವಾಗಿ ಎಂಬಲ್ಲಿ ಅಂಗತತ್ತ್ವವಿಪ್ಪತ್ತೈದು ಕಲಾಶಕ್ತಿಯರ ಬಲದಿಂದ ಸಾದಾಖ್ಯ ಲಿಂಗಂಗಳಲ್ಲಿ ಸಮರಸವಾಗಿ ಸರ್ವಶೂನ್ಯವನ್ನೈದಿದ, ಸಮಸ್ತ ತೋರುವ ತೋರಿಕೆಯೆಲ್ಲ ತನ್ನಲ್ಲಿ ಒಳಕೊಂಡು, ತಾನೆಂದಿನಂತೆ ನಿರಾಕಾರ ಸ್ವರೂಪವನ್ನು ತಾಳಿದ ಪರಿಕ್ರಮದ ನಿರ್ಣಯದ ಬೆಡಗು ತತ್ತ್ವಮಸ್ಯಾದಿ ವಾಕ್ಯಂಗಳಲ್ಲಿ 'ತತ್-ತ್ವಂ-ಅಸಿ' ಎಂಬ ಪದತ್ರಯಂಗಳ ಸ್ವರೂಪವನ್ನು ಹೇಳುವ ಉಪನಿಷದ್ವಾಕ್ಯದ ಅರ್ಥಂಗಳಲ್ಲಿ ಕಾಣಲಾಯಿತು. ಅದೆಂತೆಂದಡೆ [ಶ್ಲೋ|| ತತ್ಪದನೋಚ್ಯತೆಲಿಂಗಂ] ತತ್ಪದದಿಂದ ಹೇಳುವುದೇ ಲಿಂಗಂ. ಶಿವತತ್ತ್ವವನೊಂದೊಳಕೊಂಡು ತೋರುವ ಮಹಾಲಿಂಗವೆಂದು ಉಚ್ಯತೆ-ಹೇಳಲ್ಪಟ್ಟಿತು. [ತ್ವಂಪದೆನಾಂಗಮೀರಿತಂ] ತ್ವಂಪದದಿಂದ ಹೇಳುವುದೆ ಅಂಗಂ ಇಪ್ಪತ್ತೈದು ತತ್ತ್ವವನೊಳಕೊಂಡು ತೋರುವ ಶರೀರವೆಂದು ಈರೀತಿ ಹೇಳಲ್ಪಟ್ಟಿತು. [ಅನಯೊರೈಕ್ಯಭಾವೆನಸಂಬಂಧೊಸಿಪದೇನಚ] ಅನಯೊ - ಈ ಲಿಂಗಾಂಗವೆಂಬೆರಡರ, ಐಕ್ಯಭಾವೆನ-ಕೂಟಸ್ವರೂಪವಾದ ಭಕ್ತಿಯುಳ್ಳ, ಪದೇನ-ಪದದೊಡನೆ, ಸಂಬಂಧಃ-ಸಮರಸವು, ಅಸಿ-ಆಗಿದ್ದಿ. ಅಂದರೆ ವಿದ್ಯಾತತ್ತ್ವವನೊಳಕೊಂಡು ತೋರುವ ಅಸಿಪದವು – ಹೀಗೆಂದು ಶೃತಿವಾಕ್ಯವು ಹೇಳುವುದು. ಲಿಂಗಾಂಗವೆಂಬುಭಯಪದದ ಐಕ್ಯವೆ ಅಸಿಪದವು. ಮತ್ತು

ವಿದ್ಯಾತತ್ತ್ವ ಮಹತ್ವನೊಳಗೊಂಡು ತೋರುವ ಅಸಿಪದವೆಂದು ಹೇಳುವುದು. ಒಂದುವೇಳೆ ಪರಶಿವನಿಗೆ ವಿಶ್ವವ ಸೃಜಿಸಿ ವಿನೋದಿಸಬೇಕೆಂಬ, ಸಗುಣಾನಂದ ಲೀಲಾವಿಲಾಸದ ನೆನಹು ತೋರಿದೊಡೆ 'ಇದಂಭೂತ್ವಾ' ಎಂದು ನೆನದಾಕ್ಷಣವೆ ಅನಂತಕೋಟಿ ಬ್ರಹ್ಮಾಂಡ ತಂಡಗಳಂ ಪುಟ್ಟಿಸಿ, ಅದರೊಳಗಿರುವ ದೇವದಾನವ ಮಾನವಾದಿಗಳೆ ಭೃತ್ಯರಾಗಿ, ತಾನೇ ಕರ್ತನಾಗಿ ಅವರಿಂದ ಪೂಜಾ ನಮಸ್ಕಾರವ ಕೈಕೊಂಡು, ಅವರವರ ಮನೋಭೀಷ್ಟಂಗಳಂ ಕೊಟ್ಟು ವಿನೋದಿಸಬಲ್ಲನು. ಒಂದುವೇಳೆ ಪರಶಿವನಿಗೆ ಆ ಲೀಲೆ ಸಾಕಾದಡೆ 'ಹುತಭುಕ್' ಎಂದು ನೆನದಾಕ್ಷಣವೆ ಅವನ್ನೆಲ್ಲಾ ತನ್ನಲ್ಲಿ ಒಳಕೊಂಡು ತಾನೆಂದಿನಂತೆ ನಿರಾಕಾರನಾಗಿರುಬಲ್ಲನು. ಸಾವಯವ, ನಿರವಯವ ಲೀಲೆಗಳೆರಡನ್ನು ಮೀರಿದಾತನಾಗಿ ಏನೇನೂ ಇಲ್ಲದೆ ತೋರುವ ತೋರಿಕೆ ಒಂದಕ್ಕೂ ಕುರುಹುಗಾಣಿಸದ ಬ್ರಹ್ಮವಾಗಿ ಒಪ್ಪುತ್ತಿರುವನು. ಎಲೆ ಸ್ವಾಮಿ ನಮ್ಮ ಷಟ್‌ಸ್ಥಲ ಬ್ರಹ್ಮಿಗಳಿಗೆ ಕರ್ತನಾದ ಗುಹೇಶ್ವರ ಲಿಂಗವು ಸರ್ವರ ಹೃದಯಾಂತರ್ಯಾಮಿಯಾದ ಪರಶಿವ ಲಿಂಗಮೂರ್ತಿಯು ಎಂಬುದರ್ಥ. ಪ್ರಭುದೇವರು ನಿರೂಪಿಸಿದ ಸೃಷ್ಟಿಯ ವಚನವು ಸಮಸ್ತ ಶಿವಶರಣರ ಶ್ರೋತ್ರ ಮುಖದಲ್ಲಿಯೆ ಮುಕ್ತವಾಯಿತು. ಇಂತಪ್ಪ ಜ್ಞಾನಶಾಸ್ತ್ರವನ್ನು ಬರೆದು ಪಾಠವ ಮಾಡಿಕೊಂಡು ಜ್ಞಾನಗುರುಗಳಿದ್ದೆಡೆ ಪೋಗಿ, ದೀರ್ಘದಂಡ ನಮಸ್ಕಾರವಂ ಮಾಡಿ, ಭಕ್ತಿಯುಪಚಾರಂಗಳಿಂದ, ಇದರ ಅರ್ಥಾಭಿಪ್ರಾಯವನ್ನು ಶ್ರೋತ್ರಮುಖದಲ್ಲಿ ಕೇಳಿ, ಮನೋಮುಖದಲ್ಲಿ ಆರೈಸಿ, ಹೃದಯ ಮುಖದಲ್ಲಿಂಬುಗೊಂಡು, ಅಂಗವ ಮಾಡಿಕೊಂಡು ಆಚರಿಸುವ ಶಿವಶರಣರುಗಳೆಲ್ಲರೂ ನಿರತಿಶಯ ಜ್ಞಾನದ ನಿಜೈಶ್ವರ್ಯವನ್ನು ಪಡೆದು ಸುಖದಿಂದ ಬಾಳುತಿಹರೆಂಬುದು ಈ ಶಾಸ್ತ್ರದ ಫಲಶೃತಿಯು ಎಂಬುದರ್ಥ.

ಶ್ರೀ ಪ್ರಭುದೇವರ ಸೃಷ್ಟಿ ವಚನವು ಸಮಾಪ್ತವು.

———

# ಶ್ರೀ ಚೆನ್ನಬಸವ ವಚನಾಮೃತ

## ಷಟ್‌ಸ್ಥಲಗಳು

೧. ಕಿಂಕುರ್ವಾಣತೆಯಿಂದ ಉಳ್ಳುದನರಿತು ಮಾಡುವಲ್ಲಿ ಭಕ್ತ, ನಿಷ್ಠೆ ನಿಬ್ಬೆರಸಿ ಗಟ್ಟಿಗೊಂಡು ಅಭಿಲಾಷೆ ಸಮನಿಸದೆ ಪರಿಚ್ಛೇದ ಬುದ್ಧಿಯುಳ್ಳಲ್ಲಿ ಮಾಹೇಶ್ವರ, ಅನರ್ಪಿತವ ಸಮನಿಸದೆ ಬಂದುದ ಕಾಯದ ಕರಣದ ಕೈಗಳಲ್ಲಿ ಕೊಟ್ಟು ಲಿಂಗ ಸಹಿತ ಭೋಗಿಸುವಲ್ಲಿ ಪ್ರಸಾದಿ, ಪ್ರಾಣಕ್ಕೆ ಪ್ರಾಣವಾಗಿ ಕಾಲಸ್ಥಿತಿಯನರಿದು ಎಚ್ಚರಿಕೆ ಕುಂದದಿಪ್ಪಲ್ಲಿ ಪ್ರಾಣಲಿಂಗಿ, ತನಗೆ ಲಿಂಗವಾಗಿ ಲಿಂಗಕ್ಕೆ ತಾನಾಗಿ ಹೆಚ್ಚು ಬೇರಿಲ್ಲದಿರ್ದಡೆ ಶರಣ, ಸದಾಚಾರ ಸಂಪತ್ತಿನಲ್ಲಿ ಬಂದ ಅನುಭಾವವನು ಮೀರಿ ಹೆಸರಡಗಿದ ಸುಖವದು ಲಿಂಗೈಕ್ಯ. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣಂಗಲ್ಲದೆ ಷಟ್‌ಸ್ಥಲವಪೂರ್ವ.

### ಭಕ್ತಸ್ಥಲ

೨. ಬಟ್ಟಬಯಲೆಲ್ಲ ಗಟ್ಟಿಗೊಂಡಡೆ, ಸ್ವರ್ಗ ಮರ್ತ್ಯ ಪಾತಾಳಕ್ಕೆ ಠಾವಿನ್ನೆಲ್ಲಿಹುದೋ! ಮೇಘ ಜಲವೆಲ್ಲ ಮುತ್ತಾದಡೆ ಸಪ್ತಸಾಗರಂಗಳಿಗೆ ಉದಕವಿನ್ನೆಲ್ಲಿಹುದೋ! ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿಗಳಾದಡೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೋ! ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಾವಿರಕ್ಕೊಬ್ಬ ಸತ್ಯ, ಲಕ್ಷಕ್ಕೊಬ್ಬ ಭಕ್ತ, ಕೋಟಿಗೊಬ್ಬ ಶರಣ.

೩. ಭಕ್ತನು ಶಾಂತನಾಗಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಭೂತಹಿತ ವಚನವ ನುಡಿಯಬೇಕು. ಸಕಲ ಪ್ರಾಣಿಗಳ ತನ್ನಂತೆ ಭಾವಿಸುವುದು. ಗುರುಲಿಂಗ ಜಂಗಮಕ್ಕೆ (ತನು ಮನ ಧನಗಳಲ್ಲಿ) ನಡೆಯಿಸಬೇಕು. ಅಪಾತ್ರದಾನವ ಮಾಡಲಾಗದು. ಸಕಲೇಂದ್ರಿಯಂಗಳ ತನ್ನ ವಶವ ಮಾಡಬೇಕು. ಇದೇ ಮೊದಲಲ್ಲಿ ದೇಹ ಶೌಚ ನೋಡಾ. ಲಿಂಗವ ಪೂಜಿಸಿ ಪ್ರಸಾದವ ಪಡೆವಡೆ, ಇದೇ ಸಾಧನ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ.

೪. ಪರುಷದ ಪರ್ವತದಲ್ಲಿ ಕಬ್ಬುನ ಉಂಟೇ ಅಯ್ಯ? ಅಷ್ಟ ವಿಧಾರ್ಚನೆ ಷೋಡಶೋಪಚಾರವ ಮಾಡುವಾತಂಗೆ ಅವಗುಣ ಉಂಟೆ ಅಯ್ಯ? ಇದು ಕಾರಣವಾಗಿ, ಭಕ್ತಕಾಯ ಮಮಕಾಯವಯ್ಯ ಕೂಡಲ ಚೆನ್ನಸಂಗಮದೇವಾ.

೫. ಭವಿತನಕ್ಕೆ ಹೇಸಿ ಭಕ್ತನಾದ ಬಳಿಕ, ಆ ಭವಿಸಂಗ ಭಂಗವೆಂದರಿವುದು ನೋಡಾ. ಭವಿಮಿಶ್ರದ ಭಂಗಗಾರರು ನಮ್ಮ ಕೂಡಲ ಚೆನ್ನ ಸಂಗಮ ದೇವರಲ್ಲಿ ಅವರು ಅತ್ತಲೂ ಅಲ್ಲ ಇತ್ತಲೂ ಅಲ್ಲ.

೬. ಮಂಡಲ ಸುತ್ತಿದ ಹಾವಿನಂತೆ ಮಡಿಲಲ್ಲಿ ಕಟ್ಟಿದರೇನು? ಕೊರಳ ಸುತ್ತಿದ ಹಾವಿನಂತೆ ಕೊರಳಲ್ಲಿ ಸುತ್ತಿದರೇನು? ಹುಸಿ ಕಳವು ಪರದಾರ ಅನ್ಯದೈವ ಭಜನೆ ಭವಿ ಬಳಕೆ ಬಿಡದನ್ನಕ್ಕರ ಲಿಂಗಭಕ್ತನೆನಿಸಬಾರದು. ಭಕ್ತ ಲಿಂಗವೆನಲಿಲ್ಲ. ಆಚಾರ ಸಹಿತ ಭಕ್ತ ಅನಾಚಾರ ಸಹಿತ ನರರು ಇಂತೆನಲಾಗಿ ಆಚಾರ ಭ್ರಷ್ಟರಾದ ಅನಾಮಿಕರ ನಮ್ಮ ಕೂಡಲ ಚೆನ್ನಸಂಗಯ್ಯ ಬಲ್ಲನಾಗಿ ಒಲ್ಲನು.

೭. ತನುವಿಲ್ಲದ ಭಕ್ತ ಮನವಿಲ್ಲದ ಭಕ್ತ ಧನವಿಲ್ಲದ ಭಕ್ತ
ಪಂಚೇಂದ್ರಿಯ ಸುಖವಿಲ್ಲದ ಭಕ್ತ ಕಾಲವಿಲ್ಲದ ಭಕ್ತ
ಕರ್ಮವಿಲ್ಲದ ಭಕ್ತ ಕಲ್ಪಿತವೆಂಬುದನರಿಯದ ಭಕ್ತ
ಅಶನವನರಿಯದ ಭಕ್ತ ವ್ಯಸನಕ್ಕೆಳಸದ ಭಕ್ತ
ಹುಸಿನುಸುಳು ನುಡಿಯದ ಭಕ್ತ ಅರಿಷಡ್ವರ್ಗವನರಿಯದ ಭಕ್ತ
ಗುರುವಿಂಗಾಧಾರ ಭಕ್ತ ಲಿಂಗಕ್ಕಾಧಾರ ಭಕ್ತ
ಜಂಗಮಕ್ಕಾಧಾರ ಭಕ್ತ ಪ್ರಸಾದಕ್ಕಾಧಾರ ಭಕ್ತ
ಕೂಡಲ ಚೆನ್ನಸಂಗಯ್ಯನಲ್ಲಿ ಎನ್ನ ಮಾತಾಪಿತನೀ ಸದ್ಭಕ್ತನು.

೮. ನಿಮ್ಮ ಭಕ್ತಂಗೆ ಮಲತ್ರಯವಿಲ್ಲ. ಅದೇನು ಕಾರಣವೆಂದರೆ. ತನುವ ಸದಾಚಾರಕ್ಕರ್ಪಿಸಿ ಮನವ ಮಹಾಲಿಂಗಭಾವದಲಿರಿಸಿ ಧನವ ನಿಮ್ಮ ಶರಣರ ಸೋಹಕ್ಕೆ ಸವೆಯಬಲ್ಲನಾಗಿ, ಇಂತೀ ತ್ರಿವಿಧನ ತ್ರಿವಿ

ಧಕ್ಕೆ ಕೊಟ್ಟ ಬಳಿಕ ಆ ಭಕ್ತನ ಮನ ನಿಶ್ಚಿಂತ. ಆ ಭಕ್ತನ ತನು ನಿರ್ಮಳ, ಆ ಭಕ್ತನ ಧನ ನಿರ್ವಾಣ, ಇಂತಪ್ಪ ಭಕ್ತ ಪ್ರಸಾದ ಕಾಯ ವಯ್ಯಾ ಕೂಡಲ ಚೆನ್ನಸಂಗಮದೇವಾ.

೯. ಗತಿ, ಪದ, ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ. ಗತಿ, ಪದ, ಮುಕ್ತಿ ವಿರಹಿತ ಭಕ್ತ. ಹಮ್ಮು ಬಿಮ್ಮು ಗಮನ ನಾಸ್ತಿಯಾದಾತ ಜಂಗಮ. ಮಾಡುವರೆ, ಭಕ್ತ ಮಾಟದೊಳಗಿಲ್ಲದಿರಬೇಕು. ಬೇಡುವಡೆ, ಜಂಗಮ ಕೊಂಬುವದರೊಳಗಿಲ್ಲದಿರಬೇಕು. ಪ್ರಾಣವಿಲ್ಲದಾತ ಭಕ್ತ. ರೂಹಿಲ್ಲದಾತ ಜಂಗಮ ಎಂದಡೆ, ಪ್ರಚ್ಛನ್ನವಾಗಿ ಲೋಕಕ್ಕೆ ತೋರಿ, ಲೋಕಕ್ಕೆ ಅದೃಶ್ಯವಾಗಿರಬೇಕು. ಜಲಚರಾದಿಗಳ ಪಥದಂತೆ ಶಿಶು ಕಂಡ ಕನಸಿನಂತೆ, ಮನ ಉಂಡ ರುಚಿಯಂತೆ, ವೀರಶೈವಾಚಾರ ಸಂಪನ್ನನಾದ ಸಿದ್ಧಾಂತಿಗಿದು ಚಿಹ್ನವು. ಇಂತಲ್ಲದೆ, ಹಗರಣದ ಓಗರ ಹಳಸಿದಂತೆ, ಕುಹಕನ ವಾದ್ಯದಂತೆ ನಗೆಗೆಡೆಯಾಗುತ್ತಿದ್ದಾನೆ. ಬೇರುಂಡು ಬಾಯಿ ಒಡೆದಂತೆ, ಇಂತಪ್ಪರ ಭಕ್ತನೆಂತೆಂಬೆ? ಜಂಗಮವೆಂತೆಂಬೆ? ಆ ಭಕ್ತ ಜಂಗಮದ ಘನವನುಪಮಿಸಬಾರದಯ್ಯಾ, ಕೂಡಲ ಚೆನ್ನಸಂಗಮದೇವಾ.

೧೦. ತನುಮನ ಬಳಲದೆ ಉದ್ದಂಡ ವೃತ್ತಿಯಲ್ಲಿ ಧನವ ಗಳಿಸಿ ದಾಸೋಹವ ಮಾಡಿ ಭಕ್ತರಾದೆವೆಂಬವರ ಮುಖವ ತೋರದಿರಯ್ಯಾ ಎನಗೆ. ಅವನಲ್ಲಿಯೇ ಧನ ಚೋರ, ಅವ ಪಾಪಿ ಕೋಪಿ ಪರಿಭ್ರಷ್ಟ. ಅವನ ಕಾಯಕವ ವಿಚಾರಿಸದೆ ಅವನ ಮನೆಯಲ್ಲಿ ಹೊಕ್ಕು, ಲಿಂಗಾರ್ಚನೆಯ ಮಾಡುವ ಜಂಗಮಕ್ಕೆ ಏಳನೆಯ ಪಾತಕ. ಇಂತಪ್ಪ ಗುರು ಶಿಷ್ಯ ಜಂಗಮರ ಬಾಳುವೆ ಹುಲಿಕವಿಲೆಯ ತಿಂದು ಮಿಕ್ಕಿದ ನರಿ ತಿಂದಂತಾಯಿತ್ತು ಕಾಣಾ ಕೂಡಲ ಚೆನ್ನಸಂಗಮದೇವಾ.

## ಮಹೇಶ್ವರ ಸ್ಥಲ

೧೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ. ಛಲ ಬೇಕು ಶರಣಂಗೆ ಪರದೈವವ

ನೊಲ್ಲೆನೆಂಬ. ಛಲ ಬೇಕು ಶರಣಂಗೆ ಲಿಂಗ ಜಂಗಮ ಒಂದೆಂಬ. ಛಲ ಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ. ಛಲ ಬೇಕು ಶರಣಂಗೆ ಪ್ರಸಾದ ದಿಟವೆಂಬ. ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವಯ್ಯ.

೧೨. ಲಿಂಗನೈಷ್ಠೆ ನಿಬ್ಬೆರಗು ಗಟ್ಟಿಗೊಂಡೊಡೆ ಮಹೇಶ್ವರ. ಏಕೋಭಾವದಲ್ಲಿ ಸೊಮ್ಮು ಸಂಬಂಧ ಆಹ್ವಾನ ವಿಸರ್ಜನ ನಿರ್ಭಾವ ಬುದ್ಧಿ ನೆಲೆಗೊಂಡೊಡೆ ಆತ ಮಹೇಶ್ವರ. ಗುರು ಮುಖದಲ್ಲಿ ಶುದ್ಧವಾಗಿ ಪಂಚಭೂತದ ಹಂಗಡಗಿದೊಡೆ ಆತ ಮಹೇಶ್ವರ. ಪರದೈವದ ಪೂಜೆ ಮಾನವರ ಸೇವೆ, ಪರಧನ ಪರಸ್ತ್ರೀ ಹಿಂಸೆಯುಂ ಬಿಟ್ಟು ಏಕಲಿಂಗನಿಷ್ಠನಾಗಿರಬೇಕು. "ದಾಸತ್ವಂ ವೀರದಾಸತ್ವಂ" ಎಂಬ ಶೃತಿಯರ್ಥವ ನೋಡಿ, ನಿಯತನಾಗಬಲ್ಲಡೆ ಆತ ಮಹೇಶ್ವರನಪ್ಪನಯ್ಯ. ಗುರುಮಾರ್ಗವೆ ತನಗೆ ಸಮ್ಮತವಾಗಿ, ತನ್ನ ಮಾರ್ಗವೆ ಗುರುವಿಗೆ ಸಮ್ಮತವಾಗಿ ವೀರಶೈವಾಚಾರ ಸಂಪನ್ನವಾಗಿರಬಲ್ಲಡೆ ಆತ ಮಹೇಶ್ವರನಪ್ಪಯ್ಯ. ಇಂತೀ ಸಮ್ಮತದ ವಿವರವನರಿಯದೆ ನಾನು ಮಹೇಶ್ವರ ತಾನು ಮಹೇಶ್ವರರೆಂಬರಯ್ಯ. ಈ ಮೂಕೊರೆಯರ ಮೆಚ್ಚುವನೆ ನಮ್ಮ ಕೂಡಲ ಚೆನ್ನಸಂಗಮದೇವ.

೧೩. ಕೃತಯುಗ ತ್ರೇತಾಯುಗ ದ್ವಾಪರಯುಗ ಕಲಿಯುಗವೆಂಬ ನಾಲ್ಕುಯುಗಂಗಳಿಗೆ
ಸತ್ಯಲೋಕ ತಪೋಲೋಕ ಜನಲೋಕ ಸ್ವರ್ಗಲೋಕಕ್ಕೆ ಅತಿಶಯವೆನಿಪ
ರುದ್ರಲೋಕವನೆ ಮರ್ತ್ಯಕ್ಕೆ ತಂದು ಕಲ್ಯಾಣವಂ ಮಾಡಿ
ಮಹಾಘನತರಮಪ್ಪ ಭಕ್ತಿಯುಂ ಪುಟ್ಟಿಸಿದ
ಬಸವರಾಜದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ
ದಿವ್ಯ ಶ್ರೀಪಾದ ಪದ್ಮಾರಾಧಕನಾಗಿ ನಾನು ಬಲ್ಲೆನೆಂಬ ಗರ್ವವಿಲ್ಲದೆ
ನೀವು ಕೊಟ್ಟ ಅನುಗ್ರಹದ ಬಿನ್ನಪವನವಧರಿಸುವುದು
ಭಕ್ತಿಸೂಕ್ಷ್ಮ ಭಕ್ತಿಕಟ್ಟಳೆಯ ಕ್ರಮವನು

ಶರಣಸತಿ ಲಿಂಗಪತಿಯಾದ ಸಂಬಂಧವನು
ಪಾದೋದಕ ಪ್ರಸಾದವಂ ಕೊಂಬ ನಿರ್ಣಯವನು
ಇಂತೀ ಶಿವಾದ್ವೈತ ಸತ್ಕ್ರಿಯಾಚಾರವನು
ನಾನು ಬಿಲ್ಲಪ್ಪನು ಬಾಲನ ತೊದಲು ನುಡಿಯಿಂದ
ವಿಸ್ತರಿಸಿ ಪೇಳ್ವೆನು ಮಹಾಮಹಿಮರು ಕೇಳಿರಯ್ಯಾ
ಶೈವ ಸ್ವೈವೆರಗಾದ ಪಾಶುಪತಿ ಪದವನರಿಯ
ಕಾಳಾಮುಖ ಕಂಗೆಟ್ಟ ಮಹಾವ್ರತಿ ಮದವೇರಿದ
ಸನ್ಯಾಸಿ ಪಾಷಂಡಿಯಾದ ಕಾಪಾಲಿ ಮರುಳಾಗಿ ತಿರುಗಿದ
ಈ ಆರು ದರ್ಶನಂಗಳು ಸದ್ಭಕ್ತಿಯ ಪಥಕ್ಕೆ ಸಲ್ಲವು ಕೇಳಿರಂಣಾ
ಏಳೇಳು ಭವದಲ್ಲಿ ಭವಿಯಾಗಿ ಬಂದು
ಶ್ರೀಗುರುವಿನ ಕರುಣಾಕಟಾಕ್ಷ ನಿರೀಕ್ಷಣೆಯಿಂದ
ಅಂಗದ ಮೇಲೆ ಲಿಂಗ ಪ್ರತಿಷ್ಠೆಯಂ ಮಾಡಿಕೊಂಡು
ಆರು ದರ್ಶನಂಗಳಂ ಮೀರಿದ ಸ್ಥಲವಿಟ್ಟು
ವೀರ ಮಾಹೇಶ್ವರತ್ವಮಂ ಪಡೆದು
ಮರಳಿ ತನ್ನ ಪೂರ್ವದ ಕುಲವಂ ಬೆರಸಿದಡೆ
ಒಡೆದ ಮಡಿಕೆಯ ಓಡಿನಂತಿಹರು ಕೇಳಿರಂಣಾ
ಮತ್ತೆ ತನ್ನ ಬಂಧುಗಳೆಂದು ಪ್ರಾಣಸ್ನೇಹವಂ ಮಾಡಿ
ಮಾಯಾ ಮೋಹದಿಂ ಕಿಂಚಿನ್ಮಾತ್ರ ಬೆರಸಿದಡೆ
ಅವ ಪಂಚಮಹಾ ಪಾತಕ ರೌರವನರಕಿ
ಅವ ಭಕ್ತನೆಂದು ನೋಡಿದಡೆ ನುಡಿಸಿದಡೆ ಸಮಪಂಕ್ತಿಯಲ್ಲಿ ಕುಳ್ಳಿತ್ತರೆ
ಅವನಿಗೆ ಕುಂಭೀ ಪಾತಕ ನಾಯಕನರಕ ತಪ್ಪದು ಕೇಳಿರಂಣಾ
ಅದೆಂತೆಂದಡೆ ಭಕ್ತಂಗೆ ಭವಿನೇಮಸ್ಥರು ಸಲ್ಲರಾಗಿ
ಅದೇನು ಕಾರಣವೆಂದಡೆ ಭವಿಯೇ ಶ್ವಪಚ ನಿಯಮಸ್ಥನೇ ಸಮ್ಮಗಾರ
ಅದೆಂತೆಂದಡೆ ಲೈಂಗೇ—

ಶ್ವಪಚೋಽಪಿ ಮುನಿಶ್ರೇಷ್ಠಃ ಶಿವಭಕ್ತೋ ದ್ವಿಜಾಧಿಕಃ ।
ಶಿವಭಕ್ತಿ ವಿಹೀನಸ್ತು ದ್ವಿಜೋಽಪಿ ಶ್ವಪಚಾಧಮಃ ॥

ಎಂಬುದಾಗಿ ಇವರಿಬ್ಬರನು ಸತಿಸುತ ಮಿತ್ರರೆಂದು
ಮಠವ ಹೋಗಿಸಿದರೆ ಅನ್ನವನಿಕ್ಕಿದಡೆ
ಸುರೆಯ ಮಡಿಕೆಯಲ್ಲಿ ಘೃತವ ತುಂಬಿ
ಶ್ವಾನವ ತಂದು ತಿನ್ನಿಸಿ ಮಿಕ್ಕುದ ತಾ ತಿಂದಂತೆ ಕೇಳಿರಣ್ಣಾ
ಭಕ್ತನು ಆರೋಗಣೆಯ ಮಾಡಿದ ಪತ್ರಭಾಜನವ
ಶ್ವಾನ ಸೂಕರ ಕುಕ್ಕುಟ ಮಾರ್ಜಾಲಂಗಳು ಮುಟ್ಟಿದಡೆ
ಅವರ ಕೂಡ ತಾನು ಸಹಭೋಜನವ ಮಾಡಿದಂತೆ ಕೇಳಿರಣ್ಣಾ
ಗುರುಲಿಂಗಜಂಗಮಕ್ಕೆ ಎರಡು ಪಾದಂಗಳು ಚೆನ್ನಾಗಿ ಪ್ರಕ್ಷಾಲಿಸಿ
ಗಂಧಾಕ್ಷತೆ ಪುಷ್ಪಂಗಳಿಂ ಪೂಜಿಸಿದ ಬಳಿಕ
ಅರಿವುಳ್ಳ ಶಿವಭಕ್ತನು ಪಾದೋದಕಮಂ ಕೊಂಬುದು
ಗುರುಲಿಂಗ ಜಂಗಮಕ್ಕೆ ಅರ್ಪಿತವಂ ಮಾಡಿ
ವಕ್ಕು ಮಿಕ್ಕ ಪ್ರಸಾದಮಂ ಭೋಗಿಸುವಲ್ಲಿ
ಪದಾರ್ಥವೆಂದು ಭಾವಿಸಿದರೆ ಅದೇ ಪ್ರಸಾದದ್ರೋಹ

ಪ್ರಸಾದಂ ದ್ರವ್ಯಭಾವೇನ ರೌರವಂ ನರಕಂ ವ್ರಜೇತ್ ।

ಎಂಬುದಾಗಿ ಇನ್ನು ಸದ್ಭಕ್ತನು ಅನೃತ ಅಸ್ಥಿರವಾಕ್ಯ
ವಂಚನೆ ಪಂಕ್ತಿಭೇದ ಉದಾಸೀನ ನಿರ್ದಯ ಇಷ್ಟನು
ಜಂಗಮದಲ್ಲಿ ಮಾಡಿದರೆ ಜಂಗಮದ್ರೋಹ
ಇನ್ನು ಲಿಂಗದಲ್ಲಿ ತ್ರಿಕಾಲಪೂಜೆ ಪ್ರೀತಿ ಪ್ರೇಮ ಸ್ನೇಹ ಮೋಹ
ಇಷ್ಟನು ಲಿಂಗವಲ್ಲಿ ಮಾಡಿದಿರ್ದಡೆ ಲಿಂಗದ್ರೋಹ
ಇನ್ನು ಗುರುವಿನಲ್ಲಿ ಅಹಂಕಾರ ಭಯವಿಲ್ಲದಿರುವುದು
ಸಮಪಂಕ್ತಿಯಲ್ಲಿ ಕುಳ್ಳಿರುವುದು
ಕುತರ್ಕ ಸಂಭಾಷಣೆಯಂ ಮಾಡುವುದು
ಕೈಯೊಡ್ಡಿ ಬೇಡುವುದು ಇಷ್ಟು ಗುರುದ್ರೋಹ
ಇದು ಕಾರಣ ಗುರುಲಿಂಗ ಜಂಗಮಕ್ಕೆ

ತನುಮನಧನಮಂ ಸಮರ್ಪಿಸಿ
ಏಕಲಿಂಗ ನಿಷ್ಠಾಪರನಾದಡೆ ಆತನೇ ಮಹೇಶ್ವರನು
ಕೂಡಲ ಚೆನ್ನಸಂಗಮದೇವಾ

## ಪ್ರಸಾದಿ ಸ್ಥಲ

೧೪. ನಾಸಿಕವಾಚಾರ, ಜಿಹ್ವೆ ಗುರು, ಕಂಗಳು (ಶಿವ)ಲಿಂಗ, ತ್ವಕ್ಕು ಜಂಗಮಲಿಂಗ, ಕರ್ಣ ಪ್ರಸಾದ, ಭಾವ ಮಹಾಲಿಂಗ ಕೂಡಲ ಚೆನ್ನ ಸಂಗಯ್ಯ ನಿಮ್ಮ ಶರಣ ಇಂತು ಸರ್ವಾಂಗಪ್ರಸಾದಿ.

೧೫. ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾರ್ಪಿತವೆಂಬರು. ಅದು ಲಿಂಗಾರ್ಪಿತವೇ? ಅಲ್ಲ. ಅರ್ಪಿತವ ಮಾಡದೆ ಅನರ್ಪಿತವ ಹೊದ್ದದೆ ಅರ್ಪಿಸಬೇಕು. ಅರ್ಪಿಸುವ ಈ ಭೇದ ವಿಲ್ಲದನ್ನಕ್ಕ ಶರಣನೆನಿಸಬಾರದು ಕೂಡಲ ಚೆನ್ನಸಂಗಯ್ಯ.

೧೬. ಶಬ್ದ ಸ್ಪರ್ಶ ರೂಪು ರಸ ಗಂಧ ಪಂಚೇಂದ್ರಿಯಗಳು ಮೊದಲಾಗಿ ನಡೆದವು ಲಿಂಗದತ್ತತ್ತಲೇ. ತಮ ತಮಗೆ ಬಂದ ಭೋಗ ಸುಖ ಲಿಂಗಾರ್ಪಿತವೆಂದು ನಡೆದವು ಲಿಂಗದತ್ತತ್ತಲೆ, ಕೂಡಲ ಚೆನ್ನಸಂಗಯ್ಯ ಲಿಂಗನಿವಾಸಿ ಶರಣಂಗೆ.

೧೭. ತನು ಮುಟ್ಟದ ಮುನ್ನವೇ ಲಿಂಗಾರ್ಪಿತವ ಮಾಡಬೇಕು. ಶ್ರೋತ್ರ, ನೇತ್ರ, ಘ್ರಾಣ, ಜಿಹ್ವೆ, ತ್ವಕ್ಕು, ಪಂಚೇಂದ್ರಿಯಂಗಳು ಮುಟ್ಟದ ಮುನ್ನವೇ ಲಿಂಗಾರ್ಪಿತವ ಮಾಡಬೇಕು. ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಸಾದಿಯಾದೊಡೆ ಇಂತಾಗಬೇಕಯ್ಯ, ಇಂತಲ್ಲ ದವರು ಬರುಕಾಯರೆನಿಸುವರಯ್ಯ.

೧೮. ಅಂಗಕ್ಕೆ ಆಚಾರವಳವಟ್ಟಲ್ಲಿ ಲಿಂಗಕ್ಕೆ ಆ ಅಂಗವೇ ಅರ್ಪಿತ. ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಲಿಂಗಕ್ಕೆ ಪ್ರಾಣವೇ ಅರ್ಪಿತ. ಮನ ಮಹವನಿಂಬುಗೊಂಡಲ್ಲಿ ಆ ಮಹಾಲಿಂಗಕ್ಕೆ ಮನವೇ ಅರ್ಪಿತ. ಭಾವಕ್ಕೆ ಭ್ರಮೆಯುಳಿದು ನಿರ್ಭ್ರಾಂತನಾದಲ್ಲಿ ಲಿಂಗಕ್ಕೆ ಆ ಭಾವವೇ ಅರ್ಪಿತ.

ಜ್ಞಾತೃ ಜ್ಞಾನ ಜ್ಞೇಯ ಸಂಪುಟವಾದಲ್ಲಿ ಅರಿವು ನಿರ್ಣಯ ನಿಶ್ಚಿತ ಯಾಗಿ ಕುರುಹುಗೆಟ್ಟಲ್ಲಿ ಆ ಲಿಂಗಕ್ಕೆ ಅರಿವೇ ಅರ್ಪಿತ. ಇಂತು ಸರ್ವಾಂಗ ಅರ್ಪಿತವಾಗಿ ಲಿಂಗಕ್ಕೆ ಒಡೆತನವಿತ್ತು ಕಾರಣ ಕೂಡಲ ಚೆನ್ನ ಸಂಗಯ್ಯನಲ್ಲಿ ನಾನು, ನೀನು ಎಂಬುದಿಲ್ಲದೆ ನಿಂದ ನಿಜದ ಮಹಾ ಪ್ರಸಾದಿ.

೧೯. ಶ್ರೋತ್ರೇಂದ್ರಿಯ ಸುಖವುಳ್ಳನ್ನಕ್ಕರ ಗುರುವಚನವನೆಂತು ಕೇಳಿ ದೆನೆನಬಹುದಯ್ಯ? ಘ್ರಾಣೇಂದ್ರಿಯ ಸುಖವುಳ್ಳನ್ನಕ್ಕರ ಲಿಂಗಕ್ಕೆ ಗಂಧ ವನೆಂತು ನಿವೇದಿಸಿದೆವೆನಬಹುದಯ್ಯ ? ನೇತ್ರೇಂದ್ರಿಯ ಸುಖವುಳ್ಳನ್ನ ಕ್ಕರ ಲಿಂಗವ ಭಾವಿಸಿದೆವೆಂತೆನಬಹುದಯ್ಯ ? ಜಿಹ್ವೇಂದ್ರಿಯ ಸುಖವು ಳ್ಳನ್ನಕ್ಕರ ಪ್ರಸಾದವ ಗ್ರಹಿಸಿದೆವೆಂತೆನಬಹುದಯ್ಯ ? ಸ್ಪರ್ಷೇಂದ್ರಿಯ ಸುಖವುಳ್ಳನ್ನಕ್ಕರ ಲಿಂಗಾಂಗವಾಯಿತ್ತೆಂತೆನಬಹುದಯ್ಯ? ಇವೆಲ್ಲವನು ಪರಿಚ್ಛೇದಿಸಿದೊಡೆ ಅವರೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಾಣ ಲಿಂಗ ಪ್ರಸಾದಿಗಳಯ್ಯ.

೨೦. ಅಡಿಗಡಿಗೆ ಸಿರಿವಂತರೆಂದು ನೋಡಿಕೊಂಬುವುದು, ಉಪಜೀವಿತ ಪ್ರಸಾದ. ಬಡವರೆಂದು ಓರೆ ಮಗ್ಗಲಾಗಿ ಕೊಂಬುವದು, ತುಡುಗುಣಿ ಪ್ರಸಾದ. ನಚ್ಚುಮುಚ್ಚಿನಿಂದ ಎಳೆದು ಸೆಳೆದುಕೊಂಬುವದು, ದಳಾದುಳಿ ಪ್ರಸಾದ. ಇಚ್ಛೆದವರನಂಜಿಸಿಕೊಂಡು ಕೊಂಬುವುದು, ಪೀಡೆಕಾರ ಕರ್ಮ ಪ್ರಸಾದ. ಇಚ್ಛವಾತ ಮನದಲ್ಲಿ ಗುಡಿಗಟ್ಟಿಕೊಂಬುವುದು ಸಮ ಯ ಪ್ರಸಾದ. ವೇಷಧಾರಿ ಹುಸಿಹುಂಡಕಲ್ಲಿ ಕೊಂಬುವುದು, ಹುಸಿ ನುಸುಳು ದೆಸೆಗೇಡಿ ಪ್ರಸಾದ. ಅರಿವು ಆಚಾರ ಹೀನರಾದ ಸಂಕಲ್ಪದಲ್ಲಿ ಕೊಂಬುವುದು, ಸಂದೇಹ ಕಂದಿನ ಪ್ರಸಾದ. ಇದು ಕಾರಣ ಕೂಡಲ ಚೆನ್ನಸಂಗಮದೇವಾ ನಿಮ್ಮ ಪ್ರಸಾದಿಗಳಪೂರ್ವವಯ್ಯ!

೨೧. ಅಂಗಭೋಗವನೇ ಕುಂದಿಸಿ ಪ್ರಸಾದವನು ರುಚಿಸುವೆನೆಂಬ ಲಿಂಗವಂತರುಗಳೆಲ್ಲ ಅರಿವುಗೇಡಿಗಳಾಗಿ ಹೋದರು. ಅಂಗಭೋಗವೇ ಲಿಂಗಭೋಗ, ಅಂಗಭೋಗವು ಅರ್ಪಿತವಾಗಿ. ಸಾಕ್ಷಿ॥ ಸ್ವಯಣಾ

ಪಾಕಸಂಬಂಧಿ। ಭೋಗಜಂಗಮ ವರ್ಜಯೇತ್ ॥ ನಾಸ್ತಿ ಲಿಂಗಾ ರ್ಚನಂ ಶೈವ। ಪ್ರಸಾದಂ ನಿಷ್ಫಲಂ ಭವೇತ್ ॥ ಎಂಬುದಾಗಿ ಅಂಗಕ್ಕೆ ಬಂದ ರುಚಿ ಲಿಂಗಕ್ಕೆ ಬಾರದೇ? ಇದು ಕಾರಣ ಕೂಡಲ ಚೆನ್ನ ಸಂಗಯ್ಯ ಪಾಕಸಂಬಂಧಿಗೆ ಪ್ರಸಾದ ದೂರ.

೨೨. ಇಲ್ಲೆಂಬುದನಿಲ್ಲೆನ ಬಲ್ಲರೆ, ಅರ್ಪಿತ. ಉಂಟೆಂಬುದ ಉಂಟೆನ ಬಲ್ಲರೆ, ಪ್ರಸಾದ. ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ. ಆ ಪ್ರಸಾದಿಯ ಪರಮ ಪರಿಣಾಮವೇ ಪ್ರಸಾದವಾಗಿ, ಆ ಪ್ರಸಾದವೇ ತಾನಾಗಿ ಬೆಳಗುತ್ತಿಪ್ಪನಯ್ಯ ಕೂಡಲ ಚೆನ್ನಸಂಗಾ ನಿಮ್ಮ ಶರಣ.

೨೩. ರೂಪೆಂದಡೆ ರುಚಿಯಾಯಿತ್ತು. ರುಚಿ ಎಂದಡೆ ಸವಿಯಾ ಯಿತ್ತು. ಸವಿ ಎಂದಡೆ ಸಂದಾಯಿತ್ತು. ರೂಪೆನ್ನದೆ, ರುಚಿ ಎನ್ನದೆ, ಸವಿ ಎನ್ನದೆ, ಸಂದೆನ್ನದೆ ಇದ್ದ ಪ್ರಸಾದಿಗೆ ನಮೋ ನಮೋ ಎಂಬೆ ಕೂಡಲ ಚೆನ್ನಸಂಗಯ್ಯ.

೨೪. ಗುರು ಲಿಂಗ ಜಂಗಮದ ಏಕಾರ್ಥವ ನೇನೆಂದುಪಮಿಸಬ ಹುದು? ಗುರು ಪ್ರಾಣ, ಲಿಂಗ ದೇಹ, ಜಂಗಮ ಆಪ್ಯಾಯನವೆಂದು ದಾಗಿ, ಪ್ರಾಣ ಮುಟ್ಟಿ ಬಂದರೇನು, ಕಾಯ ಮುಟ್ಟಿ ಬಂದರೇನು, ಜಿಹ್ವೆ ಮುಟ್ಟಿ ಬಂದರೇನು, ಜಂಗಮ ಮುಖ ಆಪ್ಯಾಯನವೆಂದುದಾಗಿ, ಇದು ಕಾರಣ ಕೂಡಲ ಚೆನ್ನಸಂಗಮದೇವ ಜಂಗಮ ಪ್ರಸಾದ ಸರ್ವ ಸಿದ್ಧಿ.

೨೫. ಲಿಂಗವಿಲ್ಲದೆ ನಡೆವವನ, ಲಿಂಗವಿಲ್ಲದೆ ನುಡಿವವನ, ಲಿಂಗವಿಲ್ಲದೆ ಸಂಗವ ಮಾಡುವವನ ಅವನ ಮುಟ್ಟಲಾಗದು. ಲಿಂಗವಿಲ್ಲದೆ ಗಮಿಸಿ ದರೆ ಆ ನಡೆನುಡಿಗೊಮ್ಮೆ ಪಾತಕ. ಲಿಂಗವಿಲ್ಲದೆ ನುಡಿವ ಶಬ್ದ ಸೂತ ಕವ ಕೇಳಲಾಗದು. ಶಿವಲಿಂಗವಿಲ್ಲದೆ ಉಗುಳ ನುಂಗಿದರೆ ಅಂದಿಂಗೆ ಕಿಲ್ಬಿಷ ಕೂಡಲ ಚೆನ್ನಸಂಗಮದೇವಾ.

೨೬. ಲಿಂಗವನೊಂದೇ ನೆನೆದು ಲಿಂಗಕ್ಕೆಂದೇ ಮಾಡಿ ಲಿಂಗಕ್ಕೆಂದೇ ಕೊಡುವೆನು ನಾನಯ್ಯ. ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಭಾವಿ

ಸುವೆ. ಅಂಗಗುಣಂಗಳನರಿಯೆ ನಾನು. ಲಿಂಗಕ್ಕೆಂದೇ ಕಾಮಿಸುವೆ ನಾನು. ನಿಃಕಾಮಿಯಾಗಿ ಎನ್ನ ದೇಹೇಂದ್ರಿಯ ಮನಃಪ್ರಾಣಾದಿಗಳ ಲಿಂಗೈಕ್ಯ ಸತಿಗಳಾಗಿ ಲಿಂಗಕ್ಕೆಂದೇ ಬಯಸಿ, ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೇ ಕೈಕೊಂಬೆನು. ಅನರ್ಪಿತವನರಿಯದಿಹೆನು ಕೂಡಲ ಚೆನ್ನಸಂಗಮದೇವಾ.

೨೭. ನಡೆವ, ನುಡಿವ, ಚೈತನ್ಯವುಳ್ಳನ್ನಕ್ಕರ ಒಡಲಗುಣಂಗಳಾರಿಗೆಯೂ ಬಿಡವು ಕೇಳಿರಣ್ಣಾ. ನೋಡುವ ನಯನ, ಕೇಳುವ ಶ್ರೋತ್ರ, ವಾಸಿಸುವ ಘ್ರಾಣ, ಮುಟ್ಟುವ ತ್ವಕ್ಕು, ರುಚಿಸುವ ಜಿಹ್ವೆ, ನೋಡುತ್ತ, ಕೇಳುತ್ತ, ವಾಸಿಸುತ್ತ, ಮುಟ್ಟುತ್ತ, ರುಚಿಸುತ್ತ, ಲಿಂಗಾರ್ಪಿತವ ಮಾಡಿ ಲಿಂಗಭೋಗೋಪಭೋಗಿಯಾದ ಪ್ರಸಾದಿಗೆ ಸರ್ವಾಂಗ ಶುದ್ಧವೆಂದಿತ್ತಯ್ಯ. ಕಾಯತ್ರಯಂಗಳು ಜೀವತ್ರಯಂಗಳು ಭಾವತ್ರಯಂಗಳು ಇವುಗಳೆನೊಂದುಮಾಡಿ ಸುಖದುಃಖ ಗುಣ ನಿರ್ಗುಣಂಗಳು ಇಂತೀ ಉಭಯುವ ಲಿಂಗದಲ್ಲಿ ಏಕವ ಮಾಡಿ, ಅಹುದು, ಅಲ್ಲ, ಬೇಕು, ಬೇಡವೆಂಬ ಸಂಶಯುವ ಕಳೆದು ಕೂಡಲ ಚೆನ್ನಸಂಗಯ್ಯನಲ್ಲಿ ಆದಿಯ ಪುರಾತನರು ಕೂಡಿದ ಪಥವಿದು.

೨೮. ಆಯತ ಸ್ವಾಯತ ಅನಾಯುತಂಗಳು ಮುಟ್ಟಲಮ್ಮವು ನೋಡಾ. ಕಂಗಳ ಕೈಗಳಲರ್ಪಿಸುವ, ಶ್ರೋತ್ರದ ಕೈಗಳಲರ್ಪಿಸುವ, ಜಿಹ್ವೆಯ ಕೈಗಳಲರ್ಪಿಸುವ, ಮನದ ಕೈಗಳಲರ್ಪಿಸುವ ಅಲ್ಲಲ್ಲಿ ತಾಕಿದ ಸುಖವನಲ್ಲಲ್ಲಿಯೇ ಲಿಂಗಾರ್ಪಿತ ಮಾಡಬಲ್ಲನಾಗಿ ಕೂಡಲ ಚೆನ್ನಸಂಗನಲ್ಲಿ ಆತ ಮಹಾ ಪ್ರಸಾದಿ.

೨೯. ಎನ್ನ ಮನದ ಬಾಗಲಲ್ಲಿದ್ದು ಪಂಚೇಂದ್ರಿಯಂಗಳನಂದ್ಯ ಸುಖಿಸುವ ಅರಿವು ಮೂರ್ತಿ ನೀವಯ್ಯ. ಎನ್ನ ನೇತ್ರದ ಬಾಗಿಲಲ್ಲಿದ್ದು ಸುರೂಪು ಸುಖಂಗಳ ಭೋಗಿಸುವಾತ ನೀನಯ್ಯ. ಎನ್ನ ತ್ವಕ್ಕಿನ ಬಾಗಿಲಲ್ಲಿದ್ದು ಸ್ಪರ್ಶನವ ಮಾಡಿ ಆ ಸ್ಪರ್ಶನದ ಸುಖವ ಸುಖಿಸುವಾತ ನೀನಯ್ಯ. ಎನ್ನ ಶ್ರೋತ್ರದ ಬಾಗಿಲಲ್ಲಿದ್ದು ಸುಶಬ್ದ ಸುಖಂಗಳ ಭೋಗಿ

ಸುವಾತ ನೀನಯ್ಯ. ಎನ್ನ ಘ್ರಾಣದ ಬಾಗಿಲಲ್ಲಿದ್ದು ಸುವಾಸನೆಯ ಸುಖಂಗಳ ಭೋಗಿಸುವಾತ ನೀನಯ್ಯ. ಎನ್ನ ಜಿಹ್ವೆಯ ಬಾಗಿಲಲ್ಲಿದ್ದು ಸುರುಚಿಯ ಸುಖಂಗಳ ಭೋಗಿಸುವಾತ ನೀನಯ್ಯ. ಅದೇನು ಕಾರಣ ವೆಂದರೆ ನೀನಾಡಿಸುವ ಜಂತ್ರದ ಬೊಂಬೆ ನಾನೆಂದು ಅರಿದ ಕಾರಣ ನಿಮ್ಮ ಕರಣಂಗಳೇ ಎನ್ನ ಹರಣಂಗಳಾಗಿ ಎನ್ನ ಹರಣ ಕರಣಂಗಳೇ ನಿಮ್ಮ ಕಿರಣಂಗಳಾಗಿ ಇರುವ ಕಾರಣ ಕೂಡಲ ಚೆನ್ನಸಂಗಮದೇವಾ ನೀನಾಡಿದಂತೆ ನಾನಾಡಿದೆನಯ್ಯ.

೩೦. ಮನ ಭಾವ ಕರಣಂಗಳೊಳಹೊರಗೆ ತೆರಹಿಲ್ಲದ ದೇವಾ ಬಂದ ಪದಾರ್ಥವನವಧರಿಸು ದೇವಾ. ಭಾವ ಭರಿತ ದೇವಾ. ಅದೆಂತೆಂದಡೆ "ತಿಲಮಧ್ಯೆ ಯಥಾ ತೈಲಂ। ಕ್ಷೀರಮಧ್ಯೆ ಯಥಾ ಘೃತಂ॥ ಪುಷ್ಪ ಮಧ್ಯೆ ಯಥಾ ಗಂಧಂ। ಭಾವ ಮಧ್ಯೆ ತಥಾ ಶಿವಂ" ಎಂದುದಾಗಿ ಎಲ್ಲ ಭೋಗ ತನ್ನವಾಗಿ ಎಲ್ಲ ಕರಣಂಗಳ ತನ್ಮಯವ ಮಾಡಿಕೊಂಡನಾಗಿ ಕೂಡಲ ಚೆನ್ನಸಂಗಮದೇವರು.

೩೧. ಸ್ವಯ ಮಜ್ಜನ, ಸ್ವಯ ಪೂಜೆ, ಸ್ವಯಾರ್ಪಿತ ನಾನೀನೆಂಬ ಸಂಶಯನಿಂದ ನಿಲವೆಂತಿದ್ದುತೆಂದಡೆ, ಪರತಂತ್ರವ ಮೀರಿ ಭಾವವ ಬಿಟ್ಟು ಘನರವಿಲೋಚನನಾಗಿ ಅನರ್ಪಿತವೇ ಭುಂಜಿತ ಸ್ಥೂಲಸೂಕ್ಷ್ಮ ಘನ ನಿತ್ಯವೆಂದರಿದು ಕಾಯಜೀವ ಪ್ರಸಾದವ ಬಿಟ್ಟು ಸರ್ವಭವ ರುಚಿ ಪ್ರಸಾದಿ ಕೂಡಲ ಚೆನ್ನಸಂಗಯ್ಯನಲ್ಲಿ ಆತ ಸರ್ವಾಂಗ ಪ್ರಸಾದಿ.

## ಪ್ರಾಣಲಿಂಗಿ ಸ್ಥಲ

೩೨. ಹೊರಗನೇ ಕೊಯ್ದು ಹೊರಗನೆ ಪೂಜಿಸಿದಡೆ ಪರಿಣಾಮವಿಲ್ಲ ಪ್ರಯೋಜನವಿಲ್ಲ. ಸುಖ ದೊರೆಕೊಳ್ಳದು ನೋಡಾ. ಅದೆಂತೆಂದಡೆ— ಸರ್ವಜೀವಂಗಳಲ್ಲಿ ಹಿಂಸೆಯ ಮಾಡದಿಪ್ಪುದೇ ಪ್ರಥಮ ಪುಷ್ಪ. ಸರ್ವೇಂದ್ರಿಯಂಗಳಂ ನಿಗ್ರಹಿಸಿಕೊಂಡಿರಬಲ್ಲಡೆ ದ್ವಿತೀಯ ಪುಷ್ಪ. ಸರ್ವಾಹಂಕಾರ ಮರೆದು ಶಾಂತನಾಗಿರಬಲ್ಲಡೆ ತೃತೀಯ ಪುಷ್ಪ. ಸರ್ವ ವ್ಯಾಪಾರ

ವಳಿದು ನಿವಾರ್ಯ್ಯಪಾರಿಯಾಗಿರಬಲ್ಲಡೆ ಚತುಃ ಪುಷ್ಪ. ದುರ್ಭಾವ ಪ್ರಕೃತಿ ಯಳಿದು ಸದ್ಭಾವ ಎಡೆಗೊಂಡಿರಬಲ್ಲಡೆ ಪಂಚಮ ಪುಷ್ಪ. ಉಂಡು ಉಪ ವಾಸಿ ಬಳಸಿ ಬ್ರಹ್ಮಚಾರಿಯಾಗಿರಬಲ್ಲಡೆ ಷಷ್ಠಮ ಪುಷ್ಪ. ಅನೃತವ ಮರೆದು ಸತ್ಯವ ನುಡಿಯಬಲ್ಲಡೆ ಸಪ್ತಮ ಪುಷ್ಪ. ಸಕಲ ಪ್ರಪಂಚವ ಳಿದು ಶಿವಜ್ಞಾನ ಸಂಪನ್ನನಾಗಿರಬಲ್ಲಡೆ ಅಷ್ಟಮ ಪುಷ್ಪ. ಇಂತೀ ಅಷ್ಟ ದಳ ಕಮಲದಲ್ಲಿ ಸಹಸ್ರ ಪೂಜೆಯ ಮಾಡಬಲ್ಲ ಶರಣರು ನಿಮ್ಮ ಪ್ರತಿ ಬಿಂಬದಂತಿಪ್ಪರು ಕಾಣಾ ಕೂಡಲ ಚೆನ್ನಸಂಗಮದೇವಾ.

೩೩. ಅಂಗವಿಲ್ಲೆಂಬಲ್ಲಿಯೆ, ಅಂಗ ಶಂಕೆ ಬಿಡದು. ಲಿಂಗ ಉಂಟೆಂಬ ಲ್ಲಿಯೆ, ಲಿಂಗ ಶಂಕೆ ಬಿಡದು. ಇಲ್ಲೆಂಬುದಕ್ಕೆ ಉಂಟೆಂಬುದೆ ಮರಹು. ಉಂಟೆಂಬುದಕ್ಕೆ ಇಲ್ಲೆಂಬುದೆ ಮರಹು. ಉಂಟಿಲ್ಲವೆಂಬುದಳಿದುಳಿದು ದಲ್ಲದೆ ಪ್ರಾಣಲಿಂಗ ಸಂಬಂಧ ಸ್ವಾಯತವಾಗದು. ಕೂಡಲ ಚೆನ್ನ ಸಂಗಯ್ಯನಲ್ಲಿ ಪ್ರಾಣಲಿಂಗ ಸಂಬಂಧ ನಿನಗೆಲ್ಲಿಯದು ಹೇಳಾ ಸಿದ್ಧರಾ ಮಯ್ಯ.

೩೪. ಲಿಂಗ ಪ್ರಾಣವೆಂಬೆನೆ? ಪ್ರಾಣದ ಹಂಗಿನ ಲಿಂಗ. ಪ್ರಾಣ ಲಿಂಗವೆಂಬೆನೆ ? ಲಿಂಗದ ಹಂಗಿನ ಪ್ರಾಣ. ಲಿಂಗ ಪ್ರಾಣವಲ್ಲ. ಪ್ರಾಣ ಲಿಂಗವಲ್ಲ. ಉಭಯ ಸಂದಳಿದವರ ತೋರಿ ಬದುಕಿಸಯ್ಯ, ಕೂಡಲ ಚೆನ್ನಸಂಗಮದೇವಾ.

೩೫. ಗೋವಿನ ಹೊಟ್ಟೆಯಲ್ಲಿ ಘೃತವಿದ್ದಡೇನೋ ? ಆ ಗೋವು ದಿನದಿನಕ್ಕೆ ಪುಷ್ಟಿಯಾಗಲು ಬಲ್ಲುದೆ ? ಅದು ಕಾರಣ ಆ ಗೋವ ಪೋಷಿಸಿ ಕರೆದು ಕಾಸಿ, ಘೃತವ ಮಾಡಿ, ಗೋವಿಂಗೆ ಕುಡಿಯಲೆರೆದಡೆ ಆ ಗೋವು ದಿನದಿನಕ್ಕೆ ಪುಷ್ಟಿಯಹುದಲ್ಲದೆ. ಅದು ಹೇಗೆಂದಡೆ ಹಾಗೆ ತನ್ನಲ್ಲಿ ವಸ್ತುವಿದ್ದಡೇನೋ, ವಸ್ತುವ ಗುರುಮುಖದಿಂದ ಕರಸ್ಥಲಕ್ಕೆ ಪಡೆದು ಸತ್ಕ್ರಿಯೆಯಿಂದ ಪ್ರಾಣಕ್ಕೆ ವೇಧಿಸಿದಲ್ಲದೆ, ಪ್ರಾಣಲಿಂಗವಾ ಗದು. ಕೂಡಲ ಚೆನ್ನಸಂಗಯ್ಯನಲ್ಲಿ ಇಷ್ಟಲಿಂಗದ ಸತ್ಕ್ರಿಯೆಯಿಂದ

ಪ್ರಾಣಕ್ಕೆ ವೇಧಿಸಿ, ತಾನೆಂಬ ಅನಿಷ್ಟವ ತೊಲಗಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗಬಾರದು.

೩೬. ಪ್ರಣವ ಮಂತ್ರವ ಕರ್ಣದಲ್ಲಿ ಹೇಳಿ, ಶ್ರೀಗುರು ಅಂಗದಮೇಲೆ ಲಿಂಗ ಪ್ರತಿಷ್ಠೆಯಂ ಮಾಡಿದ ಬಳಿಕ, ಒಳಗೆ ಲಿಂಗವಿಪ್ಪುದೆಂಬ ಪಂಚ ಮಹಾಪಾತಕರ ನುಡಿಯ ಕೇಳಲಾಗದು. ಒಳಗಿಪ್ಪನೇ ಲಿಂಗದೇವನು? ಮಲಮೂತ್ರ ಮಾಂಸದ ಹೇಸಿಕೆಯೊಳಗೆ ಪ್ರಾಣವಿಪ್ಪುದಲ್ಲದೆ ಲಿಂಗವಿಪ್ಪುದೆ? ಆ ಪ್ರಾಣವ ತಂದು ಇಷ್ಟಲಿಂಗದಲ್ಲಿ ಇರಿಸಿ ನೆರೆಯ ಬಲ್ಲಾತನೇ ಪ್ರಾಣಲಿಂಗಸಂಬಂಧಿ. ತನ್ನ ಇಷ್ಟಲಿಂಗದಲ್ಲಿ ದಾಸೋಹವ ಮಾಡಲರಿಯದೆ, ಹಲವು ಬಳಕೆಯ ಬಳಸುವ ಮಿಟ್ಟೆಯ ಭಂಡರನೆನಗೊಮ್ಮೆಯೂ ತೋರದಿರಾ ಕೂಡಲ ಚೆನ್ನಸಂಗಯ್ಯ.

೩೭. ಲಿಂಗಮಧ್ಯದಲ್ಲಿ ಜಗವಿರ್ದರೇನೋ? ಆ ಜಗವ ಹೊರಗಿಕ್ಕಿ ಲಿಂಗವನೊಳಗಿಟ್ಟುಕೊಂಡಾ. ಆ ಘನಕ್ಕೆ ಹರಣೆಂಬೆ. ಆ ಮಹಾಘನ ಆಯತಕ್ಕೊಳಗು, ಪ್ರಳಯಕ್ಕೆ ಹೊರಗು ಕೂಡಲ ಚೆನ್ನಸಂಗಯ್ಯ.

೩೮. ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ. ವಿಸರ್ಜಿಸುವಲ್ಲಿ ಲಿಂಗವಂತನಲ್ಲೆನಿಸಿತ್ತು. ಇದು ಕಾರಣ ಆಹ್ವಾನ ವಿಸರ್ಜನೆ ಇಲ್ಲದ ಶರಣನ ಪರಿ ಬೇರೆ. ಲಿಂಗಭೋಗೋಪಭೋಗವಲ್ಲದೆ ಅನರ್ಪಿತವ ಭೋಗಿಪ್ಪನಲ್ಲ. ಆವಾಗಲೂ ಪ್ರಾಣಲಿಂಗವೇ ಸಂಗವಾಗಿಪ್ಪನು. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣಂಗೆ ನಮೋ ನಮೋ ಎಂಬೆನು.

೩೯. ನಿಷ್ಠೆಯುಳ್ಳಾತಂಗೆ ನಿತ್ಯನೇಮದ ಹಂಗೇಕೆ? ಸತ್ಯವುಳ್ಳಾತಂಗೆ ತತ್ವವಿಚಾರದ ಹಂಗೇಕೆ? ಮನ ಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೆ? ಅರಿವುಳ್ಳಾತಂಗೆ ಅಗ್ಗವಣಿಯ ಹಂಗೇಕೆ? ಭಾವ ಶುದ್ಧವುಳ್ಳಾತಂಗೆ ಹೂವಿನ ಹಂಗೇಕೆ? ಕೂಡಲ ಚೆನ್ನಸಂಗಯ್ಯ ನಿಮ್ಮನರಿದಾತಂಗೆ ನಿಮ್ಮ ಹಂಗೇಕೆ?

## ಶರಣ ಸ್ಥಲ

೪೦. ಅಂತರಂಗದ ಅರಿವು, ಬಹಿರಂಗದ ಕ್ರಿಯೆ, ಈ ಉಭಯ ಸಂಪುಟ ಒಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ. ಕೂಡಲ ಚೆನ್ನಸಂಗಯ್ಯನಲ್ಲಿ ಸಂಗವಾದದ್ದು ಸರ್ವೇಂದ್ರಿಯ.

೪೧. ಕುಲವಳಿದು, ಛಲವಳಿದು, ಮತ್ಸರವಳಿದು, ಮದವಳಿದು, ಆತ್ಮಕ್ಕೆ ಜೀವವಳಿದು, ಸರ್ವಾಹಂಕಾರವಳಿದು, ನಿಜವುಳಿದು, ಲಿಂಗ ಜಂಗಮವೆಂಬ ಶಬ್ದ ಪಿಡಿದು ಸಾಧ್ಯವಾಯಿತ್ತು ನೋಡಾ. ತಾನಳಿದು ತಾನುಳಿದು, ಸಹಜ ನಿಜಪದವಿಯಲ್ಲಿ ಕೂಡಲ ಚೆನ್ನ ಸಂಗನಲ್ಲಿ ತಾನು ತಾನಾದ.

೪೨. ನಚ್ಚು ಬಿಚ್ಚದೆ, ಮನ ಅಚ್ಚೊತ್ತಿದಂತಿದ್ದಿತ್ತು. ಲಿಂಗವೆನ್ನದು, ಜಂಗಮವೆನ್ನದು ಅದು ತಾನಾಗಿ, ತಾನೇ ಭರಿತನು ಕೂಡಲ ಚೆನ್ನ ಸಂಗಮದೇವಾ.

೪೩. ಶರಣನೆನಿಸಿಕೊಂಬುದು ಅರಿದರಿದು ನೋಡಯ್ಯ. ಸತ್ಯವುಳ್ಳ ಸದ್ಭಕ್ತರೊಳಡಗಿರ್ದು ತನ್ನ ಕುರುಹು ಲೋಕಕ್ಕೆ ತೋರದಂತಿರಬೇಕು. ಸಕಲ ಪ್ರಾಣಿಗಳ ಮೇಲೆ ರೋಷವಿಲ್ಲದಿರಬೇಕು. ಇಂತಪ್ಪ ಶಿವಶರಣ ರಲ್ಲಿ ಸನ್ನಿಹಿತನಯ್ಯ ನಮ್ಮ ಕೂಡಲ ಚೆನ್ನಸಂಗಮದೇವ.

೪೪. ಶರಣನು ದೃಷ್ಟಾದೃಷ್ಟವನರಿಯನು. ಸಾವಯವ ನಿರವಯವ ನೇನೆಂದು ವಿವರಿಸಿ ನುಡಿಯನು. ತಾನು ಸ್ವತಂತ್ರನಾಗಿ ಭಾವರಹಿ ತನು. ವಿಕೃತ ವೇಷದಿಂದ ಸುಕೃತವ ಜೋಡಿಸುವನಲ್ಲ. ಪ್ರಕೃತಿ ಗುಣ ವಿಡಿದು ಮೂರ್ತಿಯಾದ ಉಪಜೀವಿಕನಲ್ಲ. ಕೂಡಲ ಚೆನ್ನಸಂಗ ನಿಮ್ಮ ಶರಣ ಸಾರಾಯಸನುಮತನು.

೪೫. ದೇಹಿಯಲ್ಲ ನಿರ್ದೇಹಿಯಲ್ಲ. ಬೋಧಕನಲ್ಲ ನಿರ್ಬೋಧಕನಲ್ಲ, ಕಾಮಿಯಲ್ಲ ನಿಃಕಾಮಿಯಲ್ಲ. ಆಶೆವಿಡಿದು ಬಂದ ಅನುಮಿಷನಲ್ಲ

ಅವಗುಣವಿಲ್ಲದ ನಿರ್ಗುಣಿ ನೋಡಯ್ಯ ಕೂಡಲ ಚೆನ್ನಸಂಗ ನಿಮ್ಮ ಶರಣ ನೋಡಯ್ಯ.

೪೬. ಮೂರ್ತನಲ್ಲ, ಅಮೂರ್ತನಲ್ಲ. ಲಿಂಗದಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾರ ಸಂವರಣೆ, ಪ್ರಸಾದದಲ್ಲಿ ಕಾಯಾಶ್ರಿತನು. ಲೋಕ ಲೌಕಿಕ ಪ್ರಕಾರದುದಯನಲ್ಲ ಕೂಡಲ ಚೆನ್ನಸಂಗ ನಿಮ್ಮ ಶರಣನು.

೪೭. ಸರ್ವಸಂಗಪರಿತ್ಯಾಗವ ಮಾಡಿದ ಶಿವಶರಣನ, ಲೋಕದ ಸಂಸಾರಿಗಳೆಂತು ಮೆಚ್ಚುವರಯ್ಯ ? ಊರೊಳಗಿದ್ದರೆ ಉಪಾಧಿಕನೆಂಬರು, ಅಡವಿಯೊಳಗಿದ್ದರೆ ಮೃಗನೆಂಬರು. ಹೊನ್ನ ಬಿಟ್ಟರೆ ದರಿದ್ರನೆಂಬರು. ಹೆಣ್ಣ ಬಿಟ್ಟರೆ ನಪುಂಸಕನೆಂಬರು. ಪುಣ್ಯವ ಬಿಟ್ಟರೆ ಪೂರ್ವಕರ್ಮಿ ಎಂಬರು. ಮಾತಾಡದಿದ್ದರೆ ಮೂಗನೆಂಬರು. ಮಾತನಾಡಿದರೆ ಜ್ಞಾನಿಗೆ ಕಯ್ಯ ಮಾತು ಎಂಬರು. ನಿಜವನಾಡಿದರೆ ನಿಷ್ಠುರನೆಂಬರು. ಸಮತೆಯ ನುಡಿದರೆ ಅಂಜುವನೆಂಬರು. ಇದುಕಾರಣ ಕೂಡಲ ಚೆನ್ನಸಂಗಯ್ಯ, ನಿಮ್ಮ ಶರಣ ಲೋಕದೆಚ್ಚೆಯ ನುಡಿಯ, ಲೋಕದಿಚ್ಛೆಯ ನಡೆಯ.

೪೮. ಲಿಂಗಮುಖವನರಿದವಂಗೆ ಲಿಂಗವೆಂಬುದಿಲ್ಲ, ಜಂಗಮಮುಖವನರಿದವಂಗೆ ಸಂಸಾರವೆಂಬುದಿಲ್ಲ. ಪ್ರಸಾದಮುಖವನರಿದವಂಗೆ ಇಹಪರವೆಂಬುದಿಲ್ಲ. ಈ ತ್ರಿವಿಧವು ಒಂದಾದವಂಗೆ ಮುಂದೇನೂ ಇಲ್ಲವಯ್ಯ. ಈ ತ್ರಿವಿಧದ ನೆಲೆಯ ಶ್ರುತಿಸ್ಮೃತಿ ಪುರಾಣಾಗಮ ಇತಿಹಾಸಂಗಳರಿಯುವಯ್ಯಾ, ಎಲೆಲೆ ಕೂಡಲ ಚೆನ್ನಸಂಗಯ್ಯ, ನಿಮ್ಮ ಶರಣರೇ ಬಲ್ಲರಯ್ಯಾ.

೪೯. ಜಂಗಮ ಜಂಗಮವೆಂದರೆ ಬಾಯಿಲೆಕ್ಕಕ್ಕೆ ಜಂಗಮವೇ ? ಜಂಗಮ ಜಂಗಮವೆಂದರೆ ಉಪಾಧಿಕನೆ ಜಂಗಮ ? ಜಂಗಮ ಜಂಗಮವೆಂದರೆ, ಸ್ತ್ರೀಲಂಪಟನೇ ಜಂಗಮ ? ಎನ್ನೆನು. ಈ ಪಾತಕದ ನುಡಿಯ ಕೇಳಲಾಗದು. ಜಂಗಮವೆಂತಹನೆಂದಡೆ, ನಿರ್ಲೇಪಕ ಜಂಗಮ, ನಿರುಪಾಧಿಕ ಜಂಗಮ, ನಿರ್ಭೇದಕ ಜಂಗಮ,ನಿರಾಶ್ರಿತ ಜಂಗಮ, ನಿರ್ಲಂಪಟ ಜಂಗಮ. ಈ ಷಡ್ಗುಣಭರಿತನಾದಡೆ ಆತ ನಿರವಯ ಜಂ

ಗಮು ಸಾಕ್ಷಿ|| ನಿಸ್ಸಂಗನಿರಾಭಾರಂ ನಿಸ್ಸೀಮಂ ನಿರುಪಾಧಿಕಂ| ನಿರ್ದೇಹಂ ನಿರ್ಮಳಂ ನಿತ್ಯಂ ತಸ್ಯ ಜಂಗಮು ಲಕ್ಷಣಂ || ನಿಷ್ಕಳಂ ನಿರಪೇಕ್ಷಂ ನಿರ್ಮಳಂ ನಿತ್ಯಂ ನಿರ್ದೋಷಿ ನಿಸ್ಪೃಹಂ ತಥಾ। ಸತ್ಯಪುಣ್ಯದಯಾ ಶಾಂತಿ ತಸ್ಯ ಜಂಗಮು ಲಕ್ಷಣಂ || ಮುಗ್ಧತ್ವಂ ಮೂರ್ತಿನಾಂ ತತ್ತ್ವಂ ದೇಹಮೋಹ ವಿವರ್ಜಿತಃ || ಮಾಯಾ ದೇಹಮಲಂ ನಾಸ್ತಿ ತಸ್ಯ ಜಂಗಮು ಲಕ್ಷಣಂ || ಇಂತಪ್ಪ ದೇಹ ಕರಣ ಕಾರಣವಾಗಿ ಪ್ರಭುದೇವರು ಬಸವಣ್ಣನು ಅವರಿಬ್ಬರು ಅವರೊಕ್ಕುದ ಕಂಡು ನಾನು ಬದುಕಿದೆನು ಕಾಣಾ ಕೂಡಲ ಚೆನ್ನಸಂಗಮದೇವಾ.

೫೦. ಭ್ರಮೆಯಿಲ್ಲ, ಉದ್ವೇಗವಿಲ್ಲ, ನಿದ್ರೆಗೆಟ್ಟವನು, ನಿಜವನೇ ಚೆಳಿಗುತ್ತಿಹನು, ನಿಶ್ಚಿಂತ ಶರಣ ಚಿಂತೆಗೆಟ್ಟು ಸ್ಥಿರವಾಗಿ ನಿಂದ ಸೀಮೆಯ ಕೆಡಿಸಿ, ನಿಸ್ಸೀಮನಾದ. ಬೋಧೆಯ ಕೆಡಿಸಿ, ನಿರ್ಬೋಧನಾದ. ಕಾಯವ ಕೆಡಿಸಿ ಕರ್ಮಾದಿ ಗುಣ ವಿರಹಿತನಾದ. ಆಶೆಯ ಕೆಡಿಸಿ, ನಿರಾಶಕನಾದ. ಇದು ಕಾರಣ ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ ಆರೂ ಸರಿ ಇಲ್ಲ.

೫೧. ಉಚ್ಛಿಷ್ಟದ ಉದಕದೊಳಗೆ ಚಂದ್ರಮನ ನೆಳಲಿದ್ದರೇನು ? ಆ ಚಂದ್ರಮನ ಉಚ್ಛಿಷ್ಟದೊಳಗಣ ಉದಕದಲ್ಲಿದ್ದಾತನೇ ? ಅಲ್ಲಲ್ಲ. ಸಂಸಾರದ ವ್ಯಾಪಕದೊಳಗೆ ಶರಣನ ಕಾಯವಿದ್ದರೇನೋ ? ಆ ಶರಣನ ಸಂಸಾರದೊಳಗಿದ್ದಾತನೇ ? ಅಲ್ಲಲ್ಲ. ಕೆಸರೊಳಗಣ ತಾವರೆಯಂತೆ ಮರದೊಳಗಣ ಒಯಲಿನಂತೆ ಇದ್ದೂ ಇರನು. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣನುಂಡು ಉಪವಾಸಿ, ಬಳಸಿ ಬ್ರಹ್ಮಚಾರಿ.

೫೨ ಮಾರ್ಗಕ್ರಿಯೆ ಸಂಪಾದಿಸನಾಗಿ ದ್ವೈತಿಯಲ್ಲ. ಜ್ಞಾನಾದೇವ ಮೋಕ್ಷವೆಂಬುದ ಸಂಪಾದಿಸನಾಗಿ ಅದ್ವೈತಿಯಲ್ಲ. ಮೂರ, ಜಾರ, ಹರುಳಿಗನಾಗಿ ಸ್ವರ್ಗಿಯೂ ಅಲ್ಲ, ಅಪವರ್ಗಿಯೂ ಅಲ್ಲ ಕೂಡಲ ಚೆನ್ನಸಂಗಯ್ಯನಲ್ಲಿ ಸಾಹಿತ್ಯವನರಿದ ಪ್ರಸಾದಿ ಶರಣ.

೫೩. ಮನವಚನ ಕಾಯದಲ್ಲಿ ಆಶೆ ಇಲ್ಲದ ಶರಣನು, ಅರ್ಥ ಪ್ರಾಣಾಭಿಮಾನದಲ್ಲಿ ಲೋಭವಿಲ್ಲದ ಶರಣನು, ವಾಕ್ಕು, ಪಾಣಿ, ಪಾದ, ವಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ಹೊದ್ದಲೀಯದ ಶರಣನು, ಲಿಂಗಜಂಗಮ ಪ್ರಸಾದ ಸಾರಾಯ ಶರಣನು, ಕೂಡಲ ಚೆನ್ನಸಂಗನ ಅನುಭಾವ ಸಾರಾಯ ಶರಣನು.

೫೪. ಲಿಂಗದೊಳಗಣ ಬೀಜ, ಜಂಗಮದಲುತ್ಪತ್ತಿ, ಕಾರ್ಯಗುಣವಿಲ್ಲಾಗಿ ಸಂಸಾರ ಭಯವಿಲ್ಲ. ಅಂತರಂಗ ಶುದ್ಧಾತ್ಮ ನಿಸ್ಸಂಗಿ ಜಂಗಮ ಕೂಡಲ ಚೆನ್ನಸಂಗಮದೇವಾ

೫೫. ಲಿಂಗಗ್ರಾಹಕ ಶರಣ ಅಂಗಗುಣಕ್ಕೆ ವಿರೋಧಿಯಯ್ಯಾ. ಜಂಗಮ ಗ್ರಾಹಕ ಶರಣ ಅರ್ಥ ಪ್ರಾಣಾಭಿಮಾನಕ್ಕೆ ವಿರೋಧಿಯಯ್ಯಾ. ಪ್ರಸಾದ ಗ್ರಾಹಕ ಶರಣ ಜಿಹ್ವೆಯ ರುಚಿಗೆ ವಿರೋಧಿಯಯ್ಯಾ. ಇಂತೀ ತ್ರಿವಿಧ ಗ್ರಾಹಕ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ.

೫೬. ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮನಲ್ಲ. ಜಂಗಮಕ್ಕೆ ಮಾಡುವಾತ ಭಕ್ತನಲ್ಲ. ಉಭಯ ಕುಳವಳಿದು ಸುಳಿಯ ಬಲ್ಲಡಾತ ಜಂಗಮ. ಆ ಜಂಗಮದ ಅನುವರಿದಡಗಬಲ್ಲಾತ ಭಕ್ತ. ಇದು ಕಾರಣ ಕೂಡಲ ಚೆನ್ನಸಂಗಯ್ಯ ಇಂಥ ಭಕ್ತಜಂಗಮವಪೂರ್ವ.

೫೭. ಲಿಂಗ ಮುಂತಾಗಿಯೇ ನಡೆವನು ಶರಣನು ಲಿಂಗ ಮುಂತಾಗಿಯೇ ನುಡಿವನು ಶರಣನು. ಲಿಂಗ ಮುಂತಾಗಿಯೇ ರುಚಿಸುವನು ಶರಣನು. ಲಿಂಗ ಮುಂತಾಗಿಯೇ ನೋಡುವನು ಶರಣನು. ಲಿಂಗ ಮುಂತಾಗಿಯೇ ಸಂಗವ ಮಾಡುವ ಶರಣನು. ಲಿಂಗ ಮುಂತಾಗಿಯೇ ತೃಪ್ತಿಯನೈದುವನು ಶರಣನು. ಲಿಂಗ ಕಾಯವೇ ಶರಣ, ಶರಣ ಕಾಯವೇ ಲಿಂಗವಾಗಿ. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಸರ್ವಾಂಗ ಲಿಂಗಿ.

೫೮. ಆತ್ಮ ನಿಜವರಿದು ಪರಮಾತ್ಮ ತಾನೆಂದು ಅರಿದ ಶರಣಂಗೆ ಎಂತಿರ್ದಡಂತೆ ಪೂಜೆ ನೋಡಾ. ಆ ಶರಣ ಭೋಗಿಸಿತ್ತೆಲ್ಲವೂ ಲಿಂಗಾರ್ಪಿತ. ರುಚಿಸಿತ್ತೆಲ್ಲವೂ ಪ್ರಸಾದ. ಆ ಶರಣನರಿದೆಲ್ಲವೂ ಪರಬ್ರಹ್ಮ. ನುಡಿದುದೆಲ್ಲವೂ ಶಿವತತ್ತ್ವ. ಆ ಶರಣ ತಾನೇ ಕೂಡಲ ಚೆನ್ನಸಂಗಯ್ಯನು.

೫೯. ಕಾಯಾನುಭಾವಿಗಳು ಕಾಯದಲ್ಲಿಯೇ ಮುಕ್ತರು. ಜೀವಾನುಭಾವಿಗಳು ಜೀವದಲ್ಲಿಯೇ ಮುಕ್ತರು ಪವನಾನುಭಾವಿಗಳೆಲ್ಲ ಪವನದಲ್ಲಿಯೇ ಮುಕ್ತರು. ಯೋಗಾನುಭಾವಿಗಳೆಲ್ಲ ಯೋಗದಲ್ಲಿಯೇ ಮುಕ್ತರು. ಇವರನೆಂತು ಸರಿ ಎಂಬೆನಯ್ಯಾ ಲಿಂಗಾನುಭಾವಿಗಳಿಗೆ ? ಶಿವಲಿಂಗ ಪ್ರಕಾಶದಲ್ಲಿ ಸದಾ ಸನ್ನಿಹಿತರು ನಮ್ಮ ಶರಣರು ಕೂಡಲ ಚೆನ್ನಸಂಗಮದೇವಾ.

೬೦. ಶರಣಭರಿತ ಲಿಂಗ ಎಲ್ಲಿಡೆಯಲ್ಲಿ ಉಂಟು. ಲಿಂಗಭರಿತ ಶರಣನಪೂರ್ವ ನೋಡಾ. ಗಮನವುಳ್ಳ ಜಂಗಮ ಎಲ್ಲಿಡೆಯಲ್ಲಿ ಉಂಟು. ನಿರ್ಗಮನ ಜಂಗಮನಪೂರ್ವ ನೋಡಾ. ಸುಚೈತನ್ಯ ಲಿಂಗಕ್ಕೆ ನಿಜ ಚೈತನ್ಯ ಜಂಗಮ ಸಾಹಿತ್ಯ ನೋಡಾ. ಈ ಲಿಂಗ ಜಂಗಮದ ಸಕೀಲ ಸಂಯೋಗದಲ್ಲಿ ಪರಿಣಾಮಿ ಕೂಡಲ ಚೆನ್ನಸಂಗಾ ನಿಮ್ಮ ಶರಣ.

೬೧. ಸದಾಚಾರಿಯಾದೊಡೆ, ಉಪ್ಪರಗುಡಿ, ಸಿಂಧುಪತಾಕೆ, ಒಬ್ಬರಿಗೊಬ್ಬರು ಶರಣೆಂಬುದೇ ಸರ್ವ ತೀರ್ಥ. ಆ ಭಕ್ತನ ದೇಹವೇ ತ್ರಿಕೂಟದ ಶಿವಾಲಯ. ಕಾಲೇ ಕಂಭ, ಶಿರವೇ ಸುವರ್ಣದ ಕಳಶ, ಶಿವಾಚಾರವೇ ಪೌಳಿ, ವಿಭೂತಿಯ ಧವಳಿಸಿ, ಪರದೈವವ ಹೊಗಳಿಸದೆ, ಪರಮ ಪಂಚಾಕ್ಷರಿಯ ಗುಡಿಯು ದ್ವಾರವಾಟ ಒಪ್ಪುತ್ತಿದೆ. ವಿನಯವೇ ಅಗ್ಗವಣಿ, ಸಜ್ಜನವೇ ಮಜ್ಜನ, ಸದಾನಂದ ಹಿತವೇ ಲಿಂಗಪೂಜೆ, ಸತ್ಯವೇ ಅಡ್ಡಣಿಗೆ, ಸಮತೆ ಹರಿವಾಣ, ಮನವೇ ಮೀಸಲು, ಗುರುವು ಲಿಂಗ ವಾರೋಗಣೆಯ ಮಾಡುತ್ತಿರಲು ಹರುಷವೇ ಹಸ್ತಮಜ್ಜನ, ಪ್ರೀತಿಯೇ

ಕರ್ಪುರದ ವೀಳ್ಯ, ಕಲಿತನವೇ ಜಾಗಟೆ, ವಿರಕ್ತಿಯೇ ಮದ್ದಳೆ, ಸಂಪ್ರದಾಯವೇ ಗೀತ, ಇದುಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣರು ಸರ್ವಾಂಗಲಿಂಗಿಗಳು.

೬೨. ಆರಾದರೂ ನಿಮ್ಮ ನೆನೆವರಯ್ಯ. ನಾ ನಿಮ್ಮ ನೆನೆವನಲ್ಲ. ಅದೇನು ಕಾರಣವೆಂದರೆ ನಿಮ್ಮ ನೆನೆವ ಮನ ನೀವೆಯಾದಿರಾಗಿ. ಆರಾದರೂ ನಿಮ್ಮ ಪೂಜಿಸುವರಯ್ಯ. ನಾ ನಿಮ್ಮ ಪೂಜಿಸುವನಲ್ಲ ಅದೇನು ಕಾರಣವೆಂದರೆ, ಎನ್ನ ತನುವಿಂಗೆ ನೀವೇ ಪೂಜೆಯಾದಿರಾಗಿ. ಆರಾದರೂ ನಿಮಗರ್ಪಿಸುವರಯ್ಯ ನಾ ನಿಮಗರ್ಪಿಸುವನಲ್ಲ. ಅದೇನು ಕಾರಣವೆಂದರೆ ಎನ್ನ ಸರ್ವಾಂಗವೂ ನಿಮಗರ್ಪಿತವಾಯಿತ್ತಾಗಿ ಇದು ಕಾರಣ ಭಕ್ತ ದೇಹಿಕದೇವ ದೇವದೇಹಿಕ ಭಕ್ತನೆಂಬ ಶ್ರುತಿಯನರಿದು ನಿಮ್ಮ ಮುಟ್ಟಿ ಭವಂ ನಾಸ್ತಿಯಾಯಿತ್ತು ಕಾಣಾ ಕೂಡಲ ಚೆನ್ನಸಂಗಮದೇವಾ.

೬೩. ಕುಲವಳಿದು, ಛಲವಳಿದು, ಮತ್ಸರವಳಿದು, ಮದವಳಿದು, ಆತ್ಮಕ್ಕೆ ಜೀವವಳಿದು, ಸರ್ವಾಹಂಕಾರವಳಿದು, ನಿಜ ಉಳಿದು, ಲಿಂಗ ಜಂಗಮವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ. ತಾನಳಿದು ತಾನುಳಿದು, ಸಹಜ ನಿಜಪದವಿಯಲ್ಲಿ ಕೂಡಲ ಚೆನ್ನಸಂಗನಲ್ಲಿ ತಾನು ತಾನಾದ.

೬೪. ಕೇಶಕಾಷಾಯಾಂಬರ ವೇಷಲಾಂಛನವಾದರೇನೋ ? ಗ್ರಾಸಕ್ಕೆ ಭಾಜನರಲ್ಲದೆ ಲಿಂಗಕ್ಕೆ ಭಾಜನರಲ್ಲ. ಈ ಆಶೆಯ ವೇಷವ ಕಂಡಕ್ಕಿ ಕಾರಹುಣ್ಣಿಮೆಯ ಹಗರಣವೆಂಬೆ ಕಾಣಾ ಕೂಡಲ ಚೆನ್ನಸಂಗಮದೇವಾ.

೬೫. ಅನ್ನದಾನಿ, ವಸ್ತ್ರದಾನಿ, ಹಿರಣ್ಯದಾನಿಗಳ ಮನೆಯ ಬಾಗಿಲ ಕಾದಿಪ್ಪರಯ್ಯ ಬಹುವಿಧದ ವೇಷಧಾರಿಗಳು. ಅದೆಂತೆಂದಡೆ "ವಯೋವೃದ್ಧ ತಪೋವೃದ್ಧ ವೇದವೃದ್ಧ ಬಹುಶ್ರುತ ಸರ್ವೇಷಾಂ ದಾನವೃದ್ಧಸ್ಯ

ದ್ವಾರೆ ತಿಷ್ಠಂತಿ ಕಿಂಕರಃ” ಎಂದುದಾಗಿ ದೈನ್ಯವ ಬಿಟ್ಟಿಪ್ಪ ನಿರಾಭಾರಿಯ ತೋರಿ ಬದುಕಿಸು ಕೂಡಲ ಚೆನ್ನಸಂಗಮದೇವಾ.

೬೬. ರಚನೆ ರಂಜಕವ ನುಡಿದಾತ ಜಂಗಮನಲ್ಲ. ನರರ ಹೊಗಳಿ ಹಾಡಿ ಬೇಡುವಾತ ಜಂಗಮನಲ್ಲ. ನರರ ಕೈವಾರಿಸುವಾತ ಜಂಗಮನಲ್ಲ. ನರರ ಸ್ತುತಿಸುವಾತ ಜಂಗಮನಲ್ಲ. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುವೇ ಜಂಗಮ. ಬಸವಣ್ಣನೇ ಭಕ್ತ.

೬೭. ಲಿಂಗಜಂಗಮ ಭಕ್ತಿಯ ಮಾಡಿಸಿಕೊಂಬಲ್ಲಿ ವಿವರ ಉಂಟು. ಲೌಕಿಕ, ಅಲೌಕಿಕ, ಸಹಜವೆಂಬ ಮಾಟತ್ರಯವನರಿದು ಲೌಕಿಕ ಭಕ್ತರಲ್ಲಿ ಅವರಿಚ್ಛೆಯಲ್ಲಿರ್ದು ಭಕ್ತಿಯ ಮಾಡಿಸಿಕೊಂಬುದು. ಅಲೌಕಿಕ ಭಕ್ತರಿಗೆ ತಾ ಕರ್ತನಾಗಿ ಅವರು ಭೃತ್ಯರಾಗಿ ಭಕ್ತಿಯ ಮಾಡಿಸಿಕೊಂಬುದು. ಸಹಜ ಭಕ್ತರಲ್ಲಿ ಕರ್ತೃತ್ವ ಭೃತ್ಯತ್ವವಿಲ್ಲದೆ ಭಕ್ತಿಯ ಮಾಡಿಸಿಕೊಂಬುದು. ಇಂತಿದು ಲಿಂಗ ಜಂಗಮದ ಜಾಣ್ಮೆ ಕೇಳಿರೋ. ಹೀಗಲ್ಲದೆ ಅವರ ಕಾಡಿ, ಕರಕರಿಸಿ, ಅವರ ಭಂಡುಮಾಡಿ ತಾ ಭಂಡನಹ ಭಂಡನ ಮುಖವ ತೋರದಿರು ಕೂಡಲ ಚೆನ್ನಸಂಗಮದೇವಾ.

೬೮. ಶೂನ್ಯವ ನುಡಿದು ದುರ್ಗತಿಗಿಳಿದವರ, ಅದ್ವೈತವ ನುಡಿದು ಅಹಂಕಾರಿಗಳಾದವರ, ಬ್ರಹ್ಮವ ನುಡಿದು ಭ್ರಮಿತರಾದವರ, ತ್ರಿಕಾಲ ಲಿಂಗಪೂಜೆಯ ಮಾಡದವರ, ಬ್ರಹ್ಮದ ಅನವರತ ಮಾತ ಕೇಳಿ ಹಿಡಿದ ವ್ರತನೇಮಗಳ ಬಿಡುವ, ದುರಾಚಾರಿಗಳ ಮೆಚ್ಚ ಕೂಡಲ ಚೆನ್ನಸಂಗಾ ನಿಮ್ಮ ಶರಣ.

## ಐಕ್ಯ ಸ್ಥಲ

೬೯. ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು, ನೋಡಲಿಲ್ಲದ ಬೆರಗು, ನಿಂದುದು ಕೂಡಲ ಚೆನ್ನಸಂಗಯ್ಯ ಲಿಂಗೈಕ್ಯಂಗೆ.

೬೯. ಸಹಜವೆನ್ನದೆ ಅಸಹಜವೆನ್ನದೆ, ಅಚಳವೆನ್ನದೆ ಅದ್ವಯವೆನ್ನದೆ, ನಿರಾಳವೆನ್ನದೆ ನಿರಂಜನವೆನ್ನದೆ, ಶೂನ್ಯವೆನ್ನದೆ ನಿಃಶೂನ್ಯವೆನ್ನದೆ, ಭೇದ್ಯವೆನ್ನದೆ ಅಭೇದ್ಯವೆನ್ನದೆ, ವಾಚ್ಯವೆನ್ನದೆ ಅವಾಚ್ಯವೆನ್ನದೆ, ತೀತನೆನ್ನದೆ ಅತೀತನೆನ್ನದೆ, ಗೋಚರವೆನ್ನದೆ ಅಗೋಚರವೆನ್ನದೆ, ಏನು ಏನು ಎನ್ನದೆ ನಿಂದುದೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ರಹಸ್ಯವಾದ ಲಿಂಗೈಕ್ಯವು.

೭೦. ಅರುಹಿಲ್ಲದ ಕಾರಣ ಭವಕ್ಕೆ ಬಂದರು. ಅರುಹಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಗುರುವಿಲ್ಲ. ಗುರುವಿಲ್ಲದವಂಗೆ ಲಿಂಗವಿಲ್ಲ. ಲಿಂಗವಿಲ್ಲದವಂಗೆ ಜಂಗಮವಿಲ್ಲ ಜಂಗಮವಿಲ್ಲದವಂಗೆ ಪಾದತೀರ್ಥ ಪ್ರಸಾದವಿಲ್ಲ. ಪಾದತೀರ್ಥ ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ. ಅರಿವು ಸಾಹಿತ್ಯ ಆಚಾರ, ಆಚಾರ ಸಾಹಿತ್ಯ ಗುರು, ಗುರುಸಾಹಿತ್ಯ ಲಿಂಗ, ಲಿಂಗಸಾಹಿತ್ಯ ಜಂಗಮ, ಜಂಗಮ ಸಾಹಿತ್ಯ ಪ್ರಸಾದ, ಪ್ರಸಾದಸಾಹಿತ್ಯ ಗಣತ್ವ. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇವಷ್ಟು ಒಂದುಗೂಡಿದವರಲ್ಲಿ ಎಲ್ಲ ಸ್ಥಲವುಂಟು ಆತ ನಿಷ್ಕಳ ಲಿಂಗೈಕ್ಯ. ಆತ ಅಪೂರ್ವ.

೭೧ ಅಂಗದಿಂದೆ ಲಿಂಗಸುಖ. ಲಿಂಗದಿಂದೆ ಅಂಗಸುಖ, ಆ ಅಂಗ ಲಿಂಗಸಂಗಸುಖದಿಂದೆ ಪರಮಸುಖ ದೊರೆಕೊಂಬುವುದು ನೋಡಾ. ಆ ಅಂಗಲಿಂಗಸಂಗಸಮರಸೈಕ್ಯವನು ಕೂಡಲ ಚೆನ್ನಸಂಗ, ನಿಮ್ಮ ಶರಣನಾದ ಮಹಾಲಿಂಗೈಕ್ಯ ಬಲ್ಲನಲ್ಲದೆ ಉಳಿದವರೆತ್ತ ಬಲ್ಲರಯ್ಯಾ ?

೭೨. ಗತಿ ಪಥ ಮುಕ್ತಿಯ ಬಯಸಿ ಮಾಡುವಾತ ಭಕ್ತನಲ್ಲ
ಜೀವನೋಪಾಯಕ್ಕೆ ಬಯಸಿ ಬೇಡುವಾತ ಲಿಂಗಜಂಗಮವಲ್ಲ
ಗತಿಪಥ ಮುಕ್ತಿ ಸೂತಕ ವಿರಹಿತ ಭಕ್ತ
ಆಶಾಪಾಶ ವಿರಹಿತ ಜಂಗಮ ಅದೆಂತೆಂದಡೆ

ಸಾಲೋಕ್ಯಮಪಿ ಸಾಮೀಪ್ಯಂ ಸಾರೂಪ್ಯಂ ಚ ಸಯುಜ್ಯತಾಮ್ ।

ಸಕೃದಾಪೇಕ್ಷುಭಕ್ತಾನಾಂ ನಾಸ್ತಿ ಮೋಕ್ಷೋ ವರಾನನೇ ||
ಎಂಬುದಾಗಿ ಇದೀಗ ಭಕ್ತಸ್ಥಲ
ಇನ್ನು ಸುಳಿವ ಜಂಗಮಕ್ಕೆ ಉಪಾಧಿಯಿಲ್ಲದಿರಬೇಕು
ಅದೆಂತೆಂದಡೆ—

ಜ್ಞಾನಾಗಮಂ ಜ್ಞಾನರೂಪಿ ಮುಪಾದಿ ನಿರುಪಾಧಿಕಮ್ |
ಭಕ್ತಪ್ರಾಣಿ ಸಮಾಯುಕ್ತ ಮಿತ್ಯೇತಲ್ಲಿಂಗ ಜಂಗಮಮ್ ||

ಎಂದುದಾಗಿ ಇದೀಗ ಜಂಗಮಸ್ಥಲ
ಮಾಡಿದರೆ ಮಾಟದೊಳಗಿಲ್ಲದಿರಬೇಕು ಭಕ್ತ
ಮಾಡಿಸಿಕೊಂಬುದರೊಳಗಿಲ್ಲದಿರಬೇಕು ಜಂಗಮ
ದೇಹಗುಣವಿಲ್ಲದಾತ ಭಕ್ತ ಜೀವಗುಣವಿಲ್ಲದಾತ ಜಂಗಮ
ಈ ಉಭಯ ಕುಳನ ಸಂದಳಿದು ಒಂದಾಗಿನಿಂದ ನಿಜದ ನಿಲವು
ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು

೭೩. ಮತಿಜ್ಞಾನ, ಶೃತಿಜ್ಞಾನ, ಖಂಡಜ್ಞಾನ, ಕೇವಲಜ್ಞಾನ, ಜ್ಯೋತಿಜ್ಞಾನ ಮಹಾಜ್ಯೋತಿಜ್ಞಾನವೆಂದಿತ್ತು. ಜ್ಞಾನವಾರುತೆರನು. ಮತಿಜ್ಞಾನದಿಂದ ಶೃತಿಜ್ಞಾನವಹುದು. ಶೃತಿಜ್ಞಾನದಿಂದ ಖಂಡಜ್ಞಾನವಹುದು. ಖಂಡಜ್ಞಾನದಿಂದ ಕೇವಲಜ್ಞಾನವಹುದು ಕೇವಲಜ್ಞಾನದಿಂದ ಜ್ಯೋತಿಜ್ಞಾನವಹುದು. ಜ್ಯೋತಿಜ್ಞಾನದಿಂದ ಮಹಾಜ್ಯೋತಿ ಜ್ಞಾನವಹುದು. ಮಹಾಜ್ಯೋತಿ ಜ್ಞಾನದಿಂದ ನಿರಾಲಂಬವಹುದು. ಮತಿಜ್ಞಾನವೇ ಭಕ್ತ, ಶೃತಿಜ್ಞಾನವೇ ಮಹೇಶ್ವರ, ಖಂಡಜ್ಞಾನವೇ ಪ್ರಸಾದಿ. ಕೇವಲಜ್ಞಾನವೇ ಪ್ರಾಣಲಿಂಗಿ, ಜ್ಯೋತಿಜ್ಞಾನವೇ ಶರಣ, ಮಹಾಜ್ಯೋತಿಜ್ಞಾನವೇ ಐಕ್ಯ. ಈ ಷಟ್‌ಸ್ಥಲದ ನೆಲೆಯ ಬಲ್ಲಾತನೇ ಕೂಡಲ ಚೆನ್ನಸಂಗಯ್ಯನಲ್ಲಿ ಐಕ್ಯನು.

೭೪. ತನುವಿಡಿದು ನಡೆವ ತ್ರಿವಿಧ, ತ್ರಿವಿಧ ಸಂಪತ್ತುಗಳು, ಭಕ್ತ ಮಹೇಶ, ಪ್ರಸಾದಿ. ಮನವಿಡಿದು ನಡೆವ ತ್ರಿವಿಧ, ತ್ರಿವಿಧ ಸಂಪತ್ತುಗಳು, ಪ್ರಾಣಲಿಂಗಿ ಶರಣ ಐಕ್ಯ. ಈ ಉಭಯದನುಭವವಿಡಿದು,

"ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೆ" ಎಂಬ ಈ ಭೇದವ ಭೇದಿಸಬಲ್ಲಡೆ, ಹಿಂದಿಲ್ಲ, ಮುಂದಿಲ್ಲ, ಇಹಪರ ಒಂದೇ, ಕರ್ಮನಾಸ್ತಿ, ಭವನಾಸ್ತಿ, ಕೂಡಲ ಚೆನ್ನಸಂಗ ಸ್ವಾಯತವಾದಂಗೆ ಇದು ಸಹಜ.

೭೫. ಭಕ್ತನಾದರೆ ಭಕ್ತಿಸ್ಥಲವನರಿತು, ಅರಿಯದಂತಿರಬೇಕು. ಮಹೇಶನಾದರೆ, ನಿಷ್ಠೆಯ ಕುಳವನರಿತು, ಅರಿಯದಂತಿರಬೇಕು. ಪ್ರಸಾದಿಯಾದರೆ, ಪ್ರಸಾದಸ್ಥಲವನರಿತು, ಅರಿಯದಂತಿರಬೇಕು. ಪ್ರಾಣಲಿಂಗಿಯಾದರೆ ಅಂತಸ್ಥವನರಿತು, ಅರಿಯದಂತಿರಬೇಕು. ಶರಣನಾದರೆ, ಸತಿಪತಿ ಎಂದರಿತು ಅರಿಯದಂತಿರಬೇಕು. ಐಕ್ಯನಾದರೆ, ತಾನು ತಾನಾಗಿ ಅಗಲದಂತಿರಬೇಕು ಇಂತೀ ಷಟ್‌ಸ್ಥಲದ ನಿರ್ಣಯವ ನಿಶ್ಚಯಿಸದೆ ಆನು ಬಲ್ಲೆನೆಂಬ ಲಜ್ಜೆಗೆಟ್ಟ ಲಾಂಛನಧಾರಿಯನೇನೆಂಬೆ ಕೂಡಲ ಚೆನ್ನಸಂಗಮದೇವಾ.

೭೬. ತನು ನಿಮ್ಮನಪ್ಪಿ ಮಹಾಲಿಂಗವಾದ ಬಳಿಕ ತನುವೆಂಬುದು ಮತ್ತೆಲ್ಲಿಯದೋ ? ಮನ ನಿಮ್ಮನಪ್ಪಿ ಘನಮನವಾದ ಬಳಿಕ, ಮನವೆಂಬುದು ಮತ್ತೆಲ್ಲಿಯದೋ ? ಪ್ರಾಣ ನಿಮ್ಮನಪ್ಪಿ ಪ್ರಾಣಪಥದಲ್ಲಿ ಸಿಲುಕಿದ ಬಳಿಕ, ಪ್ರಾಣವೆಂಬುದು ಮತ್ತೆಲ್ಲಿಯದೋ ? ಇಂತೀ ತ್ರಿವಿಧವು ಲಿಂಗದಲ್ಲಿ ನಿರ್ಲೇಪವಾಗಿ, ಮನದೋರದಿರುವ ಕೂಡಲ ಚೆನ್ನಸಂಗಯ್ಯನೇ ಬಲ್ಲ.

೭೭. ಭಾವ ಭಾವಿಸಬಲ್ಲುದೆ ? ಭಾವ ಭಾವಿಸಲರಿಯದು. ಅದೇನು ಕಾರಣ ? ಭಾವದಲ್ಲಿ ಭಾವಿಸುವ ಭಾವಿಕ ತಾನಾಗಿ. ನೇತ್ರ ನೋಡಬಹುದೆ ? ನೇತ್ರ ನೋಡಲರಿಯದು. ಅದೇನು ಕಾರಣ ? ನೇತ್ರದ ಬಾಗಿಲಲ್ಲಿ ನಿಂದು ನೋಡುವಾತ ತಾನಾಗಿ. ಶ್ರೋತ್ರ ಕೇಳಬಲ್ಲುದೇ ? ಶ್ರೋತ್ರ ಕೇಳಲರಿಯದು. ಅದೇನು ಕಾರಣ ? ಶ್ರೋತ್ರದ ಬಾಗಿಲಲ್ಲಿ ನಿಂದು ಕೇಳುವಾತ ತಾನಾಗಿ. ನಾಸಿಕ ಪರಿಮಳವ ವಾಸಿಸಬಲ್ಲುದೆ?

ವಾಸಿಸಲರಿಯದು. ಅದೇನು ಕಾರಣ? ನಾಸಿಕದ ಬಾಗಿಲಲ್ಲಿ ನಿಂದು ವಾಸಿಸುವಾತ ತಾನಾಗಿ. ಜಿಹ್ವೆ ರುಚಿಸಬಲ್ಲುದೆ? ಜಿಹ್ವೆ ರುಚಿಸಲರಿಯದು. ಅದೇನು ಕಾರಣ? ಜಿಹ್ವೆಯ ಕೊನೆಯಲ್ಲಿ ನಿಂದು, ರುಚಿಯ ನಿಶ್ಚೈಸುವಾತ ತಾನಾಗಿ. ಜಂತ್ರಗಳಾಡಬಲ್ಲವೆ? ಜಂತ್ರಗಳಾಡಲರಿಯವು. ಅದೇನು ಕಾರಣ? ಜಂತ್ರಗಳನಾಡಿಸುವ ಯಂತ್ರವಾಹಕ ತಾನಾಗಿ. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಸರ್ವಾಂಗಲಿಂಗಿ.

೭೮. ಉಪದೇಶ ನಷ್ಟವಾದಡೆ ಗುರುವೆಂಬೆ, ಭಾವ ನಷ್ಟವಾದಡೆ ಲಿಂಗವೆಂಬೆ, ಗಮನ ನಷ್ಟವಾದಡೆ ಜಂಗಮನೆಂಬೆ, ಮನ ನಷ್ಟವಾದಡೆ ಭಕ್ತನೆಂಬೆ, ಅರ್ಪಿತ ನಷ್ಟವಾದಡೆ ಪ್ರಸಾದಿ ಎಂಬೆ. ಆಚಾರ ನಷ್ಟವಾದಡೆ ಐಕ್ಯನೆಂಬೆ. ಇಂತೀ ಷಟ್‌ಸ್ಥಲದ ನಿಂದ ನಿಲುವಿನ ಪರಿಭಾವ ಪದವ ಕೂಡಲ ಚೆನ್ನಸಂಗಾ, ನಿಮ್ಮ ಶರಣ ಬಲ್ಲ.

೭೯. ಮುಟ್ಟದ ಮುನ್ನ ಗುರು ಉಂಟು. ಮುಟ್ಟದ ಮುನ್ನ ಲಿಂಗ ಉಂಟು. ಮುಟ್ಟದ ಮುನ್ನ ಜಂಗಮ ಉಂಟು. ಪಾದೋದಕ ಉಂಟು. ಪ್ರಸಾದ ಉಂಟು. ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪಾದೋದಕವಿಲ್ಲ, ಪ್ರಸಾದವಿಲ್ಲ. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಸ್ವಯವಲ್ಲದೆ ಪರವಿಲ್ಲ.

೮೦. ಇದ್ದೂ ಬದ್ಧನಲ್ಲ, ಸುಳಿದು ಸೂತಕಿಯಲ್ಲ, ಆವ ಸಂಗವೂ ಇಲ್ಲದ ನಿಜೈಕ್ಯನು. ಬೇಕು ಬೇಡೆನ್ನದೆ, ಅಳಿದುಳಿದು ಕರ್ಪುರದ ಗಿರಿಯನು ಉರಿ ತಾಗಿದಂತೆ, ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು.

೮೧. ಆಯತ, ಸ್ವಾಯತ, ಸಂಯೋಗ ಸಂಬಂಧಿಯ ಆಚಾರವಡಗಿತ್ತು, ಅನುಭಾವ ತೊಡೆಯಿತ್ತು, ನಿಕ್ರಿಯಾತೀತಿ, ನಿಷ್ಪತ್ತಿಯಾಯಿತ್ತು, ಕೂಡಲ ಚೆನ್ನಸಂಗಯ್ಯ ತ್ರಿವಿಧ ಸಂಬಂಧಿಗೆ.

೮೨ ಸತ್ಯವೆನ್ನದೆ, ಸಹಜವೆನ್ನದೆ, ಅಖಂಡಿತವೆನ್ನದೆ, ಪರಿಪೂರ್ಣ

ವೆನ್ನದೆ, ಶೂನ್ಯವೆಂದೆನ್ನದೆ, ನಿಃಶೂನ್ಯವೆಂದೆನ್ನದೆ, ಏನೂ ಏನೂ ಎನ್ನದೆ ಕೂಡಲ ಚೆನ್ನಸಂಗವೆಂಬ ನುಡಿಗೆಡೆ ಇಲ್ಲದುದನಾನೆಂಬೆ.

೮೩. ಅಂತರಂಗದಲ್ಲಿ ಭಾವಿಸುವನಲ್ಲ. ಬಹಿರಂಗದಲ್ಲಿ ಬಯಸುವನಲ್ಲ. ಎರಡುವನತಿಗಳೆದು ತನ್ನಲ್ಲಿ ತಾನೇ ಸಹಜ ನೋಡಾ. ಅಂತರಂಗ ಬಹಿರಂಗವಿಲ್ಲ, ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ.

೮೪. ಇಷ್ಟಲಿಂಗ ಸಂಬಂಧವಾದ ಬಳಿಕ, ಕಾಯಗುಣ ಕೆಟ್ಟು ಲಿಂಗ ಕಾಯವಾಯಿತ್ತು. ಪ್ರಾಣಲಿಂಗ ಸಂಬಂಧವಾದ ಬಳಿಕ, ಕರಣಗುಣ ಕೆಟ್ಟು ಲಿಂಗಕಿರಣಂಗಳಾದವು. ಭಾವಲಿಂಗ ಸಂಬಂಧವಾದಲ್ಲಿ, ಇಂದ್ರಿಯಗುಣ ಕೆಟ್ಟು, ಲಿಂಗೇಂದ್ರಿಯಂಗಳಾದವು. ಇದು ಕಾರಣ ಶರಣಂಗೆ ಬೇರೆ ಅಂಗವಿಲ್ಲ ಬೇರೆ ಅಂಗವಿಲ್ಲಾಗಿ, ಅರ್ಪಿತ ಅನರ್ಪಿತವೆಂಬುಭಯ ಶಂಕೆ ಹೋಗಿ ನಿಂದಿತ್ತು, ಕೂಡಲ ಚೆನ್ನಸಂಗಯ್ಯ ನಿನ್ನೊಳಡಗಿದ ನಿಜೈಕ್ಯಂಗೆ.

೮೫. ತನು ಬಯಲು ನಿರವಯದೊಳಡಗಿತ್ತು. ಮನ ಬಯಲು ನಿರವಯದೊಳಡಗಿತ್ತು. ಭಾವ ಬಯಲು ನಿರವಯದೊಳಡಗಿತ್ತು. ಬಯಲು ಬಯಲು ಬೆರಸಿ, ಬಯಲೇಯಾಯಿತ್ತು, ಕೂಡಲ ಚೆನ್ನಸಂಗಯ್ಯನೆಂಬ ನುಡಿಯಡಗಿತ್ತು.

೮೬. ಮಾಡಿ ಮಾಟವ ಮರೆದು, ಕೂಡಿ ಕೂಟವ ಮರೆದು, ಬಯಲು ಸಮರಸಕ್ಕೆ ಮರುಳಾಯಿತ್ತಲ್ಲಾ! ಜೀವಪ್ರಾಣನ ಭೇದವ ತಿಳಿದು ನಿಜವದಕ್ಕಾಯಿತ್ತಲ್ಲಾ! ಅನ್ಯ ಚಿಹ್ನವಡಗಿ ತನ್ನ ತಾ ಮರೆಯಿತ್ತು ಕೂಡಲ ಚೆನ್ನಸಂಗಾ.

# ಅಷ್ಟಾವರಣಗಳು

## ಗುರು

೮೭. ಮಹಾಘನ ಶ್ರೀ ಗುರು ಲಿಂಗವೇ ಲಿಂಗವಲ್ಲದೆ, ಸುತನೊಂದು ಗುರುವೆ? ಭ್ರಾತೃವೊಂದು ಗುರುವೆ? ಪತಿಯೊಂದು ಗುರುವೆ? ಸುತ ನೊಂದು ಗುರುವೆ? ಗುರು ಗುರುವೆಂದರೇನೋ? ಆ ಮಹಾಘನ ಗುರುಲಿಂಗಕ್ಕೆ ಇವೆಲ್ಲವ ಸರಿಗಂಡರೆ ಆ ಘೋರ ನರಕ ತಪ್ಪದು ಕೂಡಲ ಚೆನ್ನಸಂಗಮದೇವಾ.

೮೮. ಕಾಲಚಕ್ರ, ಕರ್ಮಚಕ್ರ, ನಾದಚಕ್ರ, ಬಿಂದುಚಕ್ರದೊಳಗೆ ಹುಟ್ಟದ ಯೋನಿ ಇಲ್ಲ. ಮೆಟ್ಟದ ನೆಲವಿಲ್ಲ. ಉಣ್ಣದಾಹಾರವಿಲ್ಲ ಕಾಣದ ದುಃಖವಿಲ್ಲ. ಇಂತೀ ನಾನಾ ಜನ್ಮದಲ್ಲಿ ಸುಗ್ಗಿ ಸುರಿಯಾಗಿ ಬಂದವಂಗೆ, ಪ್ರಾಯಶ್ಚಿತ್ತವಿಲ್ಲದೆ ಗುರುವ ಮುಟ್ಟಬಹುದೆ? ಲಿಂಗವ ನರ್ಚಿಸಬಹುದೇ? ಪ್ರಸಾದವ ಕೊಳ್ಳಬಹುದೇ? ಕೂಡಲ ಚೆನ್ನಸಂ ಗಮದೇವಾ ಹೀಗೆ ತ್ರಿಕರಣ ಶುದ್ಧವಿಲ್ಲದವಂಗೆ ಉಪದೇಶವ ಕೊಟ್ಟ ಗುರುವಿಂಗೆ ನಾಯಕ ನರಕ ತಪ್ಪದು.

೮೯. ಭವಿತನಕ್ಕೆ ಹೇಸಿ ಭಕ್ತನಾದೆನೆಂದೊಡೆ, ಆತನ ಪೂರ್ವಾಶ್ರಯವ ಕಳೆದು, ಭಕ್ತನ ಮಾಡುವ ಪರಿ ಎಂತೆಂದೊಡೆ, ಅವನ ಕಾಯುವ ಶುದ್ಧವ ಮಾಡುವುದು. ಜೀವನ ಶುದ್ಧವ ಮಾಡುವುದು. ಆತ್ಮಗೂಡಿ ವಾಕ್ಕು, ಪಾಣಿ, ಪಾದ, ವಾಯು, ಗುಹ್ಯನೆಂಬ ಕರ್ಮೇಂದ್ರಿಯಂಗಳ ಶುದ್ಧವ ಮಾಡುವುದು. ಆತನ ಶ್ರೋತ್ರ ನೇತ್ರ ಘ್ರಾಣ ಜಿಹ್ವೆ ತ್ವಕ್ಕೆಂಬ ಜ್ಞಾನೇಂದ್ರಿಯಂಗಳ ಶುದ್ಧವ ಮಾಡುವುದು. ಆತನ ಒಳಹೊರಗೆ ಸುತ್ತಿರ್ದ ಮಾಯಾಪಾಶದ ಪ್ರಪಂಚಮಂ ಬಿಡಿಸಿ, ಹಿಂದಣ ಭೂತ ಭಾವದಿಂದ ಜೀವ ಶಿವನೆಂಬ ಪರಿಯಾಯಮಂ ಕೆಡಿಸಿ, ಆ ಪರಶಿವನೇ ಇಷ್ಟಬ್ರಹ್ಮ, ಆ ಇಷ್ಟವೇ ನಿನ್ನ ಪ್ರಾಣ, ಆ ಪ್ರಾಣವೇ ಇಷ್ಟವೆಂದರುಹಿ

ಜೀವ ಶಿವನಲ್ಲಿ, ಆ ಶಿವನೆ ನಿನ್ನ ಜೀವವೆಂಬ ಪರಿಯಾಯಮಂ ತೋರಿಸಿ ಆತನ ಜೀವಭಾವವಂ ಕಳೆದು, ಶಿವಭಾವಿ ಎಂದೆನಿಸಿ, ಆತಂಗೆ ಪಂಚ ಭೂತಾದಿ ಅಧಿದೇವತೆಗಳ ತೋರಿಸಿ ಪಂಚವಕ್ತ್ರಂಗಳ ನೆಲೆಗೊಳಿಸಿ, ಪಂಚವರ್ಣಂಗಳನರುಹಿ, ಇವಕ್ಕೆ ಸಾಕ್ಷಿ, 'ಜೀವಾತ್ಮಂಚ' ಎಂಬ ಶೃತಿ ಯಿಂದೆ ಆತನ ಆತ್ಮ ಶುದ್ಧತೆಯಿಂ ಆತನ ಸರ್ವಾಂಗನ ಶುದ್ಧವಮಾಡಿ, ಆತನ ತಂದು ಗಣ ಪಂಕ್ತಿಯಲ್ಲಿ ಕುಳ್ಳಿರಿಸಿ, ಆ ದೀಕ್ಷಿತನ ಜಿಹ್ವೆಯಲ್ಲಿ ಶೃತಿಯನೋದಿಸಿ, ಸಾಕ್ಷಿ ಓಂ ಕರ್ಮಣಾಂ । ಮನಸಾ ವಾಚಾ ಗುರೂ ಣಾಂ ಭಕ್ತವತ್ಸಲಃ ॥ ಶರೀರಾರ್ಥಂ ಪ್ರಾಣಂಚ । ಸದ್ಗುರುಭ್ಯೋನಿವೇ ದಯೇತ್ ॥ ಎಂದು ಮಾನಸೋಚ್ಚರಣೆಯಂ ಮಾಡಿಸಿ, ಆ ತಚ್ಛಿಷ್ಯನ ಭವವಂ ಛೇದಿಸಿ, ಆಮೇಲೆ ಅವನ ಎಬ್ಬಿಸಿ ಚೌಕ ಮಧ್ಯದಲ್ಲಿ ಕುಳ್ಳಿರಿಸಿ ಶೃತಿ 'ಓಂ ಮೇನಕಾ ಮೇನಕಾ' ಎಂಬ ಮಂತ್ರದಿಂವೆ ಅರ್ಘ್ಯೋದಕ ಮಂ ವಾಮ ಪ್ರದಕ್ಷಿಣವಾಗಿ ತಳಿದು, ಭಾಳದಲ್ಲಿ ವಿಭೂತಿಯ ಪಟ್ಟ ವಂ ಕಟ್ಟಿ, ಆತನ ಮಸ್ತಕದ ಮೇಲೆ ಹಸ್ತವನಿರಿಸಿ, ಶತಪತ್ರ ಕಮಲ ದೊಳಗಿರ್ದ ವಸ್ತುವನು ಮಾನಸೋಚ್ಚರಣೆಯಿಂದೆ ಪ್ರಾಣಲಿಂಗವೆಂದ ರುಹಿ, ಜ್ಞಾನ ದೃಷ್ಟಿಗೆ ತಂದು, ಆದೇ ವಸ್ತುವನೆ ಬಹಿಷ್ಕರಿಸಿ ತಂದು, ಕುಮಾರ ಮೂರ್ತಿಯೊಳಗೆ ಪುದುಗಿಸಿ, ಅಷ್ಟುವೆಲ್ಲ ಒಂದುಗೂಡಿದ ಮುದ್ದಿಯೇ ಇಷ್ಟಲಿಂಗವೆಂದು ತೋರಿಸಿ, ಕರಮನ ಭಾವದಲ್ಲಿ ನಿರ್ಧರಿ ಸೆಂದು ಹೇಳಿ, ಆತ್ಮವೆ ಲಿಂಗವೆಂಬುದು ಮಾಣಿಸಿ, ಕರಕೆ ಕಂಕಣವ ಕಟ್ಟಿ, ನಿರ್ಧರದ ತಾಳಿಯಂ ಕಂಠವಲ್ಲಿ ಕಟ್ಟಿ, ಕಲಿಯಾಗು ಎಂದು ಎನ್ನ ಕೃತಾರ್ಥವ ಮಾಡಿದ ಶ್ರೀ ಗುರುವೇ, ಕೂಡಲ ಚೆನ್ನಸಂಗ ನಿಮ್ಮ ಶರಣ ಸಂಗನ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು

೯೦. ಗುರುವೆಂಬಾತನು ಸಕಲಾಗಮದ ಹೃದಯವನರಿದು, ಕ್ರಿಯಾ ಜ್ಞಾನಯುಕ್ತನಾಗಿ ತನ್ನ ತಾನರಿದು, ಸರ್ವಾಚಾರ ಸಂಪನ್ನತೆ ನೆಲೆ ಗೊಂಡು, ನಿರ್ಣಯದ ಗೊತ್ತನರಿದು ಉಪದೇಶವ ಮಾಡಬಹುದು. ಉಪದೇಶವ ಮಾಡುವ ಪರಿ ಎಂತೆಂದೊಡೆ, ಬ್ರಾಹ್ಮಣನ ಮೂರುವರ್ಷ

ನೋಡಬೇಕು. ಕ್ಷತ್ರಿಯನ ಆರು ವರ್ಷ ನೋಡಬೇಕು. ವೈಶ್ಯನ ಒಂಬತ್ತು ವರ್ಷ ನೋಡಬೇಕು. ಶೂದ್ರನ ಹನ್ನೆರಡು ವರ್ಷ ನೋಡಬೇಕು. ಈ ಹಿಂಗೆ ನೋಡಿದಲ್ಲದೆ, ದೀಕ್ಷೆಯ ಕೊಡಲಾಗದು. ಈ ಕ್ರಮುವನರಿಯದೆ, ಉಪಾಧಿವಿಡಿದು, ಉಪದೇಶವ ಕೊಂಬಾತ ಶಿಷ್ಯನಲ್ಲ. ಇವರಿಬ್ಬರ ನಿಲವು ಒಂದೇ. ಟಕ್ಕನ ಮನೆಗೆ ಟಕ್ಕ ಬಂದಂತೆ, ಈ ಗುರುಶಿಷ್ಯರಿಬ್ಬರನು ರೌರವ ನರಕದಲ್ಲಿಕ್ಕುವ ನಮ್ಮ ಕೂಡಲ ಚೆನ್ನಸಂಗಮದೇವಾ.

೯೧. ಗುರುವಿನ ಗುರು ಪರಮುಗುರು ಪರಬ್ರಹ್ಮ ಜಂಗಮುವೆನಿಸಿಕೊಂಡ ಬಳಿಕ ತಾನೇ ಗುರುವಾಗಿ ಉಪದೇಶವ ಮಾಡಲಾಗದು. ಮುಂದೆ ಶಿಕ್ಷೆ ದೀಕ್ಷೆಗಳಿಂದೆ ಗುರು ಕರುಣವ ಪಡೆವವರಿಂದೆ, ದಾಸೋಹವ ಮಾಡಿಸಿಕೊಳ್ಳಲ್ಕರ್ತನಲ್ಲದೆ, ತನ್ನ ಪ್ರಾಣಲಿಂಗವ ಕೊಡಲ್ಕರ್ತನಲ್ಲ. ತನ್ನ ಪ್ರಾಣಲಿಂಗವ ಕೊಟ್ಟು ಗುರುವಾದ ಬಳಿಕ, ಜಂಗಮುಸ್ಥಲಕ್ಕೆ ಭಂಗ ಪೊಂದಿತ್ತು. ಅದೆಂತೆಂದೊಡೆ, ಅವನು ತನ್ನ ಪೂರ್ವಾರ್ಜಿತವ ತ್ಯಜಿಸಿ, ಗುರುಕರಜಾತನಾಗಿ, ನಿರ್ಧರಿಸಿ ನಿಲಲರಿಯ. ಅಂತಪ್ಪ ಭವ ಜೀವಿಗೆ ನಿಜ ಜಂಗಮುವೆ? ಶಿವಯೋಗಿ ಎನಿಸಿಕೊಂಬ ರಾಜ ಕೃಪಾಳು ತಾನೆ ಚರಲಿಂಗವಾಗಿ ಬಂದು ಆಚಾರ ಭ್ರಷ್ಟರಿಗೆ ಹಸ್ತಾನುಗ್ರಹವ ಮಾಡಿದೊಡೆ ಜಂಗಮುಸ್ಥಲಕ್ಕೆ ಅದೇ ಭಂಗವೆಂದುದು ನಮ್ಮ ಕೂಡಲ ಚೆನ್ನಸಂಗಯ್ಯನ ವಚನ. ಅದು ಕಾರಣವಾಗಿ ವೀರಶೈವ ಸಿದ್ಧಾಂತದಲ್ಲಿ ಶಬ್ದಮುಗ್ಧವಾಗಿರಬೇಕು. ಗುಹ್ಯಕ್ಕೆ ಗುಹ್ಯವಾಗಿರಬೇಕಯ್ಯಾ.

೯೨. ತನ್ನ ಪುತ್ರಂಗೆ ತಾನೆ ಗುರುವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು. ಎನಗೆ ಎನ್ನ ತಂದೆಯೇ ಗುರುವೆನ್ನುವ ದ್ರೋಹಿಯ ಮುಖವ ನೋಡಲಾಗದು. ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ, ಅವರಿಬ್ಬರ ತಿರಗಿಸಿ, ಕಟ್ಟಿ, ಹೊತ್ತಿಸಿ, ನೊಂದಿಸಿ, ಸುಡುವ ನಮ್ಮ ಕೂಡಲ ಚೆನ್ನಸಂಗಮದೇವಾ.

೯೩. ತನ್ನ ಮನೆಯು ಹೋಗದ ಗುರುವಿನರಿಕೆಯೊಂದು ಹೋಗುವವ ಶಿಷ್ಯನಲ್ಲವಯ್ಯಾ. ತಾ ಹೋಗದ ಮನೆಗೆ ಉಪದೇಶವ ಮಾಡುವಾತ ಗುರುವಲ್ಲವಯ್ಯಾ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ. ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ. ಈ ಗುರುಶಿಷ್ಯರಿಬ್ಬರಿಗೆಯು ದೇವಭಕ್ತರೆಂದೊಡೆ ನಾಯಕ ನರಕವಯ್ಯಾ ಕೂಡಲ ಚೆನ್ನ ಸಂಗಮದೇವಾ.

೯೪. ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ ತನ್ನ ಪ್ರಾಣಲಿಂಗವ ಕೊಟ್ಟು ಕರ್ಣದಲ್ಲಿ ಮಂತ್ರವ ನಿಕ್ಷೇಪಿಸಿ, ಬಳಿಕ ಆವ ಬಂದು ಶಿಷ್ಯನ ಮನೆಯು ಹೊಗಲೊಲ್ಲದೆ ಅಕ್ಕಿಪಡಿಯು ತರಿಸಿಕೊಂಡು ಹೊಸ ಬಳಕೆ ಎಂದು ಮಾಡಿಸಿಕೊಂಡುಂಬನಂತೇನೆಂಬೆನಯ್ಯಾ? ಅವನ ಧನಕ್ಕೆ ತಂದೆಯಾದನಲ್ಲದೆ ಅವನಿಗೆ ತಂದೆಯಾದುದಿಲ್ಲ. ಇದು ಕಾರಣವಾಗಿ ಕೂಡಲ ಚೆನ್ನಸಂಗಯ್ಯ ಲಿಂಗವ ಮಾರಿಕೊಂಡುಂಬ ಭಂಗಗಾರರ ಕಂಡು ನಾಚಿ ಬೆರಗಾದೆನಯ್ಯಾ.

೯೫. ಕ್ರಿಯಾದೀಕ್ಷೆ ಹೀನರಿಗೆ ಮಂತ್ರೋಪದೇಶವ ಹೇಳುವನೊಬ್ಬ ಮಂತ್ರದ್ರೋಹಿ ನೋಡಾ ಕೂಡಲ ಚೆನ್ನಸಂಗಮದೇವಾ.

೯೬. ಗುರು ಸ್ವಾಮಿ ಶಿಷ್ಯನ ಅನುಗ್ರಹವ ಮಾಡುವ ಪರಿ ಎಂತೆಂದಡೆ ಅರಿವು ಆಚಾರಸಹಿತವಾಗಿ ಶಿಕ್ಷೆ ದೀಕ್ಷೆಯು ಮುಖದಿಂದೆ ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವೆಂದು ವಿವರವ ಮಾಡಿ ಕರುಣಿಸುವುದೇ ಗುರುತತ್ತ್ವ. ಈ ಕ್ರಮವನರಿದು ಮಹಾಪ್ರಸಾದವೆಂದು ಕೈಕೊಂಬುವುದೇ ಶಿಷ್ಯತ್ವ. ಇಂತಹ ಗುರುಮಾರ್ಗಾಚಾರವನು ಮಹಾಪ್ರಸಾದವೆಂದು ಕೈಕೊಂಡ ಬಳಿಕ ಪರಪಾಕಂಗಳ ಬಿಡಬೇಕು ಒಡಲ ಕಕ್ಕುಲತೆಗೆ ಭಕ್ತನ ದಾಕ್ಷಿಣ್ಯಕ್ಕೆ ಅನ್ಯ ಭಜನೆ ಭವಿ ಮಿಶ್ರವಾದವರ ಮನೆಯಲ್ಲಿ ನೇಮಸ್ತರುಗಳು ಹೊಕ್ಕು ಲಿಂಗಾರ್ಚನೆಯು ಮಾಡಿದಡೆ ಅನ್ನ ಪಾಕಾದಿಗಳ ಕೊಂಡೊಡೆ ನಾಯಕ ನರಕ ತಪ್ಪದಯ್ಯಾ ಕೂಡಲ ಚೆನ್ನ ಸಂಗಮದೇವಾ.

೯೭. ಕರ್ಮಜಾತನ ಕಳೆದು ಶ್ರೀ ಗುರು ಲಿಂಗವ ಕೊಟ್ಟು ಪುಣ್ಯ ಜಾತನ ಮಾಡಿದ ಬಳಿಕ, ಆತಂಗೆ ಶಿವಕುಲವಲ್ಲದೆ, ಬೇರೆ ಮತ್ತೊಂದು ಕುಲ ಉಂಟೇ ಅಯ್ಯಾ? ಸಾಕ್ಷಿ॥ ಶಿವಜಾತಕುಲೆ ಧರ್ಮಂ। ಪುನರ್ಜನ್ಮ ವಿವರ್ಜಿತಂ। ಉಮಾ ಮಾತಾ ಪಿತಾ ರುದ್ರಾ। ಈಶ್ವರಂ ಕುಲ ಮೇವಚ॥ ಎಂದುದಾಗಿ, ಕೂಡಲ ಚೆನ್ನಸಂಗಯ್ಯ ನಿಮ್ಮ ಭಕ್ತರ ಮಹೇಶ್ವರರ ಕುಲಕ್ಕೆ ಪ್ರತಿಗಾಣೆನು.

೯೮. ತನ್ನ ಮನೆಯ ಹೊಗದ ಗುರುವನರಸುವಾತ ಶಿಷ್ಯನಲ್ಲ. ತಾ ಹೊಗದ ಮನೆಯಲುಪದೇಶವ ಮಾಡುವಾತ ಗುರುವಲ್ಲ. ಲಿಂಗವ ಮಾರಿಕೊಂಡುಂಬ ಗುರು ಶಿವದ್ರೋಹಿ. ಅಂಗವ ಮಾರಿಕೊಂಡುಂಬ ಶಿಷ್ಯ ಗುರುದ್ರೋಹಿ ಇವರಿಬ್ಬರನು ಭಕ್ತರೆಂಬುವರ ಕೂಡಲ ಚೆನ್ನ ಸಂಗಯ್ಯ ನಾಯಕ ನರಕದಲ್ಲಿಕ್ಕುವ.

೯೯. ಗುರುಶಿಷ್ಯ ಸಂಬಂಧವನೇನೆಂದುಪಮಿಸುವೆನಯ್ಯ? ಜ್ಯೋತಿಯಿಂದೊಗೆದ ಜ್ಯೋತಿಯಂತಿರಬೇಕು. ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು. ಇದು ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಮರೀಚಿಕಾ ಜಲದಂತಿರಬೇಕು.

## ಲಿಂಗ

೧೦೦. ಶ್ರೀಗುರು ಕೊಟ್ಟ ಲಿಂಗ ತನ್ನ ನಚ್ಚಿನ ಲಿಂಗ ಆಯತವಾಯಿತ್ತಯ್ಯ. ಪ್ರಾಣನ ನಚ್ಚಿನಿಂದ ಸ್ವಾಯತವಾಯಿತ್ತಯ್ಯ. ಉಭಯದ ನಚ್ಚಿನಿಂದ ಸಂಗವಾಯಿತ್ತು ಕೂಡಲ ಚೆನ್ನಸಂಗಾ ನಿಮ್ಮಲ್ಲಿ.

೧೦೧. ಸ್ಥೂಲ ತನು, ಸೂಕ್ಷ್ಮತನು, ಕಾರಣತನು. ಸ್ಥೂಲ ತನುವಿನ ಮೇಲೆ ಇಷ್ಟಲಿಂಗ ಪ್ರತಿಷ್ಠೆ. ಸೂಕ್ಷ್ಮ ತನುವಿನ ಮೇಲೆ ಪ್ರಾಣಲಿಂಗ ಪ್ರತಿಷ್ಠೆ. ಕಾರಣ ತನುವಿನ ಮೇಲೆ ಭಾವಲಿಂಗ ಪ್ರತಿಷ್ಠೆ. ಇಂತೀ ಸ್ಥೂಲ ಸೂಕ್ಷ್ಮ ಕಾರಣವೆಂಬ ಮಹವು. ಆ ಮಹದ ಹೃದಯದಲ್ಲಿ

ಕೊನೆದೋರುತಿರ್ಪ ಜ್ಯೋತಿಯು ನಮ್ಮ ಶರಣರ ಸರ್ವಾಂಗದಲ್ಲುಂಟು ನೋಡಯ್ಯ ಕೂಡಲ ಚೆನ್ನಸಂಗಮದೇವಾ.

೧೦೨. ಲಿಂಗವೆಂದು ಪೂಜಿಸಿದೊಡೆ ಅಂಗದೊಡನುಳಿಯಿತ್ತು. ಅಂಗದೊಡನುಳಿವ ಲಿಂಗವ ಹಿಂಗಿ ಪೂಜಿಸಬೇಕು. ಹಿಂಗದ ಪೂಜೆಯನರಿದೊಡೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯನೆನಿಸುವನು.

೧೦೩. ಪೂಜಿಸುವನ್ನಕ್ಕರ ಫಲದಾಯಕ ಕಂಡಯ್ಯಾ. ಸಹಜ ಸಂಬಂಧದರಿವು ಹುಟ್ಟದನ್ನಕ್ಕರ ಎರಡೆನಿಸುವುದು ಗಮನ ನಿರ್ಗಮನವಾಗಿ ಆಶೆ ಆಮಿಷವಳಿಯದನ್ನಕ್ಕರ ಲಿಂಗದ ಪೂಜೆ ಎಲ್ಲಿಹುದೋ ? ಘಟದೊಳಗೆ ದಿಟವಾಗಿರ್ದ ಪಂಚಭೂತದ ಹಂಗಳಿದಲ್ಲದೆ ನಮ್ಮ ಕೂಡಲ ಚೆನ್ನಸಂಗಯ್ಯನ ಮುಟ್ಟಬಾರದು.

೧೦೪. ಮಾತು ಕಲಿತು ಮಂಡೆಯ ಬೋಳಿಸಿಕೊಂಡಡೇನು, ವೇಷಲಾಂಛನ ಉದರಪೋಷಕನಲ್ಲದೆ ? ಶಿವಾನುಭಾವದ ಸುವಿಚಾರದ ಸುಯಿಧಾನದ ಹೊಲಬನರಿಯರು. ಅರುಹು ಆಚಾರ ಏಕವಾದುದೇ ಇಷ್ಟ. ಆಚಾರ ಹೀನವಾದುದರಿಂದೆ, ಅಷ್ಟವಿಧಾರ್ಚನೆ ಷೋಡಶೋಪಚಾರಾದಿ ಭಜನೆ ಪೂಜಾ ಕ್ರಿಯೆಗಳಿಗೆ ಸಲ್ಲದ ಕಾರಣ, ಅದು ಸೀಮೆಯ ಕಲ್ಲು. ಅನ್ಯರ ಬೋಧಿಸಿ ತಂದುದರವ ಹೊರೆದ ವೇಷಡಂಭಕ ಗುರು ಶಿಷ್ಯರ ಮೆಚ್ಚುವರೇ ಕೂಡಲ ಚೆನ್ನಸಂಗಮದೇವ.

೧೦೫. ನಮ್ಮ ಶರಣ ಅಂತರಂಗದ ಅಷ್ಟವಿಧಾರ್ಚನೆಯ ಮಾಡಿ ಸುಜ್ಞಾನದೃಷ್ಟಿಯಿಂ ನೋಡಲು, ಆಜ್ಯೋತಿರ್ಲಿಂಗ ಒಂದೆರಡಾಯಿತ್ತು. ಎರಡು ಮೂರಾಯಿತ್ತು. ಮೂರಾರಾಯಿತ್ತು. ಆರು ಒಂಬತ್ತಾಯಿತ್ತು. ಒಂಬತ್ತು ಹದಿನೆಂಟಾಯಿತ್ತು. ಹದಿನೆಂಟು ಮೂವತ್ತಾರಾಯಿತ್ತು. ಆ ಮೂವತ್ತಾರೇ ಇನ್ನೂರ ಹದಿನಾರಾಯಿತ್ತು. ಇನ್ನೂರ ಹದಿನಾರೇ ಸಾವಿರದ ಏಳುನೂರು ಇಪ್ಪತ್ತೆಂಟು ಆಯಿತ್ತು. ಆ ಲಿಂಗಂಗಳೇ ಶರಣನ ರೋಮದ ಕುಳಿಯಲ್ಲಿ ನಿಂದು ಸರ್ವಾಂಗ ಲಿಂಗವಾಯಿತ್ತು. ಆ

ಲಿಂಗ ಶರಣಂಗೆ ಚೈತನ್ಯವಾಯಿತ್ತು. ಆ ಶರಣನೇ ಲಿಂಗಕ್ಕೆ ಚೈತನ್ಯ ವಾಗಲು ಶರಣಸತಿ ಲಿಂಗಪತಿ ಎಂಬೆರಡು ಅಳಿದು ಒಬ್ಬ ಶರಣನೇ ಉಳಿಯಲು ಆ ಶರಣನ ಪಾದೋದಕವೇ ಲಿಂಗಕ್ಕೆ ಅಭಿಷೇಕವಾಯಿತ್ತು. ಆ ಶರಣನ ಪಾದಕ್ಕರ್ಪಿಸಿದ ಕುಸುಮವೇ ಪ್ರಸಾದ ಪುಷ್ಪವಾಯಿತ್ತು. ಆ ಶರಣನ ಪಾದಕ್ಕರ್ಪಿಸಿದ ಗಂಧಾಕ್ಷತೆಯೇ ತಾಂಬೂಲವೇ ಲಿಂಗ ಪ್ರಸಾದಗಳಾದವು. ಆ ಶರಣನ ಪಾದಸನ್ನಿಧಿಯಲ್ಲಿ ಪ್ರಕಾಶವಾಗಿ ಧೂಪ ದೀಪಂಗಳೇ ಲಿಂಗದ್ರವ್ಯಗಳಾಗಿ ಆ ಶರಣನ ಪಾದ ಪೂಜಾದ್ರವ್ಯವೇ ಲಿಂಗ ಪೂಜಾ ದ್ರವ್ಯವಾಗಿ ಆಚರಿಸುತ್ತಿರ್ದಲ್ಲಿ ಶರಣಸತಿ ಲಿಂಗಪತಿ ಎಂಬ ನ್ಯಾಯ ಹಿಂಪಾಯಿತ್ತು. ಲಿಂಗ ಹಿರಿದು ಅಂಗ ಕಿರಿದು ಎಂಬ ನ್ಯಾಯ ಇಲ್ಲದೇಹೋಯಿತ್ತು. ಅದೆಂತೆಂದಡೆ, ದೀಪದಿಂದ ದೀಪ ಹುಟ್ಟಿ ದಲ್ಲಿ ಆವ ಆವ ದೀಪ ಮೊದಲೆಂಬುದು ಕಾಣದಂತೆ, ಸರ್ಪ ಕಚ್ಚಿದ ಮನುಷ್ಯನ ಅಂಗ ವಿಷ ಒಂದು ಠಾವಿನಲ್ಲಿ ಇದೆ ಎಂದು ಕುರುಹಿಡಬಾರ ದಂತೆ ಲಿಂಗಪ್ರಾಣನಾದ ಶರಣನು ಶರಣ ಪ್ರಾಣವಾದ ಲಿಂಗಕ್ಕೆ ಭೇದ ವಿಲ್ಲ. ಹರಗುರು ವಾಕ್ಯದಲ್ಲಿ ಶರಣ ಲಿಂಗದಾಚರಣೆ ಇಂತಿಹುದು. ಈ ಶರಣ ಲಿಂಗ ದೂಷಣೆಯ ಮಾಡುವ ದ್ರೋಹಿಗಳಿಗೆ ನಾಯಕ ನರಕ ತಪ್ಪದು ತಪ್ಪದು ಕೂಡಲ ಚೆನ್ನಸಂಗಮದೇವಾ.

೧೦೬. ಅಂಗದ ಮೇಲೆ ಲಿಂಗಸಂಬಂಧಿಯಾದ ಬಳಿಕ, ಸರ್ವಾಂಗ ದಲ್ಲಿ ತೋರುವ ವಿಕಾರವಳಿದಿರಬೇಕು. ಆ ಅಂಗವ ಸೋಂಕಿದ ಲಿಂಗಕ್ಕೆ ತ್ರಿಕರಣ ಶುದ್ಧವಾದುದೇ ಸೆಜ್ಜೆ, ಶಿವದಾರ. ಈ ತ್ರಿವಿಧವ ಮುಟ್ಟಿ ಲಿಂಗಾರ್ಚನೆಯ ಮಾಡಬೇಕು. ಅಂಗ ಲಿಂಗ ಸಂಬಂಧಕ್ಕೆ ಇದೇ ಕ್ರಮ ವಯ್ಯಾ ಕೂಡಲ ಚೆನ್ನಸಂಗಮದೇವಾ.

೧೦೭. ಮಾಡುವ ಸದಾಚಾರಕ್ಕೆ ಮೊದಲನೆಯ ಲಿಂಗಪೂಜೆ ಗುರು ಪೂಜೆ. ಮಾಡುವ ಸದಾಚಾರಕ್ಕೆ ಎರಡನೆಯ ಲಿಂಗಪೂಜೆಯೇ ಲಿಂಗ ಪೂಜೆ. ಮಾಡುವ ಸದಾಚಾರಕ್ಕೆ ಮೂರನೆಯ ಪೂಜೆಯೇ ಜಂಗಮ ಪೂಜೆ. ಮಾಡುವ ಸದಾಚಾರಕ್ಕೆ ಮೂರು ಪೂಜೆ. ಈ ಪೂಜೆ ಅನಂತ

ಜನ್ಮ ದುರಿತಧ್ವಂಸ ನೋಡಾ ಕೂಡಲ ಚೆನ್ನಸಂಗಮದೇವ ಸಾಕ್ಷಿಯಾಗಿ.

೧೦೮. ಪ್ರಾಣವಾಯು ನೇತ್ರನಾಳ, ಅಪಾನವಾಯು ಜಿಹ್ವಾನಾಳ, ವ್ಯಾನವಾಯು ಅಧಮನಾಳ, ಉದಾನವಾಯು ಆ ಕಮಳನಾಳ, ಸಮಾನವಾಯು ಮುಖನಾಳ, ನಾಗವಾಯು ಶ್ರೋತ್ರನಾಳ, ಕೂರ್ಮವಾಯು ಕಂಠನಾಳ, ಕ್ರಕರವಾಯು ಚಂದ್ರನಾಳ, ದೇವದತ್ತ ವಾಯು ಸೂರ್ಯನಾಳ, ಧನಂಜಯವಾಯು ಬ್ರಹ್ಮನಾಳ, ಇಂತಿವು ದಶವಾಯುಗಳಿಹ ಸ್ಥಾನವು. ಪ್ರಾಣವಾಯು ಹರಿದಲ್ಲಿ ಲಿಂಗಪ್ರಾಣವಂ ಮರೆದು, ತನು ಮನ ಧನವೇ ಪ್ರಾಣವಾಗಿಹುದು. ಅಪಾನವಾಯು ಹರಿದಲ್ಲಿ ಲಿಂಗಬಯಕೆಯಂ ಬಿಟ್ಟು, ಷಡುರಸಾನ್ನದ ಮೇಲೆ ಬಯಕೆಯಾಗಿಹುದು. ವ್ಯಾನವಾಯು ಹರಿದಲ್ಲಿ ಲಿಂಗ ಧ್ಯಾನಮಂ ಮರೆದು ಉದ್ವೇಗಮನಿಯಾಗಿಹುದು. ಸಮಾನವಾಯು ಹರಿದಲ್ಲಿ ಲಿಂಗಜಂಗಮದ ತೀರ್ಥ ಪ್ರಸಾದಮಂ ಮರೆದು ಕಲ್ಲುಮರನಾಗಿಹನು. ನಾಗವಾಯು ಹರಿದಲ್ಲಿ ಸುಭಾಷಿತ ಗೋಷ್ಠಿಯಂ ಕೇಳಲೊಲ್ಲದೆ. ಕುಭಾಷೆ ಕುಶಬ್ದಂಗಳಂ ಕೇಳಬೇಕೆನುತಿಹನು ಕೂರ್ಮವಾಯು ಹರಿದಲ್ಲಿ ಜ್ಞಾನ ಸಂಭಾಷಣೆಯಂ ಬಿಟ್ಟು ಅಜ್ಞಾನ ಸಂಭಾಷಣೆಯಂ ಮಾಡಬೇಕೆನುತಿಹನು. ಕ್ರಕರ ವಾಯು ಹರಿದಲ್ಲಿ ಸುಗುಣವಂ ಬಿಟ್ಟು, ದುರ್ಗುಣದಿಂದ ಕೆಟ್ಟು ಗುರುಲಿಂಗ ಜಂಗಮಕ್ಕೆ ತ್ರಿವಿಧ ಪದಾರ್ಥವನೊಪ್ಪಿಸಿ ಸಂತೋಷದಿಂದ ಶಿವಧ್ಯಾನವ ಬೆರಿಸಲೊಲ್ಲದೆ, ಅನರ್ಥವ ಮಾಡಿ ಕೆಡಿಸಿ ಕಳೆದು, ಅದಾ ಎನ್ನೊಡವೆ ಹಾಳಾಗಿ ಹೋಯಿತ್ತೆಂದು ಮರುಗುತ್ತಿಹನು. ಇಂತೀ ದಶವಾಯುಗಳ ಭೇದವನರಿದು, ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಸಿರ್ಥರಿಪುದ್ರವೇ ಯೋಗಸಿದ್ಧಿ.

೧೦೯. ನಾಲ್ಕು ಗ್ರಾಮದ ಪಟ್ಟಣಕ್ಕೆ ಪಂಚೈವರ ಕಾವಲು ನೋಡಾ. ಅವರ ಸಂಚವಿಡಿದು ಲಿಂಗಾರ್ಚನೆಯ ಮಾಡಿದೊಡೆ ಅದು ಲೋಕದ ಬಳಿಕೆ ಕಂಡಯ್ಯಾ. ಪಂಚೈವರ ಪಂಚಸ್ಥಾನವನಳಿದು ಏಕಸ್ಥಾನವ

ಮಾಡಿದುದನರಿದು ನವನಾಳದ ಭೇದದಲಾ ಹರಿಯನರಿದೊಡೆ ಆತ ಲಿಂಗೈಕ್ಯ ನೋಡಾ. ಆ ನವನಾಳದ ಮಧ್ಯದಲ್ಲಿರ್ಪ ಜೀವ ಪರಮರ ನೆಲೆಯನರಿದೊಡೆ ನಮ್ಮ ಕೂಡಲ ಚೆನ್ನಸಂಗಯ್ಯನೊಬ್ಬಾತನೇ ಸಾಹಿತ್ಯವಾಗಿಹನು.

೧೧೦. ಮಾಣಿಕ್ಯ ಮಂಟಪದೊಳಗೆ ಒಳಗೇಳು ಚಿತ್ರಕರೊಡನೆ ಮೇಳವಿಸಿದನು ಮಹಾ ಮಂತ್ರಂಗಳ. ಆ ಮೂಲ ಮಂತ್ರದ ಮೇಲೆ ಪ್ರಾಣಲಿಂಗದ ಬೆಳಗು, ಅಲ್ಲಲ್ಲಿ ವಜ್ರದ ಕೀಲು, ಆ ಮಹಾಕೂಟದ ಜಾಳೀಂದ್ರದೊಳಗೆ ಮಾಣಿಕ್ಯದ ಪ್ರತಿಬಿಂಬ, ಏಳು ರತ್ನದ ಪುತ್ಥಳಿಗಳು, ಮಣಿ ಮಾಲೆಯ ಹಾರಂಗಳು, ಹೊಳೆವ ಮುತ್ತಿನ ದಂಡೆ, ಅಳಿಯ ನೀಲದ ತೊಡಿಗೆಯ ತೊಟ್ಟು, ಸುಳಿವ ಮದ್ದಳೆಕಾರರು ಒಳಗೆ ದಂಡಣೆವೆನಲು, ಕುಣಿಕುಣಿದಾಡುವ ಪಾಡಿಗ, ಬಹು ರೂಪುಗ, ನಟುವಿಗ, ತಳೋದರಿಯ ಮೇಳಾಪ, ಕಹಳೆಗಾರರ ನಾದ, ಕೊಳಲ ರಭಸದೊಳು ಹಾಡುತ್ತ ಒಳಹೊರಗೆ ಕಾಣಬರುತ್ತಿದೆ ಚಿತ್ರದ ಬೊಂಬೆ. ಫಣಿಪತಿಯ ಕೋಣೆಯೊಳು ಸಂದಣಿಸುತ್ತಿರಲು ಗಣ ತಿಂಥಿಣಿಯ ಮೇಳವೆಲ್ಲವು ನಮ್ಮ ಕೂಡಲ ಚೆನ್ನಸಂಗಮದೇವರಲ್ಲಿಹ ಕಳಸ ಪ್ರಾಣಲಿಂಗದ ಬೆಳಗಿನೊಳಗೆ ಬೆಳಗಾಯಿತ್ತು.

೧೧೧. ಕಾಯಪುರವೆಂಬ ಪಟ್ಟಣದೊಳಗೆ, ಮನವೆಂಬರಸು, ತ್ರಿಕರಣವೆಂಬ ಪ್ರಧಾನಿ, ವಶೀಕರಣವೆಂಬ ಶಾನುಬೋಗ, ಆಸೆ ರೋಷವೆಂಬ ದ್ವಾರಪಾಲಕರು, ತ್ರಿಮಲವೆಂಬ ಕೋಟೆ, ಬಂಧಿಸುವ ಹಸಿವು ತೃಷೆ, ವಿಷಯಾದಿಗಳ ಬೊಬ್ಬೆಯಬ್ಬರ, ಪಂಚೇಂದ್ರಿಯಗಳೆಂಬ ಕಾಹುಲು ಕವಿವುತ್ತಿದೆ ಅರಿಷಡ್ವರ್ಗಾದಿಗಳ ಪೇರ್ಬಲದ ಗುಂಪಿನ ಆರ್ಭಟಿಸುವ ಸಂಚಲವೆಂಬ ತೇಜಿ, ಅಷ್ಟಮದವೆಂಬವೆಂಟಾನೆ, ಮೊದಲನಾಯಕರಿಪ್ಪತ್ತೈದು ಮಂದಿ, ಪ್ರಜೆ ಪಸಾಯತರು ನೂರನಾಲ್ವತ್ತೆಂಟು, ದೇಹವಿಕಾರದ ಸರಿಗಳ ಸಂದಣಿ, ಈರೈದು ಮೂವ್ವರ ಕಂಟಕವತ್ಯುಗ್ರ, ಮುಂದುವರಿದ ಕಹಳೆಯ ಮೋಹರದ ಸಂಭ್ರಮ, ದುರ್ಮದವೆಂಬ ರಾಜೇಂ

ದ್ರನು ಸಿತ್ಯತ್ವದಿಂದ ರಾಜ್ಯಂಗೈಯ್ಯುತ್ತಿರಲು, ಶೂನ್ಯವೆಂಬ ಪಟ್ಟಣದೊಳಗೆ ಅನಾಮಯನೆಂಬ ಶರಣಸರಸು ಸ್ವತಂತ್ರ ಲೀಲೆಯಿಂದೆಚ್ಚತ್ತು ನೋಡಿ, ಗಹಗಹಿಸಿ ನಗುತ್ತಿಹನು. ಮಹದಹಂಕಾರದ ವಡ್ಡವಣೆಯು ನೋಡಿ ಹೂಂಕರಿಸಿ, ಸುಮನವೆಂಬ ತೇಜಿಯು ಬೇಗದಿಂದೇರಿ, ಘನತರವಾದ ಪಂಚಾಕ್ಷರಿಯು ಜೋಡಂ ತೊಟ್ಟು, ನಿಷ್ಠೆ ಎಂಬ ಅಡ್ಡಾಯುಧ ಮಂ ಕಿತ್ತು, ಜ್ಞಾನವೆಂಬ ಪಂಚೇಕ್ಷ್ಯವಿಸಿಂದೆಡ ಲನಂ ನೋಡಿ, ಸತ್ವ ರಜ ತಮವೆಂಬ ತ್ರಿಗುಣದ ಪ್ರಧಾನರಂ ಕೆಡೆನುಟ್ಟಿ, ದ್ವಾರಕವಾಟವಂ ಮುರಿದು, ಆಸೆ ರೋಷಾದಿಗಳ ಬೆದರಿಸಿ, ಮಲತ್ರಯದ ಕೋಟೆಯನುರುಹಿ, ಹಸಿವು ತೃಷೆ ವಿಷಯ ವ್ಯಸನಾದಿಗಳಂ ಸಂಹರಿಸಿ, ಪಂಚೇಂದ್ರಿಯದ ಜಿಹ್ವೆಯಂ ಕೊಯ್ದು, ಅರಿಷಡ್ವರ್ಗಮಂ ಜರಿದು, ಪ್ರಪಂಚವೆಂಬ ತೇಜಿಯಂ ಕೆಡಹಿ, ದೇಹದಲ್ಲಿರ್ದ ಅಷ್ಟಮದಂಗಳ ಹಿಟ್ಟುಗುಟ್ಟಿ, ಇಪ್ಪತ್ತೈವರ ದರ್ಪಮಂ ಕೆಡಿಸಿ, ಮುವ್ವರ ಕಾಲಾಟದ ಸಂಚಾರಕ್ಕೆ ತೆರಹುಗೊಡದೆ, ದುರ್ಜಯದ ಪಟುಭಟರ ಬಲಮಂ ಬಂಗೈಯ್ದು, ಶರಣ ವೊಕ್ಕರ್ಗೆ ಅಭಯ ಹಸ್ತಮಂ ಕೊಟ್ಟು, ಆ ಪುರಮಂ ಸಂತವಿಸಿ, ತನ್ನ ವಶಕ್ಕೆ ತಂದು, ವೀರಶೈವ ಸಮ್ಮತವಾಗಿ ನಿಂದು, ಸತ್ಕ್ರಿಯಾಸಂಪನ್ನನಾಗಿ, ಆ ಪುರಕ್ಕೆ ಅಧಿಪತಿಯಾಗಿ, ತಾನಲ್ಲದನ್ಯವಿಲ್ಲೆಂದು ಕಂಡು, ಆ ಪುರಕ್ಕೆ ಸುಚಿತ್ತ ಸುಬುದ್ಧಿ ಸುಮನ ಸುಜ್ಞಾನವೆಂಬರುವಿಂಗೆ ಪಟ್ಟಮಂ ಕಟ್ಟಿ, ಮಂತ್ರರಾಜನೆಂಬ ಹೆಸರಿಟ್ಟು, ಷಡ್ವಿಧ ಬ್ರಹ್ಮಾದ್ವೈತದಲ್ಲಿ ಪರವಶನಾಗಿ, ಬಾಹ್ಯೋಪಚಾರಂಗಳಿಂಗಿ, ತನ್ನ ತಾ ಬೇರ್ಪಡಿಸಿ ನಿಂದು, ಅಖಂಡವಾಗಿ ಸುಮಹತ್ವದಿಂದೆ ತನ್ನ ಕರ ಸರೋಜಪೀಠಾಗ್ರದೋಳ್ಮೆರೆವ ಇಷ್ಟಬ್ರಹ್ಮದಲ್ಲಿ ತೃಪ್ತನಾಗಿ ಬಾಹ್ಯವೆನ್ನದೆ ಬಾಹ್ಯಾಭ್ಯಂತರವೆನ್ನದೆ ರಾಜಯೋಗಿಯಾಗಿ ತನ್ನ ಪಶ್ಚಿಮ ತತ್ತ್ವವಂ ತಾನೇ ನೋಡಿ ತಿಳಿದು, ನಿಸ್ಪೃಹಾತ್ಮನಾಗಿ, ಇನ್ನು ಅನ್ಯವಿಲ್ಲವೆಂದರಿದು, ಅದ್ವೈತ ಭಾವದಿಂದೇ ಪೀರನಾಗಿ, ಮೇರುಗಿರಿಯ ಮೇಲೆ ತೊಳಗಿ ಬೆಳಗುವ ಶಿಖಾಚಕ್ರದಿಂದ ಮೇಲಣ ಮಮಪೀಠದಲ್ಲಿರುವ ಪ್ರಣವದ ಪ್ರಭೆಯ ಜ್ಯೋತಿರ್ಮಯ ಲಿಂಗದಲ್ಲಿ ತಾನೆನ್ನದೆ ಇದಿರೆನ್ನದೆ

ಅಲ್ಲಿ ಸ್ವೈರಗಾದ ನಿಜಶರಣನಲ್ಲಿಯೇ ಸನ್ನಿಹಿತ ನಮ್ಮ ಕೂಡಲ ಚೆನ್ನ ಸಂಗಮದೇವಾ.

೧೧೨. ಪೃಥ್ವಿಸಲಿಲ ಪಾವಕ ಪವನ ಅಂಬರ ರವಿ ಶಶಿ ಆತ್ಮನೆಂಬಷ್ಟತನುವ ಛೇದಿಸಿ, ಶ್ರೋತ್ರ ನೇತ್ರ ಘ್ರಾಣ, ಜಿಹ್ವೆ, ತ್ವಕ್ಕುಗಳೆಂಬ ಪಂಚೇಂದ್ರಿಯವನರಿದು, ವಾಕ್ಕು, ಪಾಣಿ, ಪಾದ. ಪಾಯು, ಗುಹ್ಯವೆಂಬ ಕರ್ಮೇಂದ್ರಿಯಂಗಳ ತೊರೆದು,ಪ್ರಾಣಾಪಾನ,ವ್ಯಾನ. ಉದಾನ ಸಮಾನ, ನಾಗ, ಕೂರ್ಮ, ಕ್ರಕರ, ದೇವದತ್ತ, ಧನಂಜಯವೆಂಬ ದಶ ವಾಯುಗಳ ಸಂಚವ ಮುರಿದು, ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಃಕರಣಂಗಳನೊಂದುಮಾಡಿ, ಜ್ಞಾನವನೆ ಬೆಳಸಿ, ಧ್ಯಾನವ ನೆಲೆಗೊಳಿಸಿ ಚಿತ್ತಸುಯಿಧಾನವಾಗಿ ನಿಜಸಂಧಾನದ ಸಮಾಧಿಯಲ್ಲಿ ನಿಂದು ಲಿಂಗಾರ್ಚನೆಯಂ ಮಾಡುವ ಶಿವಶರಣರ ಪಾದವ ತೋರಯ್ಯಾ. ಸಾಕ್ಷಿ॥'ವ್ಯಾಪಾರಂ ಸಕಲಂ ತ್ಯಕ್ತ್ವಾ ಸ ರುದ್ರೋ ರುದ್ರಮರ್ಚಯೇತ್' ಎಂಬ ಶೃತಿ ನಿಮ್ಮ ಶರಣರಿಗೆ ಸಂದಿತ್ತು ಕೂಡಲ ಚೆನ್ನಸಂಗಮದೇವಾ.

## ಜಂಗಮ

೧೧೩. ಲಿಂಗ ಗಂಭೀರನಾದ ಶರಣ ಅಂಗ ವಿಕಾರವನರಿಯನಯ್ಯ. ಲಿಂಗ ಗಂಭೀರನಾಗಿ ಮನ್ಮನದಲ್ಲಿ ಲೀಯ್ಯವಾಯಿತ್ತು. ಜಂಗಮ ಸಮ್ಮತವಾಗಿ ಅವಧಾನವನರಿಯನಯ್ಯಾ ಕೂಡಲ ಚೆನ್ನಸಂಗಯ್ಯನಲ್ಲಿ ಐಕ್ಯವಾದ ಮಹಾ ಶರಣ.

೧೧೪. ಭವವಿಲ್ಲದ ಭಕ್ತನ ಪರಿಯ ನೋಡಾ. ಮನ ಪ್ರಾಣ ಮುಕ್ತಿ ಭಾವರಹಿತ ಒಡಲಿಲ್ಲದ ಜಂಗಮದ ಪರಿಯ ನೋಡಾ. ಸಿಡಿಲ ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೆ ? ಈ ಉಭಯ ಒಂದಾದವರ ಕಂಡರೆ ನೀನೆಂಬೆ ಕೂಡಲ ಚೆನ್ನಸಂಗಯ್ಯ.

೧೧೫. ಗುರುಸ್ಥಲ ಘನವೆಂಬೆನೆ? ಗುರುವಿಂಗೆ ಲಿಂಗವುಂಟು. ಲಿಂಗಸ್ಥಲ ಘನವೆಂಬೆನೆ ? ಲಿಂಗಕ್ಕೆ ಜಂಗಮವುಂಟು. ಆ ಜಂಗಮವು ಎಲ್ಲಿ

ಇದ್ದಡೆ ಅಲ್ಲಿ ಗುರುಲಿಂಗ ಜಂಗಮ ಪಾದೋದಕ ಪ್ರಸಾದ ಭಕ್ತಿ ಅನುಭಾವ ಸನ್ನಿಹಿತವಾಗಿಹುದು ಕಾಣಾ ಕೂಡಲ ಚೆನ್ನಸಂಗಮದೇವಾ.

೧೧೬. ಭೂತಪ್ರಾಣಿಯ ಕಳೆದು, ಲಿಂಗಪ್ರಾಣಿಯ ಮಾಡಿದ ಬಳಿಕ ಶಿಷ್ಯನೇ ಜಂಗಮವಾಗಿ ಗುರುವಿನ ಮಠಕ್ಕೆ ನಡೆದು ಬಂದರೆ, ಗುರುವೆಂಬ ಹಮ್ಮಿಲ್ಲದೆ, ಪರಮಗುರುವೆಂದು ಪಾದಾರ್ಚನೆಯಂ ಮಾಡುವುದು ಆಚಾರ. ನಾಚಿ ಮಾಡದಿರ್ದಡೆ ನಾಯಕನರಕ. ಆ ಜಂಗಮ ಶಂಕೆಯಿಲ್ಲದೆ ಪಾದಾರ್ಚನೆಯ ಮಾಡಿಸಿಕೊಂಬುವುದು ಕರ್ತವ್ಯ. ಶಂಕೆಗೊಂಡರೆ ಪಂಚಮಹಾಪಾತಕ. ಹೀಗಲ್ಲದೆ ಗುರುವೆಂಬ ಹಮ್ಮು ಶಿಷ್ಯನೆಂಬ ಶಂಕೆಯುಳ್ಳನ್ನಕ್ಕರ ರೌರವ ನರಕದಲ್ಲಿಕ್ಕುವ ಕೂಡಲ ಚೆನ್ನಸಂಗಮದೇವಯ್ಯ.

೧೧೭. ಮೊದಲಲ್ಲಿ ಮೊದಲಲ್ಲಿ ಅಚ್ಯೋತ್ಪತ್ತಿದ ಕಾರಣ ಎಚ್ಚರಿಕೆಯಾಯಿತ್ತು. ಗುರುಕರುಣದಿಂದ ಅರಿವಾಯಿತ್ತು, ಆಚಾರವಾಯಿತ್ತು. ಜಂಗಮದಿಂದ ತಿಳಿದ ತಿಳಿವಿನಲ್ಲಿ ಶಿವಪ್ರಸಾದ ಸಾಧ್ಯವಾಯಿತ್ತು. ಕೂಡಲ ಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು.

೧೧೮. ಲಿಂಗದಲುದಯ, ಜಂಗಮದಲನುಭಾವ. ಮತ್ತೊಂದ ಮತ್ತೊಂದನರಿಯನಯ್ಯ ಶರಣನು, ಕೂಡಲ ಚೆನ್ನಸಂಗಯ್ಯನಲ್ಲಿ ದ್ವಿವಿಧಸಂಪನ್ನನಾಗಿ

೧೧೯. ಆಚಾರವಿಡಿದು ಲಿಂಗ. ಅನುಭಾವವಿಡಿದು ಜಂಗಮ. ತನುವಿನ ಪ್ರಾಣ ಆಚಾರ. ಮನದ ಪ್ರಾಣ ಅನುಭಾವ. ಇದು ಕಾರಣ ಕೂಡಲ ಚೆನ್ನಸಂಗಮದೇವಾ ಲಿಂಗವನು ಜಂಗಮವನು ಬೇರರಸಲಿಲ್ಲ.

೧೨೦. ಶ್ರೀ ಗುರು ಕರುಣವೇ ಲಿಂಗ. ಶ್ರೀ ಲಿಂಗದ ನಿಜವೇ ಜಂಗಮ. ಇಂತು ಇದು ಬಹಿರಂಗದ ವರ್ತನೆ. ಇನ್ನು ಅಂತರಂಗದ ಸುಜ್ಞಾನವೇ ಜಂಗಮ. ಆ ಜಂಗಮದ ನಡೆವ ಸತ್ಕ್ರಿಯೆಯೇ ಲಿಂಗ.

ಆ ಉಭಯದ ಏಕತ್ವ ಸಿದ್ಧಿಯೇ ಗುರು. ಇದುಕಾರಣ ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾದಲ್ಲಿ ಜಂಗಮ ದಾಸೋಹವಿಲ್ಲದಡೆ, ಲಿಂಗ ತೃಪ್ತಿಯಿಲ್ಲ. ಅಂಗದ ಮೇಲೆ ಲಿಂಗವಿಲ್ಲದಿರ್ದೊಡೆ, ಜಂಗಮ ಸೇವೆಯ ಕೈಕೊಳ್ಳ. ಇದು ಕಾರಣ ಒಂದು ಬಿಟ್ಟು ಒಂದರಲ್ಲಿ ನಿಂದಡೆ ಅಂಗ ವಿಲ್ಲದ ಆತ್ಮನಂತೆ, ಶಕ್ತಿ ಇಲ್ಲದ ಶಿವನಂತೆ, ದೀಪವಿಲ್ಲದ ಪ್ರಕಾಶದಂತೆ. ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವ ಹೀನನು ರಾಯ ಪಟ್ಟಕ್ಕೆ ಸಲುವನೆ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲ ಚೆನ್ನ ಸಂಗಯ್ಯನಲ್ಲಿ ತ್ರಿವಿಧ ಸನ್ಮತವೇ ಚರಸೇವೆಯಯ್ಯ. ಮತ್ತಂ, ಜಂಗ ಮವೇ ಪರವೆಂದರಿವಡೇನು? ಆ ಜಂಗಮನಂಗವಲ್ಲನೇ ಲಿಂಗ? ಆ ಲಿಂಗದ ಚೈತನ್ಯದರಿವೆಲ್ಲವೂ ಜಂಗಮವಲ್ಲವೆ? ಅಂಗವಿಲ್ಲದ ಜೀವ ಆತ್ಮವಿಲ್ಲದಂಗಕ್ಕೆ ಪರಸ್ಯೆಯೋಗದ ಸುಖ ಉಂಟೆ? ಮಣ್ಣಿಲ್ಲದ ಮರ ನುಂಟೆ? ಮರವಿಲ್ಲದ ಹಣ್ಣುಂಟೆ? ಹಣ್ಣಿಲ್ಲದ ಸ್ವಾದ ಉಂಟೆ? ಹೀಗಿ ರುವುದಕ್ಕೆ ಕ್ರಮ, ಅಂಗವೇ ಮಣ್ಣು, ಲಿಂಗವೇ ಮರನು. ಫಲವೇ ಜಂಗಮು. ರುಚಿಯೇ ಪ್ರಸಾದ. ಇದು ಕಾರಣ ಕೂಡಲ ಚೆನ್ನಸಂಗಯ್ಯ ನಲ್ಲಿ ಸಾಕಾರಲಿಂಗವೇ ಜಂಗಮದಂಗವಯ್ಯ ಪ್ರಭುವೇ.

೧೨೭. ಶ್ರೀ ಗುರುವಿನ ಹಸ್ತದಲ್ಲಿ ಉಪದೇಶವಡೆದು ಭಕ್ತರಾದುದು ಮೊದಲಾಗಿ ನಿಮ್ಮ ಲಿಂಗವಾರೋಗಣೆ ಮಾಡದ ದಿನ ಉಂಟೆ? ಉಂ ಟಾದರೆ ತೋರಿ. ಇಲ್ಲದಿದ್ದರೆ ನೀವು ಕೇಳಿ. ನಾನು ನಮ್ಮ ಗುರುವಿನ ಹಸ್ತದಲ್ಲಿ ಉಪದೇಶ ಪಡೆದು ಭಕ್ತನಾದುದು ಮೊದಲಾಗಿ ನಮ್ಮ ಲಿಂ ಗವು ನಿರಂತರ ಆರೋಗಣೆಯ ಮಾಡಿ ಪ್ರಸಾದವ ಕರುಣಿಸುವದು. ಅದು ಕಾರಣ ನಮಗೆ ಲಿಂಗ ಉಂಟು. ನಿಮ್ಮ ಲಿಂಗಕ್ಕೆ ಕರಚರಣ ಅವ ಯವಂಗಳಿಲ್ಲವಾಗಿ ನಿಮ್ಮ ಲಿಂಗವು ಸಕಲ ಭೋಗಂಗಳ ಭೋಗಿಸಲರಿ ಯದಾಗಿ ನಿಮಗೆ ಪ್ರಸಾದವಿಲ್ಲ. ಪ್ರಸಾದವಿಲ್ಲವಾಗಿ ನಿಮಗೆ ಲಿಂಗವಿಲ್ಲ ವೆಂದೆನು. ಅದಕ್ಕೆ ನೀವು ಸಂಕಲ್ಪಗೊಳ್ಳದಿರಿ. ಆ ವಿವರವನು ನಾನು ನಿಮಗೆ ಚೆನ್ನಾಗಿ ಕಾಣಿಸಿ ತೋರಿ ಹೇಳುವೆನು. ಅದು ಹೇಗೆಂದಡೆ

ನಿಮ್ಮ ಶ್ರೀಗುರು ನಿಮಗೆ ಪ್ರಾಣಲಿಂಗ ಸಂಬಂಧವ ಮಾಡುವಲ್ಲಿ ಆ ಲಿಂಗವೇ ಜಂಗಮದಂಗವು. ಆ ಜಂಗಮವೇ ಲಿಂಗದ ಪ್ರಾಣಚೈತನ್ಯ ಕಳೆಯ ಮಾಡಿ ನಿಮ್ಮ ಶ್ರೀಗುರು ಕರಸ್ಥಲದಲ್ಲಿ ಆ ಲಿಂಗವ ಕೊಟ್ಟ ಕಾರಣ ಇಂತಹ ಜಂಗಮ ಮುಖದಲ್ಲಿ ತೃಪ್ತನಹನಲ್ಲದೆ ಲಿಂಗದ ಮುಖ ದಲ್ಲಿ ನಾನು ತೃಪ್ತನಹನೆಂದು ಹೇಳಿಕೊಟ್ಟನೆ? ಶ್ರೀ ಗುರು ಲಿಂಗವನು ಹಾಗೆ ಕೊಟ್ಟುದಿಲ್ಲವಾಗಿ. ಅದೆಂತೆಂದಡೆ, ಶಿವರಹಸ್ಯದಲ್ಲಿ ಶಿವನ ವಾಕ್ಯ ಶ್ಲೋ॥ ಸ್ಥಾವರಾರ್ಪಿತ ನೈವೇದ್ಯಂ ನ ಚ ತೃಪ್ತಿರ್ಮಹೇಶ್ವರೀ। ಜಂಗ ಮಾರ್ಪಿತ ನೈವೇದ್ಯಾದಹಂ ತೃಪ್ತೋ ವರಾನನೇ॥ ಅದಕ್ಕೆ ಉಪ ದೃಷ್ಟ ವಾಕ್ಯ. ವೃಕ್ಷದ ಕೊನೆ ಕೊನೆಗಳಿಗೆ ಉದಕವ ನೀಡಿದರೆ, ವೃಕ್ಷ ಪಲ್ಲಯಿಸುವುದೇ, ಬೇರಿಂಗೆ ನೀಡಬೇಕಲ್ಲದೆ? ಅದೆಂತೆಂದಡೆ, "ವೃಕ್ಷಸ್ಯ ವದನಂ ಭೂಮಿಃ ಸ್ಥಾವರಸ್ಯತು ಜಂಗಮಃ" ಅಂತು ವೃಕ್ಷದ ಕೊನೆಯ ಸ್ಥಾನವೇ ಲಿಂಗವು. ಆ ವೃಕ್ಷದ ಬೇರಿನ ಸ್ಥಾನವೇ ಜಂಗಮವು. ಅದಕ್ಕೆ ಮತ್ತೆಯೂ ದೃಷ್ಟ. ಗರ್ಭಿಣಿ ಸ್ತ್ರೀಗೆ ಉಣಲಿಕ್ಕಿದಡೆ ಆ ಗರ್ಭದೊಳಗಣ ಶಿಶು ತೃಪ್ತಿಯಹುದಲ್ಲದೆ ಆ ಸ್ತ್ರೀಯ ಗರ್ಭದ ಮೇಲೆ ಸಕಲ ಪದಾರ್ಥಂ ಗಳನಿಕ್ಕಿದಡೆ, ಆ ಗರ್ಭದೊಳಗಣ ಶಿಶು ತೃಪ್ತಿಯಾಗಬಲ್ಲುದೆ? ಅದು ಕಾರಣ ಆ ಗರ್ಭದ ಸ್ತ್ರೀಯ ಸ್ಥಾನವೇ ಜಂಗಮವು. ಆ ಗರ್ಭದೊಳ ಗಣ ಶಿಶುವಿನ ಸ್ಥಾನವೇ ಲಿಂಗವು. ಅದಕ್ಕೆ ಮತ್ತೆಯೂ ದೃಷ್ಟ. ಪೃಥ್ವಿಗೆ ಚೈತನ್ಯವಾದಡೆ ಸಸಿಗಳು ಬೆಳೆವವಲ್ಲದೆ, ಆ ಸಸಿಗಳ ಕೊನೆಯ ಮೇಲೆ ಮಳೆ ಸುರಿದರೆ ಆ ಸಸಿಗಳು ಬೆಳೆಯಬಲ್ಲವೆ? ಬೆಳೆಯಲರಿಯವಾಗಿ. ಅಂತು ಆ ಪೃಥ್ವೀ ಸ್ಥಾನವೇ ಜಂಗಮ. ಆ ಸಸಿಯ ಕೊನೆಯ ಸ್ಥಾನ ವೇ ಲಿಂಗವು. ಅದಕ್ಕೆ ಮತ್ತೆಯೂ ದೃಷ್ಟ. ದೇಹದ ಮೇಲೆ ಸಕಲ ರ್ಥವ ತಂದಿರಿಸಿದಡೆ, ಆತ್ಮನು ತೃಪ್ತಿಯಾಗಬಲ್ಲುದೇ, ಜಿಹ್ವೆಯ ಮುಖ ದಲ್ಲಿ ತೃಪ್ತಿಯಹುದಲ್ಲದೆ? ಅಂತು ದೇಹಸ್ಥಾನವೇ ಲಿಂಗವು. ಜಿಹ್ವೆಯ ಸ್ಥಾನವೇ ಜಂಗಮವು. ಇಂತೀ ನಾನಾ ದೃಷ್ಟಂಗಳಲ್ಲಿ ತೋರಿ ಹೇಳಿದ ತೆರನಲ್ಲಿ ನಿಮ್ಮ ಲಿಂಗವು ನಮ್ಮ ಜಂಗಮದ ಸರ್ವಾಂಗದೊಳಗೆ ಹೊಂದಿಹ ಕಾಣಾ ಕೂಡಲ ಚೆನ್ನಸಂಗಮದೇವಾ.

೧೨೨. ಶ್ರೀಗುರು ಸಾಹಿತ್ಯವ ಸಂಬಂಧವ ಮಾಡುವಲ್ಲಿ, ಈ ಲಿಂಗವೇ ಜಂಗಮ. ಆ ಜಂಗಮವೇ ಈ ಲಿಂಗವೆಂದು ಹೇಳಿಕೊಟ್ಟಂತಹ ವಿವರವನರಿಯದೆ ಮರೆದು, ಈ ಲಿಂಗದೊಳಗೆ ಜಂಗಮ ಉಂಟೆಂದು ಬೊಗುಳುತಿರ್ಪ ಮೂಕೊರೆಯರು ನೀವು ಕೇಳಿರೋ. ರಾಶಿಗಿಕ್ಕಿದ ಲಚ್ಚಣ ರಾಶಿಯ ಕೊಳಬಲ್ಲುದೇನೋ ಮೂಢ, ರಾಶಿಯ ಒಡೆಯ ನಲ್ಲದೆ ? ಆ ಪರಿಯಲ್ಲಿ ಈ ಲಿಂಗವು ಜಂಗಮದ ಮುದ್ರೆ ಎಂದು ತಿಳಿ. ಅವಕ್ಕೆ ಜಂಗಮವೇ ಮುದ್ರೆಗೆ ಪತಿಯಾದ ಕಾರಣ,ಆ ಜಂಗಮದೊಳಗೆ ಆ ಲಿಂಗವುಂಟೆಂಬುದು ಸತ್ಯವಲ್ಲದೆ, ಈ ಲಿಂಗದೊಳಗೆ ಜಂಗಮವು ಉಂಟೆಂಬುದು ಸತ್ಯವಲ್ಲ. ವೃಕ್ಷನ ಕೊನೆಗಳಿಗೆ ಉದಕವ ನೀಡಿದರೆ ಫಲವಹುದೆ. ಬೇರಿಂಗೆ ನೀರು ಬೇಕಲ್ಲದೆ ? ಸಾಕ್ಷಿ॥ 'ವೃಕ್ಷಸ್ಯವದನಂ ಭೂಮಿಃ । ಸ್ಥಾವರಸ್ಯ ಚ ಜಂಗಮಃ । ಸ್ಥಾವರಂ ವೃಕ್ಷ ಶಾಖೇ ಚ ವೃಕ್ಷಮೂಲಂತು ಜಂಗಮಃ'' ಇದು ಕಾರಣವಾಗಿ, ವೃಕ್ಷದ ಆಧಾರವೇ ಪೃಥ್ವಿ ಆ ಪೃಥ್ವಿಯೇ ಜಂಗಮವು, ಶಾಖೆಯೇ ಲಿಂಗವು. ದೇಹದ ಮೇಲೆ ಸಕಲ ಪದಾರ್ಥವ ತಂದಿರಿಸಿದೊಡೆ ತೃಪ್ತಿಯಾಗುವುದೆ ಮುಖದಿಂದೊಳಿಯಕ್ಕೆ ನೀಡಬೇಕಲ್ಲದೆ ? ಅದು ಕಾರಣವಾಗಿ, ಅವಯವಗಳುಳ್ಳ ಕಾಣಲ್ಪಟ್ಟ ಮುಖವನುಳ್ಳುದೇ ಜಂಗಮವು. ದೇಹವೇ ಲಿಂಗವು. ಲಿಂಗವೆಂಬುವುದು ಜಂಗಮದೊಂದಂಗವಯ್ಯಾ ಕೂಡಲ ಚೆನ್ನಸಂಗಮದೇವಾ.

೧೨೩. ಭಕ್ತನ ಹಸ್ತ ಮುಟ್ಟಿ ಪಾವನವಾದೆವೆಂಬರು. ಎಂಬನ್ನಕರ ತಾವೇನು ಭವಿಗಳೆ ? ಅವನ ಲಿಂಗ ದೇಹಿ ಎಂತೆಂಬೆ ? ಲಿಂಗಾಚಾರಿ ಎಂತೆಂಬೆ ? ಆತ ಪವಿತ್ರ ಕಾಯನೆಂತೆಂಬೆ ? ಇದು ಕಾರಣ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗವೇ ಕ್ಷೇತ್ರವು, ಜಂಗಮವೇ ಬೀಜವೆಂದರಿಯರಾಗಿ.

೧೨೪. ಜಗಭರಿತ ಲಿಂಗವೆಲ್ಲೆಡೆಯಲುಂಟು. ಶರಣಭರಿತ ಲಿಂಗವಪೂರ್ವವಯ್ಯಾ. ಗಮನ ಜಂಗಮವೆಲ್ಲೆಡೆಯಲುಂಟು. ನಿರ್ಗಮನ

ಜಂಗಮುವಪೂರ್ವವಯ್ಯಾ. ಅಚೇತನ ಲಿಂಗಕ್ಕೆ ಚೈತನ್ಯ ಜಂಗಮು ಸಾಹಿತ್ಯ ನೋಡಾ. ಇಂತೀ ಲಿಂಗಾಂಗ ಸಂಗ ಸಮರಸವಾಹ ಸಕೀಲ ಸಂಬಂಧದಲ್ಲಿ ಪರಿಣಾಮಿಗಳಯ್ಯಾ ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣರು.

೧೨೫. ಲಿಂಗ ಮುಖವನರಿದವಂಗೆ ಅಂಗವೆಂಬುದಿಲ್ಲ. ಜಂಗಮುಮುಖ ವನರಿದವಂಗೆ ಸಂಸಾರವೆಂಬುದಿಲ್ಲ ಪ್ರಸಾದ ಮುಖವನರಿದವಂಗೆ ಇಹಪರವೆಂಬುದಿಲ್ಲ. ಈ ತ್ರಿವಿಧವ ಒಂದಾದವಂಗೆ ಮುಂದೇನು ಇಲ್ಲ ವಯ್ಯಾ. ಈ ತ್ರಿವಿಧದ ನೆಲೆಯು ಶ್ರುತಿ ಸ್ಮೃತಿ ಪುರಾಣಾಗಮ ಇತಿಹಾ ಸಂಗಳರಿಯುವಯ್ಯಾ. ಎಲೆ ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣರೇ ಬಲ್ಲರಯ್ಯಾ.

೧೨೬. ಕಾಯ ಗುರು, ಪ್ರಾಣಲಿಂಗ, ಜ್ಞಾನಜಂಗಮ. ಕಾಯದಲ್ಲಿ ಶುದ್ಧ ಪ್ರಸಾದ. ಪ್ರಾಣದಲ್ಲಿ ಸಿದ್ಧಪ್ರಸಾದ. ಜ್ಞಾನದಲಿ ಪ್ರಸಿದ್ಧ ಪ್ರಸಾದ ಇಂತೀ ತ್ರಿವಿಧ ಪ್ರಸಾದ ನಿರ್ಣಯ ಕೂಡಲ ಚೆನ್ನಸಂಗಾ ನಿಮ್ಮ ಶರ ಣಂಗೆ.

೧೨೭. ಗುರುವೆನ್ನ ತನುವ ಬೆರಸಿದ ಕಾರಣ ಗುರು ಶುದ್ಧವಾದೆ ನಯ್ಯ. ಲಿಂಗವೆನ್ನ ಮನವ ಬೆರಸಿದ ಕಾರಣ, ಲಿಂಗದ ಮನವ ನಾ ಬೆರಸಿದ ಕಾರಣ ಲಿಂಗ ಶುದ್ಧವಾದೆನಯ್ಯ. ಜಂಗಮುವೆನ್ನ ಜಿಹ್ವೆ ಬೆರ ಸಿದ ಕಾರಣ, ಜಂಗಮನ ಜಿಹ್ವೆಯ ನಾ ಬೆರಸಿದ ಕಾರಣ ಜಂಗಮ ಶುದ್ಧವಾದೆನಯ್ಯ. ಈ ಮೂವರು ತಮ್ಮಿಂದ ತಾವು ಶುದ್ಧವಾಗಲರಿ ಯದೆ, ಎನ್ನ ಮುಟ್ಟಿ ಶುದ್ಧವಾದರು ಕಾಣಾ ಕೂಡಲ ಚೆನ್ನಸಂಗಮ ದೇವಾ

೧೨೭. ಆಕಾಶವ ಮುಟ್ಟದು. ಎಡೆಯುಲ್ಲೊಂದು ರೂಪಿಲ್ಲ. ಭಾವ ವೆಂಬ ಜ್ಞಾನವೇ ನಿವಾಸ. ನಿಲವೇ ಭಕ್ತಿ. ನಿರಹಂಕಾರವೇ ಶಿಖರ. ಮಹತ್ತೇ ಶೃಂಗಾರ ಕಳಸ. ಸಹಸ್ರಪತ್ರದ ನವಕಮಲವೇ ಸಿಂಹಾಸನ.

ನಿತ್ಯವೇ ಮಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯ ನಿರಾಳವೆಂಬ ಮಹಾ ಘನವು ಬಂದು ಮೂರ್ತಿಗೊಳ್ಳಲು ಕಾಯದ ಕಣ್ಣು ಕಾಣಬಾರದು, ಮನದ ಮುಂದು ಅಳವಡದು ಭಾವದ ಬಗೆಗೆ ವೈದೋರದು. ಬಸವ ಪ್ರಿಯ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

## ಪಾದೋದಕ

೧೨೮. ನಿತ್ಯನೆಂಬ ಭಕ್ತನ ಮನೆಗೆ ಘನಚೈತನ್ಯವೆಂಬ ಜಂಗಮ ಬಂದಡೆ, ಜಲವಿಲ್ಲದ ಜಲದಲ್ಲಿ ಪಾದಾರ್ಚನೆಯ ಮಾಡಿದೆ. ಆ ಪಾದೋದಕವೇ ಮಹಾಪಥವಯ್ಯಾ. ಗ್ರಂ॥ ಸಚ್ಚಿದಾನಂದ ಜಲಂ ನಿತ್ಯಂ ಪ್ರಕ್ಷಾಲನಂ ಚರಪಾದಪಂಕಜಂ । ತತ್ಪಾದೋದಕಂ ಪೀತ್ವಾ ಸ ಮುಕ್ತೋನಾತ್ರ ಸಂಶಯಃ ॥ ಎಂದುದಾಗಿ ಆ ಪಾದೋದಕದಲ್ಲಿ ಪರಮ ಪರಿಣಾಮಿ ಕೂಡಲ ಚೆನ್ನಸಂಗಾ ನಿಮ್ಮ ಶರಣ.

೧೨೯. ಅಯ್ಯಾ, ಪಾದಪೂಜೆ ಎಂಬುದು ಅಗಮ್ಯ, ಅಗೋಚರ, ಅಪ್ರಮಾಣ, ಮಹಾ ಅಸಾಧ್ಯವು. ಶ್ರೀಗುರು ಬಸವೇಶ್ವರ ದೇವರು ತಮ್ಮ ಅಂತರಂಗದೊಳಗಣ ಪಾದಪೂಜೆಯಿಂದಾದ ತೀರ್ಥ ಪ್ರಸಾದ ಮಂ ಗಣಸಮೂಹಕ್ಕೆ ಸಲ್ಲಲಿ ಎಂದು ನಿರ್ಮಿಸಿ ಭಕ್ತಿಯ ತೋಟ್ಟು ಮೆರೆದು ಇಂತಪ್ಪ ತೀರ್ಥ ಪ್ರಸಾದವ ಸೇವಿಸುವ ಕ್ರಮವೆಂತೆಂದೊಡೆ. 'ಗ್ರಾಸ ವೇಷಾಕರಂ ರಂಭಾ ಗೀತವಾದ್ಯ ನೃತ್ಯಸ್ತಥಾ ಅನಾಚಾರ ವಿಕಾರಂಚ ಪಾದತೀರ್ಥ ಪ್ರಸಾದಃ' ಇಂತೆಂದುದಾಗಿ ತಂಬೂರಿ ಕಿನ್ನರಿ ಹಿಡಿದು ಮನೆ ಮನೆಯ ಬೇಡುವಾತ, ಹಲವು ವೇಷವ ತೊಟ್ಟು ಆಡು ವಾತ, ನಗಾರಿ ಸಮ್ಮೇಳ ಕರ್ನೆ ಕಹಳೆ ಶಂಖ ಬಾರಿಸುವಾತ, ಅಷ್ಟಾ ವರಣ ಪಂಚಾಚಾರದಲ್ಲಿ ಅಹಂಕರಿಸುವಾತ, ಅನಾಚಾರಿ, ಪರ್ವತದ ಕಂಬಿ ಮಹಾಧ್ವಜವ ಹೊರುವಾತ, ರಾಜಾರ್ಥದಲ್ಲಿ ಅಹುದು ಅಲ್ಲವ

ಮಾಡಿ, ಅಲ್ಲದ ಅಹುದ ಮಾಡುವಾತ, ಅನಾಚಾರವ ಹೇಳುವಾತ, ಸದಾಚಾರದ ನುಡಿಗೆ ಇದಿರುತ್ತರವ ಕೊಟ್ಟು ಭಕ್ತ ಗಣಂಗಳ ನಿಂದೆಯ ಮಾಡುವಾತ, ಸದಾಚಾರ ಸದ್ಭಕ್ತ ಗಣಂಗಳ ಕಂಡರೆ ಗರ್ವಿಸುವಾತ, ಧಾನ್ಯ, ಅರಿವೆ, ಬೆಳ್ಳಿ, ಬಂಗಾರಂಗಳ ಕ್ರಯವಿಕ್ರಯ ಮಾಡಿ, ಪ್ರತಿಯಾಗಿ ಮಾರಿ ವ್ಯವಹಾರವ ಮಾಡುವಾತ, ಗುರುಹಿರಿಯರಲ್ಲಿ ಹಾಸ್ಯ ರಹಸ್ಯವ ಮಾಡುವಾತ, ಪರದೈವ, ಪರಧನ, ಪರಸ್ತ್ರೀ ಗಮಿಸುವಾತ, ಸೂಳೆ ಬಸವಿಯರ ಗೃಹದಲ್ಲಿರುವಾತ, ಆಚಾರ ಭ್ರಷ್ಟ ಮಾನಹೀನರ ಸಂಗವ ಮಾಡುವಾತ, ಇಂಥ ದುರುಳು ಮಂಕುಗಳ ಗುರುಲಿಂಗ ಜಂಗಮವೆಂದು ನುಡಿಯಲಾಗದು. ಅದೆಂತೆಂದಡೆ, 'ಖೇಟಕೋ ದಂಡ ಚಕ್ರಾಸಿ ಗದಾ ತೋಮರ ಧಾರಣಂ । ಜಂಗಮೋ ನಾನ್ಯ ಕರ್ತವ್ಯಂ ಸ್ವಯಂಲಕ್ಷಣಂ ॥ ಆಶಾಶ್ಚ ವೇಷಧಾರೀ ಚ ವೇಷಶ್ಚ ಗ್ರಾಸತೋಷಕಃ । ಗ್ರಾಸಶ್ಚ ದೋಷಮಾದಾಯ ಇತಿ ಭೇದ ವರಾನನೇ ॥ ಅನಾಚಾರ ವಿಭಾವೇನ ಆಚಾರಶ್ಚ ವಿಸರ್ಜಯೇತ್ । ಸದಾಚಾರ ಭಕ್ತಾನಾಂಚ ಪಾದತೀರ್ಥ ಪ್ರಸಾದಂ॥ ಮಹಾಭೋಗೀ ಮಹಾತ್ಯಾಗೀ ಲೋಲುಪ್ತಂ ವಿಷಯಾತುರಂ । ನಾನಾ ಅಂಗ ವಿಕಾರಂಚ ಪಾದತೀರ್ಥಂ ನ ಕಾರಯೇತ್ ॥ ಸ್ಪೃಷ್ಟಶ್ಚಕರ್ಣ ಹೀನಸ್ಯಬಧಿರಂ ಕಲಹಪ್ರಿಯಾ । ವ್ಯಾಧೀ ನಾಂ ಅಂಗ ಹೀನಂಚ ತಸ್ಯಾಚಾರ ವಿಸರ್ಜಯೇತ್॥' ಇಂತೀ ದುರ್ಮಾರ್ಗ ನಡತೆಗಳಿಲ್ಲದೆ ಅಯೋಗ್ಯವಾದ ಜಂಗಮವನುಳಿದು ಯೋಗ್ಯವಾದ ಜಂಗಮವ ವಿಚಾರಿಸಿ ತನು ಮನ ಧನ ವಂಚನೆ ಇಲ್ಲದೆ ಸಮರ್ಪಿಸಿ ಅವರ ತೀರ್ಥಪ್ರಸಾದವ ಕೊಳಬೇಕಲ್ಲದೆ ದುರ್ಮಾರ್ಗದಲ್ಲಿ ಆಚರಿಸುವಾತನಲ್ಲಿ ತ್ರಿನೇತ್ರವಿದ್ದರೂ ತೀರ್ಥಪ್ರಸಾದ ಉಪದೇಶವ ಕೊಳಲಾಗದು ಕಾಣಾ ಕೂಡಲ ಚೆನ್ನಸಂಗಮದೇವ ಸಾಕ್ಷಿಯಾಗಿ ನೋಡಾ ಸಂಗನ ಬಸವಣ್ಣಾ, ಇಂತು ಗುರುವಾಕ್ಯವ ತಿಳಿದು ನೋಡಾ ಸಂಗನಬಸವೇಶ್ವರಾ.

೧೩೦. ಕರುಣಜಲ, ವಿನಯಜಲ, ಸಮತೆಜಲ, ಕರುಣಜಲ ಗುರು ಪಾದೋದಕ. ವಿನಯಜಲ ಲಿಂಗಪಾದೋದಕ. ಸಮತೆಜಲ ಚರ

ಪಾದೋದಕ. ಗುರುಪಾದೋದಕ ಸಂಚಿತ ಕರ್ಮನಾಸ್ತಿ. ಲಿಂಗಪಾದೋದಕ ಪ್ರಾರಬ್ಧ ಕರ್ಮನಾಸ್ತಿ. ಚರಪಾದೋದಕ ಆಗಾಮಿ ಕರ್ಮನಾಸ್ತಿ. ಇಂತೀ ತ್ರಿವಿಧ ಪಾದೋದಕದಿಂದ ತ್ರಿವಿಧ ಕರ್ಮನಾಸ್ತಿ. ಇದು ಕಾರಣ ತ್ರಿವಿಧೋದಕವ ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ.

೧೩೧. ಇನ್ನು ಲಿಂಗೋದಕ, ಪಾದೋದಕ, ಪ್ರಸಾದೋದಕವೆಂದು ತ್ರಿವಿಧ. ಲಿಂಗೋದಕವೆಂದು ಶಿವಸಂಸ್ಕಾರದಿಂದಾದುದು. ಪಾದೋದಕವೆಂದು ಲಿಂಗಕ್ಕೆ ಮಜ್ಜನಕ್ಕೆರೆದುದು. ಪ್ರಸಾದೋದಕವೆಂದು ಲಿಂಗವಾರೋಗಿಸಿದ ಬಳಿಕ ಸಿತಾಳಂಗೊಟ್ಟುದು. ಲಿಂಗೋದಕದಲ್ಲಿ ಲಿಂಗಕ್ಕೆ ಪಾಕಪ್ರಯತ್ನ ಮಜ್ಜನಕ್ಕೆರೆವುದು. ಪಾದೋದಕದಲ್ಲಿ ಮುಖ ಪ್ರಕ್ಷಾಲನವ ಮಾಡುವುದು ಶಿರಸ್ಸಿನ ಮೇಲೆ ತಳಿದುಕೊಂಬುದು. ಪ್ರಸಾದೋದಕವನಾರೋಗಿಸುವುದು. ಇಂತೀ ತ್ರಿವಿಧೋದಕ, ದಾಸೋಹ ಷಟ್ಪ್ರಕಾರ ವರ್ತಿಸುವುದು. ಭಕ್ತ ನಿಂದೆಯ ಮಾಡಲಾಗದು. ಆಚಾರ ನಿಂದೆಯ ಮಾಡಲಾಗದು. ಹುಸಿ ಇಲ್ಲದಿದ್ದರೆ ಭಕ್ತನು. ಇಂತಿದು ಭಕ್ತಿಸ್ಥಲ ಕೂಡಲ ಚೆನ್ನಸಂಗಮದೇವಾ.

೧೩೨. ಲಿಂಗಾರೋಪಿತ ಮುಖದಿಂದ ಬಂದುದು ಪಾದೋದಕ. ಲಿಂಗಾವಧಾನಮುಖದಿಂದ ಬಂದುದು ಅವಧಾನೋದಕ. ಲಿಂಗಾರ್ಪಿತ ಮುಖದಿಂದ ಬಂದುದು ಪ್ರಸಾದೋದಕ. ಶ್ಲೋ॥ ಪಾದೋದಕಂ ತ್ರಿವಿಧಂ ಆರೋಪ್ಯಂ ಚಾವಧಾರಿತಂ ॥ ಲಿಂಗಾರ್ಪಿತಂ ಪ್ರಸಾದಂಚ ತಥಾ ಲಿಂಗೋಧಕಂ ಭವೇತ್ ॥ ಎಂದುದಾಗಿ ಇಂತು ಮಜ್ಜನ ಭೋಜನ ಆರೋಪಿತ ಮುಖದಿಂದ ತ್ರಿವಿಧೋದಕವನು ಕೂಡಲ ಚೆನ್ನಸಂಗಮದೇವಾ ನಿಮ್ಮ ಶರಣ ಬಲ್ಲ.

೧೩೩. ಪ್ರಥಮದಲ್ಲಿ ಸ್ಪರ್ಶನವೆಂಬ ಗುಣದಿಂದ ಬಂದುದು ಪಾದೋದಕ, ದ್ವಿತೀಯದಲ್ಲಿ ಅಂಗದ ಗುಣವಳಿಯಿತ್ತಾಗಿ ಲಿಂಗ ಮುಖದಿಂ ಬಂದುದು ಲಿಂಗೋದಕ, ತೃತೀಯದಲ್ಲಿ ಮಹಾಗಣಂಗಳ ಬರವಿನಿಂದ

ಬಂದುದಾಗಿ ಮಜ್ಜನೋದಕ, ಚತುರ್ಥದಲ್ಲಿ ಚತುರ್ದಳ ಪದ್ಮ ವಿಕಸಿತ ವಾಗಿ ಪುಷ್ಪೋದಕ, ಪಂಚಮದಲ್ಲಿ ಲಿಂಗಕ್ಕೆ ಪರಮ ಪರಿಣಾಮವನಿಕ್ಕಿ ದಲ್ಲಿ ಅವಧಾನೋದಕ, ಷಷ್ಠಮದಲ್ಲಿ ಲಿಂಗಾರೋಗಣೆಯವಸರದಲ್ಲಿ ಆಪ್ಯಾಯನೋದಕ, ಸಪ್ತಮದಲ್ಲಿ ಲಿಂಗಕ್ಕೆ ಹಸ್ತೋದಕ, ಅಷ್ಟಮದಲ್ಲಿ ಅಷ್ಟಾಂಗಯೋಗವಾದಲ್ಲಿ ಪರಮ ಪರಿಣಾಮೋದಕ, ನವಮದಲ್ಲಿ ನಾಮಸೀಮೆ ಇಲ್ಲವಾಗಿ ನಿರ್ನಾಮೋದಕ, ದಶಮದಲ್ಲಿ ಹೆಸರಿಲ್ಲವಾಗಿ ಸತ್ಯೋದಕ ನೋಡಾ. ಹೇಳಬಾರದ ಘನವ ಕೇಳಬಾರದಾಗಿ ಕೂಡಲ ಚೆನ್ನಸಂಗಯ್ಯನಲ್ಲಿ ಉಪಮಿಸಬಾರದಯ್ಯ ಮಹಾಘನವ.

ದೀಕ್ಷಾ ಪಾದೋದಕ, ಶಿಕ್ಷಾ ಪಾದೋದಕ, ಜ್ಞಾನ ಪಾದೋದಕವೆಂದು ಮೂರು ತೆರನುಂಟು ಅದೆಂತೆಂದಡೆ–

## ದೀಕ್ಷಾ ಪಾದೋದಕ

೧೩೪. ಅಡಿ ಪಾದದಿಂದೆ ಮೂರುವೇಳೆ ಸ್ಪರ್ಶನವ ಮಾಡಿಕೊಳ್ಳುವುದೇ ಧೂಳ ಪಾದೋದಕವು ಅದೇ ದೀಕ್ಷಾ ಪಾದೋದಕವೆನಿಸುವುದು. ಅದರಿಂದ ಜಳಕ ಮುಖ ಪ್ರಕ್ಷಾಲನ ಅಭಿಷೇಕವ ಮಾಡಿಕೊಂಬುವುದು. ಇದಕ್ಕೆ ಸಾಕ್ಷಿ. ಶಿವಾಗಮ ॥ವ॥ ಚೇಷ್ಟಾಪಟಂತು ಗಿರಿಜಾನಾಂ ಪಾನೀಯಾತ್ ಕದಾಚನ॥ ಸ್ನಾತವ್ಯಂ ಮೂರ್ಧ್ನಿ ದಂತವ್ಯ । ಪ್ರೋಕ್ಷಿತವ್ಯಂ ಚಾಂಗಾಯ ॥ ಎಂಬುದಾಗಿ, ಈ ರೀತಿಯಲ್ಲಿ ನಡೆಯಬಲ್ಲರೆ ಆತನೇ ಅಚ್ಚ ಶರಣನೆಂಬೆ ಕೂಡಲ ಚೆನ್ನಸಂಗಮದೇವಾ

೧೩೫. ಧೂಳ ಪಾದೋದಕವೆಂದರೂ, ಗುರು ಪಾದೋದಕವೆಂದರೂ, ದೀಕ್ಷಾ ಪಾದೋದಕವೆಂದರೂ ಮೂರೂ ಒಂದೇ ನಾಮವು. ಇದಕ್ಕೆ ವಿವರ :– ಭಾಜನದಲ್ಲಿ ಅಗ್ಗವಣಿಯ ತೆಗೆದುಕೊಂಡು ಬಂದು ಪಾದೋದಕವ ಮಾಡಿಕೊಂಬುವಂಥ ಭಕ್ತನು ತನ್ನ ಎಡದ ಹಸ್ತದಿಂದ ಆ ಜಂಗಮದ ಮೂರ್ತಿಯ ಪಾದವನ್ನು ಹಿಮ್ಮಡದಿಂದ ಮೇಲಕ್ಕೆ ಹಿಡಿ

ದುಕೊಂಡು ತನ್ನ ಬಲಹಸ್ತವನು ಅಗ್ಗವಣಿಯೊಳಗೆ ಮುಡಗಿ, ಆ ಜಂ
ಗಮಮೂರ್ತಿಯು ಹಿಮ್ಮಡದಿಂದ ತುದಿ ಅಂಗುಷ್ಠದ ಪರಿಯಂತರ ಸ್ಪರ್ಶ
ನವ ಮಾಡಿಕೊಂಬುವಂಥಾದ್ದೇ ಗುರುಪಾದೋದಕವೆನಿಸುವುದು. ಹೀಗೆ
ಮೂರುವೇಳೆ ಮಾಡಿದಲ್ಲಿಗೆ ಲಿಂಗಪಾದೋದಕ, ಜಂಗಮ ಪಾದೋದಕ
ವೆನಿಸುವುದು. ನಾಲ್ಕನೇ ವೇಳೆಯಲ್ಲಿ ಐದಂಗುಲಿಯ ಸ್ಪರ್ಶನವ ಮಾಡಿ
ದಲ್ಲಿಗೆ ಅವಧಾನೋದಕವಾಗುವುದು. ಆ ಪಾದಗಳನು ನಮಸ್ಕರಿಸಿ
ಪ್ರಣವ ತೆಗೆದಲ್ಲಿಗೆ ಆಪ್ಯಾಯನೋದಕವಾಗುವುದು. ಅದೇ ಉದಕವ
ತಾನು ತೆಗೆದುಕೊಂಡು ಲಿಂಗವನ್ನು ಹಸ್ತದಲ್ಲಿ ಮೂರ್ತವ ಮಾಡಿ
ಕೊಂಡು, ಆ ಲಿಂಗದ ಮಸ್ತಕದ ಮೇಲೆ ನೀಡಿದಲ್ಲಿಗೆ ಹಸ್ತೋದಕವಾ
ಗುವುದು. ಅದೇ ಲಿಂಗೋದಕವನ್ನು ಮುಖ ಪ್ರಕ್ಷಾಲನವ ಮಾಡಿದಲ್ಲಿಗೆ
ಪರಿಣಾಮೋದಕವಾಗುವದು ಆ ಉಳಿದ ಉದಕದಿಂದ ದಂತ ಜಿಹ್ವೆ
ಮುಕ್ಕಳಿಸಿದಲ್ಲಿಗೆ ನಿರ್ನಾಮೋದಕವಾಗುವದು. ತಾನು ಮುಖಮಜ್ಜನ
ಜಳಕವನ್ನು ಮಾಡಿಕೊಂಡು ಆಚೆಗೆ ತಾ ನೆನೆದಲ್ಲಿಗೆ ಸತ್ಯೋದಕವೆನಿಸು
ವುದು. ಈ ಹತ್ತು ಉದಕವ ದೀಕ್ಷಾ ಪಾದೋದಕದಲ್ಲಿ ಸಂಬಂಧವೆಂದ
ರಿದು ಆಚರಿಸಿದಾತನೇ ನಿತ್ಯ ಮುಕ್ತನು ಕಾಣಾ ಕೂಡಲ ಚೆನ್ನಸಂಗಮ
ದೇವಾ.

## ಶಿಕ್ಷಾ ಪಾದೋದಕ

೧೩೬. ಪಾದಪೂಜೆಯ ಮಾಡಿ ಅಂಗುಷ್ಠ ಎರಡು, ಅಂಗುಲಿ ಎಂಟು
ಉಭಯ ಕತ್ತ್ರೀದಲ್ಲಿ ಮಾಡಿಕೊಂಬುವುದೇ ಶಿಕ್ಷಾ ಪಾದೋದಕ.
ಇದಕ್ಕೆ ಸಾಕ್ಷಿ. ಯೋಗಜಾಗಮೆ॥ ಲಿಂಗಧಾರೀ ಮಹಾಯೋಗೀ । ಚರ
ಪಾದೋದಕ ವಿನಾ । ದಿನೇನ ದಶಜನ್ಮಾನಿ । ಮಾಸೇನ ಶತಜನ್ಮಾನಿ ।
ವರ್ಷೆ ಸಹಸ್ರ ಜನ್ಮಾನಿ । ವರುಷಾರ್ಧ ಘೂಕವಾಯಸಃ ॥ ದ್ವಿವರುಷೆ
ಸೂಕರೆ ಗರ್ಭೆ । ಜಾಯತೆ ನಾತ್ರ ಸಂಶಯಃ ॥ ” ಎಂದುಂಟಾಗಿ ಆ
ಶಿಕ್ಷಾಪಾದೋದಕವನೇ ವಿಭೂತಿಯಲ್ಲಿ ಸಮ್ಮಿಶ್ರವಂ ಮಾಡಿ ಲಲಾಟ
ಮೊದಲಾದ ನಾಲ್ವತ್ತೆಂಟು ಸ್ಥಾನಂಗಳಲ್ಲಿ ಧಾರಣವ ಮಾಡುವುದು.
ಇದು ವೀರಶೈವರಿಗೆ ಸಲ್ಲುವ ನಡತೆಯು. ಶುದ್ಧ ಶೈವರಿಗೆ ಗಿಂಡಿಯಲ್ಲಿ

ತುಂಬುವ ನಡತೆಯು ವಿಶೇಷ ವೀರಶೈವರು ಗಿಂಡಿಯ ಮಡಗಲಾಗದು. ಏನು ಕಾರಣವೆಂದರೆ, ಅವರಿಗೆ ಮೂರು ಪಾದೋದಕವು ನಿತ್ಯದಲ್ಲಿ ಸಂಬಂಧವಾಗುವುದು ಎಂದು ಅರಿದಾಚರಿಸುವಂಥಾತನೇ ನಿತ್ಯಮುಕ್ತನಯ್ಯ ಕೂಡಲ ಚೆನ್ನಸಂಗಮದೇವಾ.

೧೩೭. ಎರಡು ಅಂಗುಷ್ಠ ಎಂಟು ಅಂಗುಲಿಗಳಿಂದ ಮಾಡಿದಂಥ ಶಿಕ್ಷಾಪಾದೋದಕದಲ್ಲಿ ಹತ್ತು ಪ್ರಕಾರವಾಗುವವು ಅದಕ್ಕೆ ವಿವರ :– ವೀರಶೈವ ಸಂಪನ್ನರಾದ ಸದ್ಭಕ್ತ ಶರಣ ಗಣಂಗಳಾದರೂ, ವೀರ ಮಾಹೇಶ್ವರರಾದರೂ ಕ್ರಿಯಾಪಾದೋದಕ ಮಾಡಬೇಕಾದರೆ, ತನ್ನ ಎರಡು ಅಂಗುಲಿಗಳಿಂದ ಆ ಮಾಹೇಶ್ವರರ ೨ ಅಂಗುಷ್ಠ ಎಂಟು ಅಂಗುಲಿಗಳಲ್ಲಿ ತರ್ಜನಿಯ ಬೆರಳಿನಿಂದ ಬಲದ ಪಾದಾಂಗುಷ್ಠದ ಮೇಲೆ ಮೂರುವೇಳೆ ಸ್ಪರ್ಶನವ ಮಾಡಿ, ನಾಲ್ಕನೆಯ ವೇಳೆಗೆ ಅದೇ ಬಲದ ಪಾದದ ನಾಲ್ಕು ಬೆರಳುಗಳನ್ನು ಒಂದೇವೇಳೆ ಸ್ಪರ್ಶನವ ಮಾಡಿದಡೆ, ಗುರುಪಾದೋದಕವೆನಿಸುವುದು. ಇದೇ ರೀತಿಯಲ್ಲಿ ಎಡದ ಪಾದವ ಮಾಡಿದಲ್ಲಿಗೆ ಲಿಂಗೋದಕವೆನಿಸುವುದು. ಈ ಎರಡರ ಕೂಟವೇ ಜಂಗಮಪಾದೋದಕವೆನಿಸುವದು. ತನ್ನ ಹಸ್ತದಿಂದ ಪಾದವ ಮುಟ್ಟಿ ಮಾಡಿದಂಥಾದ್ದೇ ಸ್ಪರ್ಶನೋದಕವೆನಿಸುವುದು. ಆ ಪಾದದ ಮೇಲಣ ದ್ರವವ ತೆಗೆದಂಥಾದ್ದೇ ಅವಧಾನೋದಕವೆನಿಸುವುದು. ಅದರ ಮೇಲಣ ಅಪೇಕ್ಷೆ ಮುಂದುಗೊಂಡು ತಾನು ಮಾಡಿಕೊಂಡಂಥಾದ್ದೇ ಆಪ್ಯಾಯನೋದಕವೆನಿಸುವುದು. ಹಸ್ತದಿಂದ ಮುಟ್ಟಿ ಮಾಡಿದಂಥಾದ್ದೇ ಹಸ್ತೋದಕವೆನಿಸುವುದು. ಆ ಭಾಜನವ ತನ್ನ ಕೈಯ್ಯಲ್ಲಿ ತೆಗೆದುಕೊಂಡು ಆ ಜಂಗಮಕ್ಕೆ ನಮಸ್ಕರಿಸುವಂಥಾದ್ದೇ ನಿರ್ನಾಮೋದಕವೆನಿಸುವುದು. ಆ ಜಂಗಮಕ್ಕೆ ತಾ ನಮಸ್ಕರಿಸಿ ಆ ಭಾಜನವನ್ನು ತನ್ನ ಕ್ರಿಯಕ್ಕೆ ಇಟ್ಟುಕೊಂಡಂಥಾದ್ದೇ ಸತ್ಯೋದಕವೆನಿಸುವುದು. ಈ ಪ್ರಕಾರದಲ್ಲಿ ಹತ್ತು ಪಾದೋದಕವು ಶಿಕ್ಷಾ ಪಾದೋದಕದಲ್ಲಿ ಆಗುವುವು ಎಂದು ಅರಿದಾಚರಿಸುವುದು. ಆಚರಿಸಲಾಗದೆಂಬ ಹುಚ್ಚು ಮಾನವರನೇನೆಂಬೆನಯ್ಯ ಕೂಡಲ ಚೆನ್ನಸಂಗಮದೇವಾ.

## ಜ್ಞಾನ ಪಾದೋದಕ

೧೩೮. ಜ್ಞಾನಪಾದೋದಕದಲ್ಲಿ ಮೂರು ಸಂಬಂಧವಾಗುವುವು. ಅದೆಂತೆಂದಡೆ, ಮಹಾಂತನ ಪಾದವನ್ನು ಪಡೆದುಕೊಂಬಂಥ ಭಕ್ತನು ಆ ಮಾಹೇಶ್ವರನ ಉನ್ನತಾಸನದಲ್ಲಿ ಮೂರ್ತಗೊಳಿಸಿ ಪಾದಪ್ರಕ್ಷಾಲನೆಯ ಮಾಡಿದ ನಂತರದಲ್ಲಿ ದೀಕ್ಷಾಪಾದೋದಕವ ಮಾಡಿ, ಶುಭ್ರ ವಸ್ತ್ರದಿಂದ ದ್ರವವ ತೆಗೆದು ಅಷ್ಟವಿಧಾರ್ಚನೆಯಿಂದ ಲಿಂಗಪೂಜೆಯ ಮಾಡಿಸಿ ಮರಳಿ ತಾನು ಶ್ಲೋ॥ ಚೈತನ್ಯಂ ಶಾಶ್ವತಂ ಶಾಂತಂ। ವ್ಯೋಮಾತೀತಂ ನಿರಂಜನಂ। ನಾದಬಿಂದು ಕಲಾತೀತಂ ತಸ್ಮೈ ಶ್ರೀ ಗುರುವೇ ನಮಃ॥ ಎಂದು ಅಷ್ಟಾಂಗಯುಕ್ತನಾಗಿ ವಂದನಂಗೈದು ಪಾದಪೂಜೆಗೆ ಅಪ್ಪಣೆಯಂ ತೆಗೆದುಕೊಂಡು, ಅವರ ಸಮ್ಮುಖದಲ್ಲಿ ಗದ್ದುಗೆಯ ಹಾಕಿಕೊಂಡು ಅದರ ಮೇಲೆ ಮೂರ್ತವ ಮಾಡಿಕೊಂಡು, ತನ್ನ ಲಿಂಗವ ನಿರೀಕ್ಷಿಸಿ ವಾಮ ಹಸ್ತದಲ್ಲಿ ನಿರಂಜನ ಪ್ರಣಮವ ಲಿಖಿಸಿ, ಪೂಜೆಯ ಮಾಡಿ, ಆಮೇಲೆ ಜಂಗಮದ ಪಾದವ ಹಿಡಿದು ಪೂಜೆಯ ಮಾಡಿ, ಆ ಪೂಜೆಯ ನಿಳುಹಿ, ಅದೇ ಉದಕದ ಪಾತ್ರೆಯಲ್ಲಿ ಶಿಕ್ಷಾಪಾದೋದಕವ ಮಾಡಿ, ಪಾದದ ದ್ರವವ ತೆಗೆದು, ಐದಂಗುಲಿಗಳಲ್ಲಿ ಪಂಚಾಕ್ಷರವ ಲೇಖನವ ಮಾಡಿ, ಮಧ್ಯದಲ್ಲಿ ಮೂಲ ಪ್ರಣಮವ ಒರೆದು, ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯ ಮಾಡಬೇಕಾದರೆ ಶಿವಧರ್ಮೋತ್ತರೆ, ಗ್ರಂಥ॥ ಲಿಂಗಾರ್ಪಿತ ಪ್ರಸಾದಂಚ ಚರಲಿಂಗಕೆ। ನರದ್ಯಾಚಪಾರ್ಪಿತ ಪ್ರಸಾದಂಚ ಸದ್ಯಾಚ್ಚಲಿಂಗಾಯ॥ ಶಿವರಹಸ್ಯ॥ ಅನಾದಿ ಜಂಗಮಶ್ಚೈವ ಆದಿಲಿಂಗಸ್ಥಲಂ ಭವೇತ್। ಅನಾದಿ ಸ್ಥಾವರೋದೇವ ಇಷ್ಟೋಚ್ಛಿಷ್ಟಂತು ಕಿಲ್ಬಿಷಂ॥ ಎಂದುದಾಗಿ ಲಿಂಗಕ್ಕೆ ತೋರಿ ಪಾದವ ಪೂಜಿಸಲಾಗದು. ಅದೆಂತೆಂದೊಡೆ ಗುರುಲಿಂಗೂ ಲಿಂಗಕ್ಕು ಚೈತನ್ಯ ಸ್ವರೂಪು ಜಂಗಮವಾದ ಕಾರಣ ಆ ಜಂಗಮದ ಪ್ರಸಾದವ ಲಿಂಗಕ್ಕೆ ತೋರಬೇಕಲ್ಲದೆ ಲಿಂಗಪ್ರಸಾದವ ಪಾದಕ್ಕೆ ತೋರಲಾಗದು. ಅದೇನು ಕಾರಣವೆಂದಡೆ– ಗುರು, ಲಿಂಗ, ಜಂಗಮಕ್ಕೆ ಅನಾದಿ ಜಂಗಮವೇ

ಚೈತನ್ಯ ಸ್ವರೂಪವಾದ ಕಾರಣ ಆ ಜಂಗಮವೇ ಮುಖ್ಯ ಸ್ವರೂಪು. ಇಂತಪ್ಪ ಜಂಗಮ ಪಾದವೇ ಪರಬ್ರಹ್ಮಕ್ಕೆ ಆಧಾರವಾಗಿಹುದು. ಆ ಪಾದವಂ ಬಿಟ್ಟು ಪರವ ಕಂಡುದಿಲ್ಲವೆಂದು ಶ್ರುತಿ ಪೊಗಳುತ್ತಿರ್ದ ಕಾರಣ ಇಂತಪ್ಪ ಚರಮೂರ್ತಿಯ ಶ್ರೀಪಾದವನ್ನು ಅಷ್ಟವಿಧಾರ್ಚನೆ ಷೋಡ ಶೋಪಚಾರದಿಂದ ಅರ್ಚಿಸಿದಂಥಾದ್ದೇ ಲಿಂಗಪೂಜೆ

ಆಮೇಲೆ ಆ ಮೂರ್ತಿಯ ಉಭಯ ಪಾದಗಳ ಹಿಮ್ಮಡ ಸೋಂ ಕುವಂತೆ ಹಸ್ತವ ಮಡಗಿ, ಲಲಾಟವ ಮುಟ್ಟಿ ನಮಸ್ಕರಿಸಿ, ಆ ಪೂಜೆ ಯನಿಳುಹಿ, ಆ ಶಿಕ್ಷಾ ಪಾದೋದಕವನ್ನು ಬಲದಂಗುಷ್ಟದ ಮೇಲೆ ಪಡ ಕ್ಷರ ಮಂತ್ರವ ಆರುವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಇಷ್ಟಲಿಂಗವೆಂದು ಭಾವಿಸಿ, ಎಡದಂಗುಷ್ಠದ ಮೇಲೆ ಪಂಚಾಕ್ಷರೀ ಮಂತ್ರವ ಐದುವೇಳೆ ಸ್ಮರಿಸುತ್ತ ನೀಡಿ, ಅಲ್ಲಿ ಪ್ರಾಣಲಿಂಗವೆಂದು ಭಾವಿಸಿ, ಮಧ್ಯದಲ್ಲಿ ಓಂ ಬಸವಾಯ ನಮಃ ಎಂದು ಒಂದುವೇಳೆ ಒಂದು ಪುಷ್ಪವ ಧರಿಸಿ ಸ್ಮರಿ ಸುತ್ತ ನೀಡಿ, ಅಲ್ಲಿ ಭಾವಲಿಂಗವೆಂದು ಭಾವಿಸಿ, ನೀಡಿದ ಉದಕವೇ ಬಟ್ಟಲಲಿ ನಿಂದು ಮಹತ್ಪಾದವೆಂದೆನಿಸುವುದು. ಈ ಮಹತ್ಪಾದದಲ್ಲಿ ಪಾದದ ದ್ರವವ ತೆಗೆದು ಮತ್ತೆ ಪೂಜೆಯ ಮಾಡಬೇಕಾದರೆ ಬಹು ಪುಷ್ಪವ ಧರಿಸದೆ ಒಂದೇ ಪುಷ್ಪವ ಧರಿಸಬೇಕು. ಅದೇನು ಕಾರಣವೆಂ ದಡೆ, ಪಶ್ಚಿಮ ಚಕ್ರದಲ್ಲಿ ಸಂಬಂಧವಾದ ನಿರಂಜನ ಜಂಗಮಕ್ಕೆ ಏಕ ದಳವನುಳ್ಳ ಒಂದೇ ಪುಷ್ಪವೇ ಮುಖ್ಯವಾದ ಕಾರಣ, ಏಕ ಕುಸುಮ ವನೇ ಧರಿಸಿ ಪೂಜೆಯ ಮಾಡಿ ನಮಸ್ಕರಿಸುವುದೇ ಜಂಗಮ ಪೂಜೆ.

ಆ ಪೂಜೆಯ ತೆಗೆದಂಥ ಶಿಷ್ಯನು ಶರಣಾರ್ಥಿ ಸ್ವಾಮಿ ಎಂದು ಬಟ್ಟಲವನೆತ್ತಿಕೊಟ್ಟಲ್ಲಿ ಕರ್ತೃವಾದಂಥ ಜಂಗಮವು ಆ ಬಟ್ಟಲಲ್ಲಿ ರ್ದಂಥ ತೀರ್ಥವನ್ನು ತಮ್ಮ ಪಂಚಾಂಗುಲಿಗಳೇ ಪಂಚ ಪ್ರಣವವೆಂದು ಭಾವಿಸಿ ಮೂಲ ಮಂತ್ರದಿಂದ ಮೂರುವೇಳೆ ಪ್ರದಕ್ಷಿಣವ ಮಾಡಿ ನಮ ಸ್ಕರಿಸಿ ಲಿಂಗದ ಮಸ್ತಕವ ಮೇಲೆ ಮೂರುವೇಳೆ ಪಂಚಾಂಗುಲಿಗಳಿಂದೆ ಚತುರಂಗುಲ ಪ್ರಮಾಣದಲ್ಲಿ ಲಿಂಗವ ಮುಟ್ಟದೆ ನೀಡಿ, ಆ ಪಂಚಾಂ

ಗುಲಿಗಳನ್ನು ತಮ್ಮ ಜಿಹ್ವೆಯಲ್ಲಿ ಸ್ವೀಕರಿಸುತಲ್ಲಿ ಗುರುಪಾದೋದಕವೆನಿಸುವುದು. ಅದೇ ದೀಕ್ಷಾ ಪಾದೋದಕವೆನಿಸುವುದು. ತಾವು ಲಿಂಗವನೆತ್ತಿ ಸಲಿಸಿದ್ದೇ ಲಿಂಗಪಾದೋದಕವೆನಿಸುವುದು. ಅದೇ ಶಿಕ್ಷಾ ಪಾದೋದಕವೆನಿಸುವುದು ಬಟ್ಟಲವೆತ್ತಿ ಸಲಿಸಿದಲ್ಲಿ ಜಂಗಮ ಪಾದೋದಕವೆನಿಸುವುದು. ಅದೇ ಜ್ಞಾನಪಾದೋದಕವು.

ಈ ರೀತಿಯಲ್ಲಿ ಮಾಹೇಶ್ವರನು ಸಲಿಸಿದ ಬಳಿಕ, 'ಶರಣಾರ್ಥಿ' ಎಂದು ಶಿಷ್ಯೋತ್ತಮನು ಎದ್ದು, ಗ್ರಂ॥ ಲಲಾಟಂ ಚ ಭುಜ ದ್ವಂದ್ವಂ ಪಾಣಿಯುಗ್ಮಂ ಉರಸ್ತಥಾ । ಅಂಗುಷ್ಠ ಯುಗಳಂ ಪ್ರೋಕ್ತಂ । ಪ್ರಣವ್ಯಾಷ್ಟಾಂಗ ಮುಚ್ಯತೆ ॥ ಎಂದು ಬೃತ್ಯೋಪಚಾರಗಳಿಂದ ಪ್ರಣುತಂಗೈದು ಅಪ್ಪಣೆಯ ತೆಗೆದುಕೊಂಡು ಬಂದು, ಆ ಜಂಗಮದ ಮರ್ಯಾದೆಯಲ್ಲಿಯೇ ತಾನು ಸ್ವೀಕರಿಸುವುದು.

ಇದೇ ರೀತಿಯಲ್ಲಿ ಗುರುಶಿಷ್ಯರೀರ್ವರು ಸಮರಸ ಭಾವದಿಂದ ಸೇವನೆ ಮಾಡಿದಲ್ಲಿ ಆ ಶಿಷ್ಯೋತ್ತಮನೇ ನಿಜ ತಚ್ಛಿಷ್ಯನಾದ ಕಾರಣ ಗುರುವೇ ಶಿಷ್ಯ, ಶಿಷ್ಯನೇ ಗುರುವು ಈ ಎರಡರ ಮರ್ಮವು ಆದ ಬಗೆ ಹೇಗೆಂದಡೆ, ಆ ಶಿಷ್ಯನು ಪಡೆದುಕೊಂಡಂಥ ಪಾದೋದಕವನು ಈ ಗುರುವು ಭಕ್ತಿಮುಖದಿಂದ ತೆಗೆದುಕೊಂಡಲ್ಲಿ ಗುರುವೇ ಶಿಷ್ಯನಾಗಿರ್ಪನು. ಆ ಗುರುವು ಸೇವನೆಯ ಮಾಡಿ ಉಳಿದ ಉದಕವನ್ನು ಭಕ್ತಿಭಾವದಿಂದ ಶಿಷ್ಯಸೇವನೆ ಮಾಡಿದಲ್ಲಿಗೆ ತಚ್ಛಿಷ್ಯನಾದನು. ಈ ಮರ್ಮವನ್ನು ತಿಳಿದು ಗುರುಶಿಷ್ಯರೀರ್ವರು ಸಲಿಸಿದ ಬಳಿಕ, ಕೆಲವು ಭಕ್ತ ಮಾಹೇಶ್ವರರು ಸಲಿಸುವುದು. ಇನ್ನು ನಿಚ್ಚ ಪ್ರಸಾದಿಗಳು, ಸಮಯ ಪ್ರಸಾದಿಗಳು ಆಯಾಯ ತತ್ಕಾಲದಲ್ಲಿ ತ್ರಿವಿಧೋದಕಮಾಗಿರುವುದು. ಇದೇ ಆಚರಣೆ. ಇದನರಿಯದಾಚರಿಸುವವರಿಗೆ ನಿಮ್ಮ ನಿಲವನರಿಯಬಾರದು ಕಾಣಾ ಕೂಡಲ ಚೆನ್ನಸಂಗಮದೇವಾ.

೧೪೫. ಬಟ್ಟಲೊಳಗಣ ಉದಕವ ತೆಗೆದುಕೊಂಡು ಲಿಂಗದ ಮೇಲೆ ನೀಡಿ ತಾವು ಜಿಹ್ವೆಯಲ್ಲಿ ಸ್ವೀಕರಿಸಿದಲ್ಲಿಗೆ ಗುರುಪಾದೋದಕವಾಗು

ವುದು. ಮೊದಲು ಸಲಿಸಿದ ಗುರುಪಾದೋದಕದಿಂದ ಯಾವ ಪದವಿ ಯಾಗುವುದೆಂದರೆ, ಧರೆಯ ಜನನದ ಅಜ್ಞಾನಭವತ್ವವಳಿದು ಶಿವ ಜ್ಞಾನವ ಕರುಣಿಸಿಕೊಡುವುದು. ಲಿಂಗಪಾದೋದಕದಿಂದ ಯಾವ ಪದವಿಯಾಗುವುದೆಂದರೆ, ಇಹಲೋಕದ ತನುಭೋಗವಪ್ಪ ಪ್ರಾರಬ್ಧ ಕರ್ಮವನಳಿವುದು. ಶಿವಲೋಕದಲ್ಲಿ ಇತ್ತ ಬಾ ಎಂದೆನಿಸಿಕೊಂಬ ಮನ್ನಣೆಯ ಪದವಿಯಾಗುವುದು. ಆ ಬಟ್ಟಲೆತ್ತಿ ಸಲಿಸಿದ ಜಂಗಮ ಪಾದೋದಕದಿಂದ ಯಾವ ಪದವಿಯಾಗುವುದೆಂದಡೆ, ಇಹ ಪರಕ್ಕೆ ಎಡೆಯಾಡುವ ಅವಸ್ಥೆಗಳನು, ಪರತತ್ತ್ವವಾದ ಜಂಗಮವನು ಐಕ್ಯತ್ವವಾಗಿ ಅಳವಡಿಸಿಕೊಂಡಿಪ್ಪನು. ಇಲ್ಲಿಗೆ ಗುರು ಪಾದೋದಕ ಲಿಂಗ ಪಾದೋದಕ, ಜಂಗಮ ಪಾದೋದಕ ಈ ತ್ರಿವಿಧೋದಕವು ಆದವು. ಆ ಉಳಿದ ಏಳು ಉದಕದೊಳಗೆ ಸ್ಪರ್ಶನೋದಕ, ಅವಧಾನೋದಕ, ಇವೆರಡು ಆ ಲಿಂಗದ ಮಸ್ತಕದ ಮೇಲೆ ನೀಡಿ ಅಂಗುಲಿಗಳ ಜಿಹ್ವೆಯಲ್ಲಿ ಇಟ್ಟುಕೊಂಡಂಥ ಗುರುಪಾದೋದಕದಲ್ಲಿ ಸಂಬಂಧವು. ಆಪ್ಯಾಯನೋದಕ, ಹಸ್ತೋದಕ ಇವೆರಡು ಲಿಂಗವೆತ್ತಿ ಸಲಿಸಿದಂಥ ಲಿಂಗಪಾದೋದಕದಲ್ಲಿ ಸಂಬಂಧವು. ಪರಿಣಾಮೋದಕ, ನಿರ್ನಾಮೋದಕ ಇವೆರಡು ಬಟ್ಟಲವೆತ್ತಿ ಸಲಿಸಿದಂಥ ಜಂಗಮ ಪಾದೋದಕದಲ್ಲಿ ಸಂಬಂಧವು. ಸತ್ಯೋದಕ ಬಟ್ಟಲ ಖಂಡಿತ ಮಾಡಿದಲ್ಲಿಗೆ ಸಂಬಂಧವು. ಇವು ಹತ್ತು ಪಾದೋದಕವು ಮಹತ್ಪಾದದಲ್ಲಿ ಸಂಬಂಧವು. ಧೂಳ ಪಾದೋದಕ ಹತ್ತುದಕವು ಸಂಬಂಧವು ಕ್ರಿಯಾಪಾದೋದಕದಲ್ಲಿ ನೋಡಾ ಕೂಡಲ ಚೆನ್ನ ಸಂಗಮದೇವಾ.

## ಪ್ರಸಾದ

೧೪೦. ಆದಿಲಿಂಗ ಅನಾದಿ ಶರಣವೆಂಬುದು ತನ್ನಿಂದ ತಾನಾಯಿತ್ತು ಕೇಳಿರಣ್ಣಾ. ಆದಿ ಕಾಯ ಅನಾದಿ ಪ್ರಾಣವೆಂಬ ಈ ಉಭಯದ ಭೇದವ ತಿಳಿದು ವಿಚಾರಿಸಿ ನೋಡಿರಣ್ಣಾ. ಇಂತು ಅನಾದಿಯ ಪ್ರಸಾದ ಆದಿಗೆ

ಸಲುವುದು. ಅದೆಂತೆಂದೊಡೆ, 'ಶಿವರಹಸ್ಯೆ ಅನಾದಿ ಜಂಗಮುಶ್ಚೈವ ಆದಿಲಿಂಗಸ್ಥಲಂ ಭವೇತ್। ಅನಾದೇಶ್ಚ ವಿರೋಧೇನ ಇಷ್ಟೋಚ್ಛಿಷ್ಟಂ ತು ಕಿಲ್ಬಿಷೆ॥ ಎಂದುದಾಗಿ ಇದನರಿತು ಪ್ರಾಣ ಪ್ರಸಾದ ವಿರೋಧವಾಗಿ ಪಿಂಡ ಪ್ರಸಾದವ ಕೊಂಡಡೆ ಕಿಲ್ಬಿಷ ನೋಡಾ ಕೂಡಲ ಚೆನ್ನಸಂಗಮ ದೇವಾ.

೧೪೧. ಶಿಷ್ಯನ ಮುಖದಿಂದ ಉದಯವಾದ ಗುರುವಿಂಗೆ ಶಿಷ್ಯನ ಪ್ರಸಾದ ಗುರುವಿಂಗಲ್ಲದೆ ಗುರುವಿನ ಮುಖದಿಂದ ಉದಯವಾದ ಲಿಂಗಕ್ಕೆ ಗುರುವಿನ ಪ್ರಸಾದ ಲಿಂಗಕ್ಕಲ್ಲದೆ ಲಿಂಗದ ಪ್ರಸಾದ ಗುರುವಿಂಗಲ್ಲ. ಇದಕ್ಕೆ ಲಿಂಗವೇ ಸಾಕ್ಷಿ. ಭಕ್ತನ ಮುಖದಿಂದ ಉದಯವಾದ ಜಂಗಮಕ್ಕೆ ಭಕ್ತನ ಪ್ರಸಾದ ಜಂಗಮಕ್ಕಲ್ಲದೆ ಜಂಗಮದ ಪ್ರಸಾದ ಭಕ್ತಂಗಿಲ್ಲ. ಅದಕ್ಕೆ ಜಂಗಮವೇ ಸಾಕ್ಷಿ. ಇಂತೀ ತ್ರಿವಿಧ ಅನುಭಾವ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಬಸವ ಸಂತತಿ ಅಲ್ಲಮ ಪ್ರಭುವಿಂಗಲ್ಲದೆ ಆರಿಗೂ ಅಳವಡದು ನೋಡಾ.

೧೪೨. ಹರ ತನ್ನ ರೂಪ ತೋರಬೇಕೆಂದು ಗುರುರೂಪಾಗಿ ಬಂದು ಮನಸ್ಥಲಕ್ಕೆ ಮಂತ್ರವಾದ. ತನುಸ್ಥಲಕ್ಕೆ ಪ್ರಸಾದವಾದ. ಕರಸ್ಥಲಕ್ಕೆ ಲಿಂಗವಾದ. ಪ್ರಾಣಸ್ಥಲಕ್ಕೆ ಜಂಗಮವಾದ. ಇಂತೀ ಚತುರ್ವಿಧ ಸಾಹಿತ್ಯ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನೊಬ್ಬನೇ.

೧೪೩. ಗುರುವಿನಲ್ಲಿ ಸದಾಚಾರಿ. ಲಿಂಗದಲ್ಲಿ ಶಿವಾಚಾರಿ. ಜಂಗಮದಲ್ಲಿ ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿಚಾರಿ ಕೂಡಲ ಚೆನ್ನಸಂಗಾ ನಿಮ್ಮ ಶರಣ.

೧೪೪. ಇನ್ನು ಮುಕ್ತಿ ಎಂದು ಮನದಲ್ಲಿ ಹೊಳೆದು ಕಾಣಿಸುವನ್ನಕ್ಕರ ಜಂಗಮಲಿಂಗ ಸಾಹಿತ್ಯವಾದುದಲ್ಲ. ಇನ್ನು ಲಿಂಗವ ಬೆರಸಿಹೆವೆಂದು ಮನದಲ್ಲಿ ಹೊಳೆದು ಕಾಣಿಸುವನ್ನಕ್ಕರ ಶಿವಲಿಂಗ ಸಾಹಿತ್ಯವಾದುದಲ್ಲ. ಇನ್ನು ವಿಶೇಷತ್ವ ಉಂಟೆಂದು ಕಾಮಿಸುವನ್ನಕ್ಕರ ಶ್ರೀ ಗುರು

ಲಿಂಗ ಸಾಹಿತ್ಯವಾದುದಲ್ಲ. ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಈ ಚತುರ್ವಿಧವು ಏಕೀಭವಿಸಿ ಪ್ರಾಣಲಿಂಗವಾದ ಮಹಾ ಮಹಿಮಂಗೆ ಇನ್ನು ಕಾಮಿಸಲಿಲ್ಲ, ಭಾವಿಸಲಿಲ್ಲ. ಆತ ನಿಶ್ಚಿಂತ ಪರಮ ಸುಖಿ, ಪರಿಣಾಮಿ ಆತನಿರ್ದುದೇ ಕೈಲಾಸ, ಆತ ಸರ್ವಾಂಗಲಿಂಗಿ ಕೂಡಲ ಚೆನ್ನಸಂಗಮದೇವಾ.

೧೪೫. ತ್ರಿವಿಧ ಪ್ರಸಾದವೆಂಬರು. ಅದೆಂತಾದುಪೋ? ಶುದ್ಧಪ್ರಸಾದ ಗುರುವಿನದು, ಸಿದ್ಧಪ್ರಸಾದ ಲಿಂಗವದು, ಪ್ರಸಿದ್ಧ ಪ್ರಸಾಡ ಜಂಗಮ ವದು. ಇಂತೀ ತ್ರಿವಿಧ ಒಂದೊಂದರಿಂದವರ ತೋರಿ ಬದುಕಿಸಾ ಕೂಡಲ ಚೆನ್ನಸಂಗಮದೇವಾ.

೧೪೬. ಇನ್ನು ಏಕಾದಶ ಪ್ರಸಾದಃ— ಪ್ರಥಮದಲ್ಲಿ ಮಹಾದೇವಂಗೆ ಮನವರ್ಪಿತ, ದ್ವಿತೀಯದಲ್ಲಿ ಮಹೇಶ್ವರಂಗೆ ವೀರಾರ್ಪಿತ, ತೃತೀಯ ದಲ್ಲಿ ಶಂಕರಂಗೆ ಸಮಾಧಾನಾರ್ಪಿತ, ಚತುರ್ಥದಲ್ಲಿ ನಿರ್ವಿಷಯಾರ್ಪಿತ ಪಂಚಮದಲ್ಲಿ ಪಂಚವಸ್ತ್ರಾರ್ಪಿತ, ಷಷ್ಠಮದಲ್ಲಿ ನಷ್ಟ ರೂಪಾಗಿ ನಿರೂ ಪಾರ್ಪಿತ, ಸಪ್ತಮದಲ್ಲಿ ಆತ್ಮಾರ್ಪಿತ, ಅಷ್ಟಮದಲ್ಲಿ ತನ್ನ ಮರೆದು ಮಹಾರ್ಪಿತ, ನವಮದಲ್ಲಿ ನಿಃಶೂನ್ಯಾರ್ಪಿತ,ದಶಮದಲ್ಲಿ ಮಹಾರ್ಪಿತ, ಏಕಾದಶದಲ್ಲಿ ಏಕಾದಶ ಪ್ರಸಾದವ ನೋಡಹೋದರೆ ತನ್ನ ನುಂಗಿ ತ್ರಯ್ಯ. ಉಪಮಿಸಬಾರದು ಮಹಾಘನವ ಕೂಡಲ ಚೆನ್ನಸಂಗಮ ದೇವಾ.

೧೪೭. ಅನಾದಿ ಕುಳ ಸನ್ಮತವಾದ ಏಕಾದಶ ಪ್ರಸಾದದ ಕುಳವ ತಿಳಿದಡೆ, ಪ್ರಥಮದಲ್ಲಿ ಗುರುಪ್ರಸಾದ, ದ್ವಿತೀಯದಲ್ಲಿ ಲಿಂಗ ಪ್ರಸಾದ, ತೃತೀಯದಲ್ಲಿ ಜಂಗಮ ಪ್ರಸಾದ, ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ, ಪಂಚಮದಲ್ಲಿ ಆಪ್ಯಾಯನ ಪ್ರಸಾದ, ಷಷ್ಠಮ ದಲ್ಲಿ ಸಮಯ ಪ್ರಸಾದ, ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ, ಅಷ್ಟಮದಲ್ಲಿ ಅಂತಃ ಕರಣ ಚತುಷ್ಟಯ ವಿರಹಿತ ಪ್ರಸಾದ, ನವಮದಲ್ಲಿ ಸದ್ಭಾವ ಪ್ರಸಾದ, ದಶಮದಲ್ಲಿ ಸಮತೆ ಪ್ರಸಾದ, ಏಕಾದಶದಲ್ಲಿ ಜ್ಞಾನ ಪ್ರಸಾದ, ಇಂತೀ

ಏಕಾದಶ ಪ್ರಸಾದ ಸ್ಥಲವನತಿಗಳೆದ ಕೂಡಲ ಚೆನ್ನಸಂಗಯ್ಯನಲ್ಲಿ ಐಕ್ಯ ಪ್ರಸಾದಿಗೆ ನಮೋ ನಮೋ ಎಂಬೆ.

೧೪೮. ಅಚ್ಚ ಪ್ರಸಾದಿ, ನಿಚ್ಚಪ್ರಸಾದಿ, ಸಮಯ ಪ್ರಸಾದಿಗಳ ವಿವರ ಅದೆಂತೆಂದಡೆ– ಗುರುವು ಮೊದಲು ಆಚರಿಸುವಂಥ ಮರ್ಮವನು ತಿಳಿದು ಶಿವಸಂಸ್ಕಾರ ಸಾಮರ್ಥ್ಯವನ್ನು ಹೊಂದಿ ನಡೆ, ಎಂದು ಅತಿ ಮೋಹನದಿಂದ ಸಮಸ್ತ ಮರ್ಮವನು ತಿಳುಹಿ, ಹಿಡಿದ ವ್ರತಾಚರಣೆಗೆ ಸಂದು ಇಲ್ಲದ ಹಾಗೆ ಅಪಮೃತ್ಯು ಬಂದು ಸೋಂಕದ ಹಾಗೆ ಪ್ರಮಥ ಕೃಪಾಕಟಾಕ್ಷದಿಂದ ನಡೆದು ಹೋಗುವರು. ಅವರೇ ಅಚ್ಚ ಪ್ರಸಾದಿ ಗಳು, ಮರ್ತ್ಯಲೋಕದ ಮಹಾಗಣಂಗಳೆನಿಸುವರು. ಮಿಕ್ಕಿನ ನಿಚ್ಚ ಪ್ರಸಾದಿಗಳು, ಸಮಯ ಪ್ರಸಾದಿಗಳು, ಅವರು ನಡೆದ ಮೇಲುಪಂಙ್ತಿ ಆಚರಣೆಯ ನೋಡಿ ಅವರಂದ ಸುವಿವೇಕವು ನಮಗೆ ಬಾರದೆಂಬುದ ತಿಳಿದು ಅವರೇ ತಮ್ಮ ಇಷ್ಟಲಿಂಗವಾಗಿ ತಾವೇ ಅವರಿಗೆ ಭೃತ್ಯರಾಗಿ ನಡೆವುತ್ತ ಏಕಾರ್ಥ ಪರಮಾರ್ಥಕ್ಕೆ ಸಮಾನವಾಗಿ ಆಚರಿಸಬೇಕೆಂಬಂಥ ಅನುಸರಣೆ ಅವರಲ್ಲಿ ಹುಟ್ಟಿದ ನಿಮಿತ್ತ, ಅದೇ ಜಂಗಮ ಬಂದು ನಿಚ್ಚ ಪ್ರಸಾದಿಗಳಿಗೆ ಒಪ್ಪತ್ತು ತೀರ್ಥ ಪ್ರಸಾದ ಸಮಂತಾಗಿ ಆಚರಿಸಿ, ಉಳಿದ ಒಪ್ಪತ್ತು ಸಂಬಂಧವಿಟ್ಟು ಅನುಸರಿಸಿ ಎಂದು ಕಟ್ಟುಮಾಡಿ ಕೊಡು ವರು. ಸಮಯಪ್ರಸಾದಿಗಳಿಗೆ ಎರಡರಲ್ಲಿ ಅಶಕ್ತರೆಂದು ತಿಳಿದು ಅತಿ ಸೂಕ್ಷ್ಮವಾಗಿ ಅವರಿಬ್ಬರ ಆಚರಣೆಯನ್ನು ಇವರಿಬ್ಬರಲ್ಲಿ ಹರಿಸಿ ಆಯಾ ಯ ತತ್ಕಾಲಕ್ಕೆ ಜಂಗಮ ದೊರೆದಂಥಾದ್ದೇ ಆಚರಣೆ, ಜಂಗಮ ದೊರೆ ಯದಂಥಾದ್ದೇ ಸಂಬಂಧವೆಂದು, ಅರುಹಿ ಕೊಟ್ಟಲ್ಲಿ ದೊರೆದಾಗಲಿಂತು ಆಚಾರ ಒಡಂಬಡಿಕೆ, ದೊರೆಯದಾಗ ಆಚಾರ ಒಡಂಬಡಿಕೆಯಾಗದು, ಎಂದು ಮರ್ಮವನು ತಿಳಿದು, ಜಂಗಮವು ಇಲ್ಲದ ವೇಳೆಗೆ ಅತಿ ಸೂಕ್ಷ್ಮ ವಾಗಿ ಅತಿ ವಿಶಾಲದಿಂದ ನಿರೂಪಿಸುತ್ತಿರ್ದರು. ಆ ಗುರುವು ಮೊದಲಲ್ಲಿ ಲಿಂಗವ ಕರುಣಿಸಿಕೊಟ್ಟಂಥಾದ್ದೇ ನಿಮ್ಮ ಕಳೆ, ನಾ ನಿಮ್ಮ ಚಿತ್ತು, ಎರಡರ ಸಮರಸವೇ ನಿಮ್ಮ ಬಿಂದು, ಆ ಬಿಂದುವೇ ಅಕಾರ ಪ್ರಣವು ನಿಮ್ಮ ಇಷ್ಟಲಿಂಗದ ಶಕ್ತಿಪೀಠದಲ್ಲಿ ಗುರುವಾಗಿ, ಆ ಕಳೆಯೇ ಮಕಾರ

ಪ್ರಣಮು. ನಿಮ್ಮ ಲಿಂಗದ ಗೋಮುಖದಲ್ಲಿ ಜಂಗಮವಾಗಿ, ಆ ಎರಡರ ಕೂಟವೇ ನಾದ, ಅದೇ ಉಕಾರ ಪ್ರಣಮು. ಆ ಲಿಂಗದ ಗೋಳಕದಲ್ಲಿ ಲಿಂಗವಾಗಿ ಅದೇ ಲಿಂಗವೇ ನಿಮ್ಮ ರಮಣನೆಂದು ಭಾವಿಸಿದ ನಿಮಿತ್ಯ ನೀವೇ ಲಿಂಗವಾದ ಕಾರಣ ಆ ಲಿಂಗವೇ ನಿಮ್ಮ ಅಂಗವಾಗಿ, ಆ ಜಂಗಮವೇ ನಿಮ್ಮ ಪ್ರಾಣವಾಗಿ ಗುರುವೇ ನಿಮ್ಮ ಆಚರಣೆಯಾಗಿರ್ದ ನಿಮಿತ್ತ ಅದೇ ಗುರುವೇ ನಿಮ್ಮ ವಾಙ್ಮನದಲ್ಲಿ, ಅದೇ ಲಿಂಗವೇ ನಿಮ್ಮ ಕರಕಮಲದಲ್ಲಿ, ಅದೇ ಜಂಗಮವೇ ನಿಮ್ಮ ವಿಗ್ರಹದಲ್ಲಿ, ನೆಲೆಗೊಂಡಿರ್ಪುದೆಂದು ಸಂಬಂಧಿಸಿ ಕೊಟ್ಟಲ್ಲಿ, ಆ ಗುರುವು ಹೇಳಿದಂಥ ಪತಿವ್ರತಾ ಧರ್ಮವು ತಿಳಿಯದೆ ತಾವು ಆಚರಿಸಿದ ಕಾರಣ, ಆಯಾಯ ತತ್ಕಾಲದಲ್ಲಿ ಕ್ರಿಯಕ್ಕೆ ಬಂದೊದಗುವವು. ಅದೇ ಸಮರಸಾಚರಣೆಯ ಉಪಚಾರವು. ನೀವು ಯಾವ ಸ್ಥಲವನ್ನು ಹಿಡಿದು ಆಚರಿಸಿದರೂ ಆಯಾಯ ಸ್ಥಲಂಗಳಲ್ಲಿ ಆರು ಸ್ಥಲಂಗಳು ಬಂದು ಸಂಬಂಧವಾಗುವುವು. ಮಿಕ್ಕಿನ ಗುರೂಪದೇಶವಿಲ್ಲದೆ ಶುದ್ಧ ಶೈವರಿಗೆ ಗುರುವು ಅಷ್ಟುಷ್ಟು ಜಪ ಶಿವಾರ್ಚನೆಯ ಹೇಳಿ ಹೀಗೆ ಆಚರಿಸು ಎಂದು ಅರುಹಿ ಕೊಟ್ಟಲ್ಲಿ, ಅವರಿಗೆ ಒಂದೇ ಸ್ಥಲವು ಸಂಬಂಧವು. ಅವರಿಗೆ ಮತ್ತೊಂದು ಸ್ಥಲದ ಮರ್ಮವನ್ನು ಗುರುವು ಅರುಹಿ ಕೊಡಲಿಲ್ಲ. ಏನು ಕಾರಣವೆಂದೊಡೆ, ಅವರು ಅಶಕ್ತರಾದ ನಿಮಿತ್ಯ. ಅವರು ಖಂಡಿತಾಚರಣೆಯುಳ್ಳವರು. ಅವರಿಗೆ ಸಮರಸಾಚರಣೆ ಹೊಂದದ ನಿಮಿತ್ಯ ಅವರು ಮೂರು ಜನ್ಮಕ್ಕೆ ಮುಕ್ತರು. ಅದರಲ್ಲಿ ತಪ್ಪಿ ನಡೆದರೆ ನೂರು ಜನ್ಮಕ್ಕೆ ಮುಕ್ತರು. ಎರಡನು ಬಳಸಿ ನಡೆದರೆ ಸಹಸ್ರ ಜನ್ಮಕ್ಕೆ ಮುಕ್ತರು. ಹಾಂಗಾದರೂ ಖಂಡಿತ ಮುಕ್ತರಲ್ಲದೆ ನಿಜ ಮುಕ್ತರಲ್ಲ. ಇದನರಿತು ಶ್ರೀ ಗುರುನಾಥನು ಅವರಿಗೆ ತಕ್ಕಂಥ ನಡತೆಯನು ಅರುಹಿಕೊಡುವರಲ್ಲದೆ ಹೆಚ್ಚಾಗಿ ಅರುಹಿ ಕೊಡರು ಕೂಡಲ ಚೆನ್ನಸಂಗಮದೇವಾ.

೧೪೯. ಲಿಂಗಭಾಜನದಲ್ಲಿ ಸಹಭೋಜನ ಮಾಡುವೆವೆಂಬರು. ಲಿಂಗಭಾಜನದಲ್ಲಿ ಸಹಭೋಜನವ ಮಾಡುವವರ ನೋಡಿರೇ. ಕಾಮ,

ಕ್ರೋಧ, ಲೋಭ, ಮೋಹ, ಮದ, ಮತ್ಸರ ಆಶೆಯುಳ್ಳನ್ನಕ್ಕರ ಲಿಂಗ ಭಾಜನದಲ್ಲಿ ಸಹಭೋಜನವ ಮಾಡುವವರ ನೋಡಿರೇ. ಹಸಿವು, ತೃಷೆ, ನಿದ್ರೆ, ಜಡ, ಆಲಸ್ಯ, ವ್ಯಸನ ಉಳ್ಳನ್ನಕ್ಕರ ಲಿಂಗಭಾಜನದಲ್ಲಿ ಸಹಭೋಜನವ ಮಾಡುವ ಪರಿ ಎಂತೊ ? ಇಂತಿವೆಲ್ಲವ ಜರಿದು ಗುರುಲಿಂಗ ಜಂಗಮನೇಕ ಮಾಡಿದಂಗಲ್ಲದೆ ಸಹಭೋಜನವೆಲ್ಲಿಯದೋ ಕೂಡಲ ಚೆನ್ನಸಂಗಯ್ಯ ?

೧೫೦. ಏಕ ಭಾಜನ, ಏಕಭಾಜನವೆಂದೆಂಬರು. ನಾವಿದನರಿಯೆವಯ್ಯ. ಅಂಗದ ಮೇಲೆ ಪ್ರಾಣಲಿಂಗ ಪ್ರತಿಷ್ಠೆಯಾದ ಬಳಿಕ ಲಿಂಗಕ್ಕೆಯೂ ತನಗೆಯೂ ಏಕ ಭಾಜನವಲ್ಲದೆ ಬೇರೆ ಭಿನ್ನಭಾಜನ ಉಂಟೆ ? ಲಿಂಗಕ್ಕೆಯೂ ತನಗೆಯೂ ಏಕಭಾಜನವಾಗದನ್ನಕ್ಕರ ಅಂಗದ ಕಳೆಯಲ್ಲಿ ಲಿಂಗವ ಧರಿಸಿಕೊಳಬಹುದೆ ? ಇದನರಿದು ಏಕ ಭಾಜನವಾಗಿರ್ದರೆ ಅಂತು ದೋಷ. ಅರಿಯದೆ ಏಕಭಾಜನವಾದಡೆಂತು ದೋಷ ? ಈ ಕುಳಸ್ಥಳದ ಭೇದವ ಭೇದಿಸಬಲ್ಲ ಕೂಡಲ ಚೆನ್ನಸಂಗಾ ನಿಮ್ಮ ಶರಣ.

## ವಿಭೂತಿ

೧೫೧. ಅಂ್ಯ ಶ್ರೀ ವಿಭೂತಿಯ ಧರಿಸುವ ಭೇದವೆಂತೆಂದೊಡೆ, ಸಹಜಲಿಂಗಧಾರಕರು ಎಂಟು ಸ್ಥಾನದಲ್ಲಿ ಧರಿಸುವರಯ್ಯ. ಕ್ರಿಯಾದೀಕ್ಷಾನ್ವಿತರಾದ ಉಪಾಧಿ ಭಕ್ತರು ೧೬ ಸ್ಥಾನದಲ್ಲಿ ಧರಿಸುವರಯ್ಯ. ಕ್ರಿಯಾದೀಕ್ಷೆ ಮಂತ್ರದೀಕ್ಷೆಯುಕ್ತವಾದ ನಿರುಪಾಧಿ ಭಕ್ತರು ೩೨ ಸ್ಥಾನದಲ್ಲಿ ಧರಿಸುವರಯ್ಯ. ಕ್ರಿಯಾದೀಕ್ಷೆ ಮಂತ್ರದೀಕ್ಷೆ ವೇಧಾದೀಕ್ಷೆ ಸಚ್ಚಿದಾನಂದ ದೀಕ್ಷೆಯುಕ್ತವಾದ ನಿರ್ವಂಚಕ ಭಕ್ತರು ೪೪ ಸ್ಥಾನದಲ್ಲಿ ಧರಿಸುವರಯ್ಯ. ಕ್ರಿಯಾ ಮಂತ್ರ ವೇಧಾಸಚ್ಚಿದಾನಂದ ನಿರ್ವಾಣಪದ ದೀಕ್ಷಾನ್ವಿತರಾದ ಸದ್ಭಕ್ತ ಶರಣಗಣಗಳು ಆಪಾದ ಮಸ್ತಕ ಪರಿಯಂತರ ಸ್ನಾನಧೂಳನವ ಮಾಡಿ ೬೮ ಸ್ಥಾನದಲ್ಲಿ ಮಂತ್ರಸ್ಮರಣೆಯಿಂದ ತ್ರಿಮಂತ್ರವ ಧರಿಸುವರಯ್ಯ ಕೂಡಲ ಚೆನ್ನಸಂಗಮದೇವಾ.

೧೫೨. ಅಯ್ಯ ಸಹಜಲಿಂಗಧಾರಕ ಭಕ್ತ ಉಪಾಧಿಭಕ್ತರು ಗುರು ಪಾದೋದಕದಲ್ಲಿ ಸಮ್ಮಿಶ್ರವ ಮಾಡಿ ಧರಿಸುವದಯ್ಯ. ನಿರುಪಾಧಿ ಭಕ್ತ ಸಹಜಭಕ್ತರು ಗುರುಪಾದೋದಕ ಲಿಂಗಪಾದೋದಕ ಸಮ್ಮಿಶ್ರವ ಮಾಡಿ ಷಡಕ್ಷರಮಂತ್ರ ಸ್ಥಾಪಿಸಿ ಧರಿಸುವದಯ್ಯ. ನಿರ್ಣಂಜಕಭಕ್ತ ನಿರ್ವಾಣ ಶರಣಗಣಂಗಳು ಗುರುಪಾದೋದಕದಲ್ಲಿ ಘಟ್ಟಿಯು ಕಟ್ಟಿ ಲಿಂಗಪಾದೋದಕವ ಆ ಘಟ್ಟಿಗೆ ಸಮ್ಮಿಶ್ರವ ಮಾಡಿ ಆದಿಪ್ರಣವಗಳಾರು ಅನಾದಿ ಪ್ರಣವಗಳಾರು ಚಿತ್ಕಲಾ ಪ್ರಸಾದ ಪ್ರಣವಗಳಾರು ನಿಃಕಳಂಕ ಚಿತ್ಕಲಾ ಮೂಲ ಪ್ರಣವ ಮೂರು ಇಂತು ೨೧ ಪ್ರಣವಂಗಳಂ ಸ್ಥಾಪಿಸಿ ಜಂಗ ಮಾಮೂರ್ತಿಗಳು ಧರಿಸಿದಮೇಲೆ ಧರಿಸುವದಯ್ಯ. ಹೀಗೆ ಧರಿಸಿದವರಿಗೆ ನಿಜಕೈವಲ್ಯಪದವಾಗುವದೆಂದಾತ ನಮ್ಮ ಕೂಡಲ ಚೆನ್ನಸಂಗಮದೇವಾ.

೧೫೩. ಅಯ್ಯಾ ಶ್ರೀ ವಿಭೂತಿಯು ಸತ್ಕ್ರಿಯೆಯಿಂದ ಧರಿಸುವ ಭೇದ ವೆಂತೆಂದೊಡೆ, ಆವ ವರ್ಣದ ಗೋವಾದರೂ ಸರಿಯೇ. ಅವಯವಂ ಗಳು ನ್ಯೂನವಿಲ್ಲದೆ ಬರೆಗಳ ಹಾಕದಂಥ ಆಕಳವ ತಂದು ಗೋಮಯವ ಸ್ವಚ್ಛವಾದ ಸ್ಥಳದಲ್ಲಿ ಒಟ್ಟುಮಾಡಿ ಒಣಗಿಸಿ ಕ್ರಿಯಾಗ್ನಿಯಿಂದ ದಹಿ ಸಿದ ಬೂದಿಯು ಧೂಳ ಪಾದೋದಕದಲ್ಲಿ ಶೋಧಿಸಿ, ಅದರೊಳಗಣ ತಿಳಿಯ ತೆಗೆದು ಘಟ್ಟಿಯ ಮಾಡಿ, ಪೂರ್ವದಲ್ಲಿ ಹೇಳಿದ ವಚನೋಕ್ತಿ ಯಿಂದ ಧರಿಸಿದ ಲಿಂಗಧಾರಕ ಭಕ್ತರಿಗೆ ಗುರುದೀಕ್ಷೆಯುಂಟಾಗುವ ದಯ್ಯ. ಉಪಾಧಿ ಭಕ್ತಂಗೆ ಗುರುಲಿಂಗ ಜಂಗಮದ ಸದ್ಭಕ್ತಿ ದೊರೆವು ದಯ್ಯಾ. ನಿರುಪಾಧಿ ಭಕ್ತಂಗೆ ತ್ರಿವಿಧ ಪಾದೋದಕ ಪ್ರಸಾದ ದೊರೆವು ದಯ್ಯಾ. ಸಹಜ ಭಕ್ತಂಗೆ ನಿರ್ವಾಣ ಪದವಾಗುವದಯ್ಯಾ. ನಿರ್ವಾಣ ಭಕ್ತಂಗೆ ನಿಃಕಳಂಕ ಜ್ಯೋತಿರ್ಮಯ ಪರಶಿವಲಿಂಗದಲ್ಲಿ ಕೂಟಸ್ಥನಾಗಿ ನಿರಂಜನ ಜಂಗಮದಲ್ಲಿ ಕೂಡಿ ಹರಗಣ ಸಹವಾಗಿ ನಿರಾವಯವ ಸಮಾಧಿ ತಪ್ಪದು ನೋಡಾ ಕೂಡಲ ಚೆನ್ನಸಂಗಮದೇವಾ.

## ರುದ್ರಾಕ್ಷಿ-ಮಂತ್ರ

೧೫೪. ಅಯ್ಯಾ ಕ್ರಿಯಾ ವಿಭೂತಿಯ ಧರಿಸಿದ ಭಕ್ತನು ಚಿದ್ರುದ್ರಾ ಕ್ಷಿಯ ಧರಿಸಿ ಮಂತ್ರ ಧ್ಯಾನವ ಮಾಡಬೇಕಾದ ನಿಮಿತ್ಯ, ಪ್ರಥಮದಲ್ಲಿ

ರುದ್ರಾಕ್ಷಿ ಮಣಿಗಳ ಕ್ರಯವ ಮಾಡದೆ ಅವರು ಹೇಳಿದಂತೆ ಕ್ರಯವ ಕೊಟ್ಟು ಮುಖಭಿನ್ನವಾದುದನುಳಿದು ಸ್ವಚ್ಛವಾದ ರುದ್ರಾಕ್ಷಿಗಳ ಶ್ರೀ ಗುರುಲಿಂಗ ಜಂಗಮದ ಸನ್ನಿಧಿಗೆ ತಂದು ವೃತ್ತಸ್ಥಾನದ ಪರಿಯಂತರವು ಧೂಳ ಪಾದೋದಕವ ಮಾಡಿ ಆ ರುದ್ರಾಕ್ಷಿಯ ಪೂರ್ವಾಶ್ರಯವ ಕಳೆದು ಲಿಂಗಧಾರಕ ಭಕ್ತರಿಂದ ಗುರುಪಾದೋದಕ ಮೊದಲಾಗಿ ಶಿವಪಂಚಾಮೃತದಿಂದ ಇಪ್ಪತ್ತೊಂದು ಪೂಜೆಯ ಮಾಡಿಸಿ, ಆಮೇಲೆ ಶ್ರೀ ಗುರುಲಿಂಗ ಜಂಗಮದ ಪಾದಪೂಜೆಗೆ ಧರಿಸಿ, ಆಮೇಲೆ ಲಿಂಗ ಜಂಗಮಕ್ಕೆ ಸಮರ್ಪಿಸಿ, ಅದರಿಂದ ದಯ ಚಿತ್ತವ ಪಡೆದು, ಶರಣ್ಭೋಕ್ಕು ಮಹಾಪ್ರಸಾದವೆಂದು ಬೆಸಗೊಂಡು ಅ ಕರುಣಾ ಕಟಾಕ್ಷ ಮಾಲೆಗಳ ಭಿನ್ನವಿಟ್ಟರ್ಚಿಸದೆ ಅಭಿನ್ನ ಸ್ವರೂಪು ಮುಂದುಗೊಂಡು ಒಹು ಸುಯಿಧಾನದಿಂದ ತನ್ನ ತೊಡೆಯ ಮೇಲೆ ಮೂರ್ತವ ಮಾಡಿಕೊಂಡು ತನ್ನ ಜ್ಞಾನ ಪ್ರಕಾಶವೆಂದು ಭಾವಿಸಿ ತನ್ನ ತಾನರ್ಪಿಸಿ ಮಂತ್ರ ಧ್ಯಾನರೂಢನಾಗಿ ತತ್ತನ್ ಸ್ಥಾನದಲ್ಲಿ ಧರಿಸುವದಯ್ಯ. ಇಂತು ವಿಭೂತಿ ರುದ್ರಾಕ್ಷಿಯ ಧರಿಸಿ ಲಿಂಗನಿಷ್ಟಾಪರನಾದ ಭಕ್ತನ ಸ್ಥಲ ಮೆಟ್ಟಿಗೆಯಿಂದ ಆಯಾಯ ಮಂತ್ರವ ಹೇಳುವರಯ್ಯ. ಅದರ ವಿಚಾರವೆಂತೆಂದೊಡೆ, ಕ್ರಿಯಾದೀಕ್ಷೆ ಯುಕ್ತವಾದ ಉಪಾಧಿ ಭಕ್ತಂಗೆ ಗುರುಮಂತ್ರವ ಹೇಳುವದಯ್ಯ ಕ್ರಿಯಾದೀಕ್ಷೆಯ ಪಡೆದು ಗುರುಲಿಂಗ ಜಂಗಮದಲ್ಲಿ ಅರ್ಥ ಪ್ರಾಣಾಭಿಮಾನಂಗಳ ನಿರ್ವಂಚಕತ್ವದಿಂದ ಸಮರ್ಪಿಸಿ ನಡೆನುಡಿ ಸಂಪನ್ನನಾದ ನಿರುಪಾಧಿ ಭಕ್ತಂಗೆ ಲಿಂಗಮಂತ್ರವ ಹೇಳುವುದಯ್ಯ. ಇವರಿಬ್ಬರಾಚರಣೆಯ ಪಡೆದು ಸಮಸ್ತ ಭೋಗಾದಿಗಳ ನೀಗಿ ಸಚ್ಚಿದಾನಂದನಾದ ಸಹಜ ಭಕ್ತಂಗೆ ಜಂಗಮ ಮಂತ್ರವ ಹೇಳುವದಯ್ಯ. ಆ ಮಂತ್ರಂಗಳಾವಾವೆಂದಡೆ, ಶಕ್ತಿ ಪ್ರಣಮ ೧೨ ಗುರುಮಂತ್ರವೆನಿಸುವುದಯ್ಯ. ಶಿವ ಪ್ರಣಮ ೧೨ ಲಿಂಗ ಪ್ರಾಣವೆನಿಸುವುದಯ್ಯ. ಶಿವಶಕ್ತಿ ರಹಿತವಾದ ೧೨ ಜಂಗಮ ಮಂತ್ರವೆನಿಸುವುದಯ್ಯ. ಇಂತು ವಿಚಾರದಿಂದ ಉಪಾಧಿ ನಿರುಪಾಧಿ ಸಹಜ ಭಕ್ತ ಮಾಹೇಶ್ವರರಾಚರಿಸುವುದಯ್ಯ.

ಇನ್ನು ನಿರಾಭಾರಿ ವೀರಶೈವ ನಿರ್ವಾಣ ಸದ್ಭಕ್ತ ಜಂಗಮ ಶರಣ ಗಣಂಗಳು ಶುದ್ಧ ಪ್ರಸಾದ ಪ್ರಣವ ೧೨, ಸಿದ್ಧ ಪ್ರಸಾದ ಪ್ರಣವ ೧೨,

ಪ್ರಸಿದ್ಧ ಪ್ರಸಾದ ಪ್ರಣವ ೧೨, ಇಂತು ವಿಚಾರದಿಂದ ೩೬ ಪ್ರಣವನೊಡ ಗೂಡಿ ಶುದ್ಧ ಪ್ರಸಾದ ಪ್ರಣವ ಆಚಾರಲಿಂಗ ಗುರುಲಿಂಗ ಇಷ್ಟಲಿಂಗ ಪರಿಯಂತರ ತ್ರಿವಿಧ ಲಿಂಗಕ್ಕೆಂದು ಮಾಡುವುದಯ್ಯ. ಸಿದ್ಧ ಪ್ರಸಾದ ಪ್ರಣವ ಶಿವಲಿಂಗ ಜಂಗಮಲಿಂಗ ಪ್ರಾಣಲಿಂಗ ಪರಿಯಂತರ ತ್ರಿವಿಧ ಲಿಂಗಕ್ಕೆಂದು ಮಾಡುವದಯ್ಯ. ಪ್ರಸಿದ್ಧ ಪ್ರಸಾದ ಪ್ರಣವದ ಪ್ರಸಾದ ಲಿಂಗ ಮಹಾಲಿಂಗ ಭಾವಲಿಂಗ ಪರಿಯಂತರ ತ್ರಿವಿಧ ಲಿಂಗಕ್ಕೆಂದು ಮಾಡುವುದಯ್ಯ. ಹೀಗೆ ಹರುಕಿಲ್ಲದೆ ಸ್ಥಲ ಮೆಟ್ಟಿಗೆಯಿಂದ ಕರುಣಿಸಿದ ಗುರುವಿಂಗೆ ಬೆಸಗೊಂಡ ಶಿಷ್ಯೋತ್ತಮಂಗೆ ಆಯಾಯ ಲಿಂಗ ನಿಜ ಪ್ರಸಾದ ಒದಗುವದೆಂದಾತ ನಮ್ಮ ಕೂಡಲ ಚೆನ್ನಸಂಗಮದೇವಾ.

———————

## ಪಂಚಾಚಾರಗಳು

೧೫೫. ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರ– ಈ ಪಂಚಾಚಾರದ ಆಚರಣೆ ಎಂತೆಂದೊಡೆ, ಲಿಂಗವಲ್ಲದೆ ಅನ್ಯವನರಿಯದಿಹುದೇ ಲಿಂಗಾಚಾರ, ಸಜ್ಜನ ಕಾಯಕದಲ್ಲಿ ತಂದು ಗುರುಲಿಂಗ ಜಂಗಮಕ್ಕೆ ಮಾಡಿ ನೀಡಿ ನಿತ್ಯನಾಗಿಹುದೇ ಸದಾಚಾರ, ಶಿವಭಕ್ತರಲ್ಲಿ ಜಾತಿವರ್ಣ ಆಶ್ರಮವನರಸದೆ ಅವರೊಕ್ಕುದ ಕೊಂಬುದೇ ಶಿವಾಚಾರ, ಶಿವಾಚಾರದ ನಿಂದೆಯ ಕೇಳದಿಹುದೇ ಗಣಾಚಾರ, ಶಿವ ಶರಣರೇ ಹಿರಿಯರಾಗಿ ತಾನೇ ಕಿರಿಯನಾಗಿ ಭಯಭಕ್ತಿಯಿಂದ ಆಚರಿಸುವುದೇ ಭೃತ್ಯಾಚಾರ. ಇಂತೀ ಪಂಚಾಚಾರವುಳ್ಳ ಭಕ್ತರ ಒಕ್ಕುದನಿಕ್ಕಿ ಸಲಹಯ್ಯ ಪ್ರಭುವೇ ಕೂಡಲ ಚೆನ್ನಸಂಗಮದೇವಾ.

## ಸಪ್ತಾಚಾರಗಳು

೧೫೬. ಮಲ ಮಾಯಾ ಪಾತಕ ಸೂತಕ ರಹಿತನಾದ ದೀಕ್ಷಾಗುರು ಶಿಕ್ಷಾಗುರು ಜ್ಞಾನಗುರುವಿಂದ ವೇಧಾ ಮಂತ್ರ ಕ್ರಿಯಾದೀಕ್ಷೆಯ ಪಡೆದು ದ್ವಾದಶ ಮಲಪಾಶ ಕರ್ಮವ ತ್ಯಜಿಸಿ ಮನ ಮಾರುತ ಮೊದಲಾದ ದ್ವಾದಶ ಇಂದ್ರಿಯಂಗಳ ಗುರುಪಾದ ಜಲದಿಂದ ಪ್ರಕ್ಷಾಲಿಸಿ ದಂತ ಪಂಕ್ತಿ ಕ್ರಿಯೆಗಳ ಮಾಡಿ, ಕಟಿಸ್ನಾನ, ಕಂಠಸ್ನಾನ, ಮಂಡೆಸ್ನಾನ, ಸರ್ವಾಂಗ ಸ್ನಾನವ ಮಾಡಿ, ಕ್ರಿಯಾ ಭಸಿತದಿಂದ ಸ್ನಾನ ಧೂಳನ ಧಾರಣ ಮರ್ಮಾಂಗಳ ತಿಳಿದಾಚರಿಸಿ, ಸಾಕಾರ ನಿರಾಕಾರ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಲಿಂಗ ಜಂಗಮವನರ್ಚಿಸಿ, ನಿರ್ವಂಚಕತ್ವದಿಂದ ಘನಪಾದ ತೀರ್ಥ ಪ್ರಸಾದ ಮಂತ್ರದಲ್ಲಿ ನಿಂದ ನಿಜಾವಸ್ಥೆಯೇ ಕ್ರಿಯಾಚಾರವೆಂಬೆನಯ್ಯಾ.

ಅಂತರಂಗದಲ್ಲಿ ಕರಣ ವಿಷಯ ಕರ್ಕಶದಿಂದಹಂಕರಿಸಿ ಗುರುಹಿರಿಯರಲ್ಲಿ ಸಂಕಲ್ಪ ವಿಕಲ್ಪಗಳಿಂದ ಕುಂದು ನಿಂದೆ ಹಾಸ್ಯ ರೋಷವೆಂಬ ಅಜ್ಞಾನವ ಬಳಿಸದೆ ಪರಮಪಾತಕರ ದರ್ಶನ ಸ್ಪರ್ಶನ ಸಂಭಾಷಣೆ ಸಮಪಂಕ್ತಿ ಪಾಕವ ಕೊಳ್ಳದೆ, ಸತ್ಯ ನಡೆನುಡಿಯುಳ್ಳ ಶಿವ ಶರಣ

ಗಣಂಗಳಲ್ಲಿ ಷಡ್ವಿಧ ಭಕ್ತಿ ಮುಂದುಗೊಂಡು ಎರಡೆಂಬತ್ತುಕೋಟಿ ವಚನಾನುಭಾವದಲ್ಲಿ ನಿಂದ ನಿಲುಕಡೆಯೇ ಜ್ಞಾನಾಚಾರವೆಂಬೆನಯ್ಯ.

ತನುವಿನ ವಿಕಾರದಿಂದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ಬಳಕೆಯ ಮಾಡದೆ, ಲೋಕದಂತೆ ನಡೆನುಡಿಗಳ ಬಳಸದೆ ತನ್ನ ಗುಣಾವಗುಣಂಗಳ ಸ್ವಾತ್ಮಾನುಭವದಿಂದ ಅರಿದು ದುರ್ಗುಣವ ತ್ಯಜಿಸಿ ಸದ್ಗುಣವ ಹಿಡಿದು ಬಿಡದಿರ್ಪುದೇ ಭಾವಾಚಾರವೆಂಬೆನಯ್ಯ

ಕೊಡುವಲ್ಲಿ ಕೊಂಬಲ್ಲಿ ಅತಿ ಆಶೆಯಿಂದ ಹುಸಿನುಡಿಯ ನುಡಿಯದೆ ಕೊಟ್ಟ ಭಾಷೆಯ ಪ್ರಾಣಾಂತ್ಯ ಬಂದರೂ ನುಡಿಯಂತೆ ನಡೆವುದೇ ಸತ್ಯಾಚಾರವೆಂಬೆ ನೋಡಾ.

ಕಾಲ ಕಾಮುಗಳ ಬಾಧೆಗೊಳಗಾದ ಹಠಯೋಗದ ಕಟ್ಟುಮುಟ್ಟು ಸೋಂಕುಗಳಿಲ್ಲದೆ ಲಿಂಗಾಣತಿಯಿಂ ಬಂದೊದಗಿದ ಪರಿಣಾಮ ಪ್ರಸಾದದಲ್ಲಿ ಲೋಲುಪ್ತನಾಗಿರ್ಪುದೇ ನಿತ್ಯಾಚಾರವೆಂಬೆ ನೋಡಾ.

ಸರ್ವಾವಸ್ಥೆಯಲ್ಲಿ ದಶವಿಧ ಪಾದೋದಕ ಏಕಾದಶ ಪ್ರಸಾದ ಮೂವತ್ತಾರು ಪ್ರಣವ ಮೊದಲಾದ ಮಹಾಮಂತ್ರಂಗಳಲ್ಲಿ ಎರಕತ್ವವನುಳ್ಳುದೇ ಧರ್ಮಾಚಾರವೆಂಬೆ ನೋಡಾ.

ಇಂತೀ ಮರ್ಮವ ಗುರುಕೃಪೆಯಿಂದರಿದು ಆಚಾರವೇ ಅಂಗ ಮನ ಪ್ರಾಣ ಭಾವಂಗಳಾಗಿ ಇಹಪರಂಗಳ ಮೀರಿ ಪಿಂಡಾದಿ ಜ್ಞಾನಶೂನ್ಯಾಂತಮಾದ ಏಕೋತ್ತರ ಮಾರ್ಗದಲ್ಲಿ ನಿಂದು ಬಯಲೊಳಗೆ ಬಚ್ಚಬರಿಯ ನಿರವಯುವ ಸಾಧಿಸುವುದೇ ಸರ್ವಾಚಾರ ಸಂಪತ್ತಿನಾಚಾರದ ನಿಲುಕಡೆ ನೋಡಾ.

ಇಂತು ಆಚಾರದ ಕುರುಹ ತಿಳಿದು ಪಂಚಾಚಾರವ ಬಹಿಷ್ಕರಿಸಿ, ಸಪ್ತಾಚಾರವ ಗೋಪ್ಯವ ಮಾಡಿ ದರಿದ್ರಗೆ ನಿಧಿನಿಧಾನ ದೊರೆತಂತೆ, ರೋಗಿಗೆ ವೈದ್ಯಲತೆ ದೊರೆತಂತೆ, ಮೂಕ ಫಲ ಸವಿದಂತೆ, ಕಳ್ಳಗೆ ಚೇಳೂರಿದಂತೆ, ತಮ್ಮ ಚಿದಂಗ ಸ್ವರೂಪವಾದ ಶರಣ ಗಣಂಗಳಲ್ಲಿ ಉಸುರಿ, ದುರ್ಜನರಲ್ಲಿ ಬಳಸದೆ ನಿಂದ ಪರಮಸುಖಿ ನಿಮ್ಮ ಶರಣರಲ್ಲದೆ ಉಳಿದ ಕಣ್ಣುಗೆಟ್ಟಣ್ಣಗಳೆತ್ತ ಬಲ್ಲರಯ್ಯ ಕೂಡಲ ಚೆನ್ನಸಂಗಮದೇವಾ.

# ಕಲ್ಯಾಣ ಪಟ್ಟಣದ ವರ್ಣನೆ

೧೫೭೭. ಸ್ವಸ್ತಿ ಸಮಸ್ತ ಪ್ರಶಸ್ತ ಸಹಿತ ಶ್ರೀಮತ್ಕಲ್ಯಾಣ ಪುರದ ಮಹಾತ್ಮ್ಯೆ ಎಂತೆಂದೊಡೆ, ವಿಸ್ತರಿಸಿ ಪೇಳುವೆನು ಎಲ್ಲ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯಾ. ಹದಿನಾಲ್ಕು ಭುವನಕ್ಕೆ ಕಲಶವೆಂದೆನಿಸುವ ರುದ್ರಲೋಕವ ಮರ್ತ್ಯಲೋಕಕ್ಕೆ ತಂದು, ಕಲ್ಯಾಣವೆಂಬ ಪುರವಾಗಿ ಹುಟ್ಟಿತ್ತು ನೋಡಿರಯ್ಯಾ. ಅಲ್ಲಿ ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು, ಪರಮ ಶಿವಯೋಗಿಗಳು, ಶಿವಾನುಭಾವ ಸಂಪನ್ನರು, ಶಿವಲಿಂಗ ಪ್ರಾಣಿಗಳು, ಶಿವಪ್ರಸಾದ ಪಾದೋದಕ ಸಂಬಂಧಿಗಳು, ಶಿವಾಚಾರ ವೇದ್ಯರು, ಶಿವಾಗಮಸಾಧ್ಯರು, ಶಿವಸಮಯ ಪಕ್ಷರುಗಳಲ್ಲದೆ ಮತ್ತಾರು ಅಲ್ಲಿಲ್ಲ ನೋಡಿರಯ್ಯಾ. ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಹೋಗಬಾರದು ಕಲ್ಯಾಣವ. ಮೀರಿ ಹೊಕ್ಕಿಹೆನೆಂಬವರಿಗೆ ಬಾಗಬಾಯಿಧಾರೆ ನೋಡಯ್ಯಾ. ಆ ಮಹಾಕಲ್ಯಾಣದ ವಿಸ್ತಾರ ತಾನೆಂತೆಂದೊಡೆ, ಹನ್ನೆರಡು ಯೋಜನ ಪರಿ ಪ್ರಮಾಣದ ವಿಸ್ತೀರ್ಣ ಪಟ್ಟಣಕ್ಕೆ ಮುನ್ನೂರರವತ್ತು ಬಾಗಿಲುವಾಡ, ಆ ಬಾಗಿಲಿಂಗೆ ನೂರುಐವತ್ತೈದು ವಜ್ರದ ಹಾರೆಯ ಕದಂಗಳು, ಇನ್ನೂರಿಪ್ಪತ್ತೈದು ಕಲುಗೆಲಸದ ದ್ವಾರವಟ್ಟಕ್ಕೆ ನಾನೂರುಐವತ್ತು ಸುವರ್ಣದ ಕೆಲಸದ ಕದಂಗಳು, ಅಲ್ಲಿ ನೂರು ಹದಿನೈದು ಚೋರಗುಂಡಿ, ಅದಕ್ಕೆ ನೂರು ಹದಿನೈಗು ನೊಳೆಯ ಕಂದಗಳು, ಇಪ್ಪತ್ತು ಬಾಗಿಲು ಆವಾರಿಯಾಗಿಪ್ಪವಾಗಿ, ಅದಕ್ಕೆ ಕದಂಗಳಿಲ್ಲ. ಆ ಪಟ್ಟಣಕ್ಕೆ ಬಳಸಿ ಬಂದ ಕೋಟೆ ಸಲತ್ತೆಂಟು ಯೋಜನ ಪರಿಪ್ರಮಾಣು. ಬಾಹತ್ತರ ಮನೆ ಲಕ್ಷ, ಮಾಂಡಲಿಕರ ಮನೆ ಲಕ್ಷ, ಸಾವಂತರ ಮನೆ ಲಕ್ಷ. ರಾಯ ರಾವುತರ ಮನೆಯೊಳಡಗಿಹ ಮನೆಗಳಿಗೆ ಲೆಕ್ಕವಿಲ್ಲ. ದ್ವಾದಶ ಯೋಜನ ವಿಸ್ತೀರ್ಣ ಸೂರ್ಯವೀಧಿ ನೂರಿಪ್ಪತ್ತು. ದ್ವಾದಶ ಯೋಜನ ಸೋಮವೀಧಿ ನೂರಿಪ್ಪತ್ತೈದು. ಅದಕ್ಕೆ ಮಿಗಿಲಾದ ಒಳಕೇರಿ ಹೊರಕೇರಿಗೆ ಗಣನೆ ಇಲ್ಲ. ಆ ಪಟ್ಟಣದೊಳಗೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಶಿವಾಲಯ. ಆ

ಶಿವಾಲಯಂಗಳಿಗೆ ಮುಖ್ಯವಾದ ತ್ರಿಪುರಾಂತಕ ದೇವರ ಶಿವಾಲಯ. ಮುನ್ನೂರರುವತ್ತು ಪದ್ಮಪತ್ರ ತೀವಿದ ಸರೋವರಂಗಳು ಎರಡುಲಕ್ಷವು. ಎಂಭತ್ತೈದು ಸಾವಿರದ ಏಳನೂರೆಪ್ಪತ್ತು ದಾಸೋಹದ ಮಠಗಳು. ಆ ದಾಸೋಹದ ಮಠಂಗಳಿಗೆ ಮುಖ್ಯವಾದ ಬಸವರಾಜದೇವರ ಮಠದ ವಿಸ್ತೀರ್ಣ ಎಂತೆಂದಡೆ, ಯೋಜನವರೆಯ ಬಿನ್ನಾಣದ ಕಲುಗೆಲಸದ ಪೌಳಿ, ಅತಿ ಸೂಕ್ಷ್ಮದ ಕಸುರಿಗೆಲಸದ ದ್ವಾರವಟ್ಟವೈದು, ಪಂಚಾಕ್ಷರದ ಶಾಸನ ಮಿಸುನಿಯ ಕಂಭದ ತೋರಣಂಗಳಲ್ಲಿ ರುದ್ರಾಕ್ಷೆಯ ಸೂಸಕ, ಆ ಬಾಗಿಲುವಾಡದಲ್ಲಿ ಒಪ್ಪುತಿಪ್ಪವಯ್ಯಾ. ನಂದಿಯ ಕಂಭದ ಸುವರ್ಣ ದುಪ್ಪರಿಗೆ ಧ್ವಜ, ಉಪ್ಪರಗುಡಿ ಪತಾಕೆ, ವ್ಯಾಸನ ಧ್ವಜ ಒಪ್ಪುತಿಪ್ಪ ವಯ್ಯಾ! ಅದರ ಮಧ್ಯದಲ್ಲಿ ಬಸವರಾಜದೇವರ ಸಿಂಹಾಸನದ ವಿಸ್ತೀರ್ಣದ ಪ್ರಮಾಣು, ಸಹಸ್ರ ಕಂಭದ ಸುವರ್ಣದುಪ್ಪರಿಗೆ, ಆ ಮನೆಗೆತ್ತಿದ ಹೊನ್ನಕಲಶ ಸಾವಿರ, ಗುರುಲಿಂಗ ಜಂಗಮಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ, ನಾಲ್ಕು ಪರುಷ ಪ್ರಮಾಣದ ಘಾತ, ಅಲ್ಲಿ ತುಂಬಿದ ಪಾದೋದಕವ ತುಂಬನುಚ್ಚಲು, ಬೆಳೆವ ರಾಜಸಾಲೆಯ ಗದ್ದೆ ಹನ್ನೆರಡು ಖಂಡಗ. ಆ ಯೋಜನವರೆಯ ಬಿನ್ನಾಣದ ಅರಮನೆಯ ವಿಸ್ತೀರ್ಣದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ. ಇಂತೀ ಬಸವರಾಜದೇವರು ಮುಖ್ಯವಾದ ಅಸಂಖ್ಯಾತರ ಮಠಗಳು, ಆ ಕಲ್ಯಾಣದೊಳಗೆ ಎಷ್ಟು ಎಂದರೆ. ಹದಿನೆಂಟು ಸಾವಿರ ಕಟ್ಟಳೆಯ ನೇಮದ ಭಕ್ತರ ಮಠಂಗಳು ಇ(ಎ?)ಪ್ಪತ್ತೆಂಟು ಸಾವಿರ ಮಹಾಮನೆಗಳು, ಆ ಕಲ್ಯಾಣದೊಳಗೆ ಹತ್ತುಸಾವಿರ ನಿತ್ಯನೇಮಿಗಳ ಮಠಂಗಳು, ಹದಿನೈದು ಸಾವಿರ ಚಿಲುಮೆಯ ಅಗ್ಗವಣೆಯ ವ್ರತಸ್ಥರ ಮಠಂಗಳು, ಐದುಸಾವಿರ ವ್ರತನೇಮಿಗಳ ಕಟ್ಟಳೆಯ ಮಠಂಗಳು, ಹನ್ನೆರಡು ಸಾವಿರ ಅಚ್ಚಪ್ರಸಾದಿಗಳ ಮಠಂಗಳು ಒಂದು ಸಾವಿರ ಅರವತ್ತುನಾಲ್ಕು ಶೀಲಸಂಪನ್ನರ ಮಠಂಗಳು ಒಂದುಸಾವಿರ. ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹಿಗಳ ಮಠಂಗಳು ಮೂವತ್ತೆರಡು ಸಾವಿರ. ನಿತ್ಯ ಐನೂರು ಜಂಗಮಕ್ಕೆ ಒಲಿದು ದಾಸೋ

ಹವ ಮಾಡುವ ಸದಾಚಾರಿಗಳ ಮಠಂಗಳು ಐವತ್ತೆಂಟು ಸಾವಿರ. ನಿತ್ಯ ಸಾವಿರದ ನೂರುಜಂಗಮಕ್ಕೆ ಒಲಿದು ದಾಸೋಹವ ಮಾಡುವ ದಾಸೋಹಿಗಳ ಮಠಂಗಳು ಹನ್ನೊಂದುಸಾವಿರ. ನಿತ್ಯ ಆವಾರಿಯಿಂದ ಮಾಡುವ ಮಾಟಕೂಟದ ಸದ್ಭಕ್ತರ ಮಠಂಗಳು ಒಂದುಲಕ್ಷ. ಜಂಗಮಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ ಜಂಗಮ ಭಕ್ತರ ಮಠ ಎರಡುಸಾವಿರದ ಏಳನೂರೆಪ್ಪತ್ತು. ಅಂತು ಎರಡು ಲಕ್ಷವು ಎಂಬತ್ತೈದು ಸಾವಿರದ ಏಳುನೂರೆಪ್ಪತ್ತು ಅಸಂಖ್ಯಾತರಿಗೆ ಮುಖ್ಯವಾಗಿ ರುದ್ರಲೋಕದಿಂದಿಳಿತಂದ ಪ್ರಮಥ ಗಣಂಗಳ ಮಠಂಗಳು ಏಳುನೂರೆಪ್ಪತ್ತು. ಇಂತೀ ಮಹಾಪ್ರಮಥರಿಗೆ ಪುರಾತರಿಗೆ ಅಸಂಖ್ಯಾತ ಮಹಾಗಣಂಗಳಿಗೆ ಪ್ರಮಥ ನಾಯಕನಾಗಿ. ಏಕಮುಖ, ದಶಮುಖ, ಶತಮುಖ, ಸಹಸ್ರಮುಖ, ಲಕ್ಷಮುಖ, ಕೋಟಿಮುಖ, ಅನಂತಕೋಟಿಮುಖವಾಗಿ, ಭಕ್ತನಿಗೆ ಒಡನಾಡಿಯಾಗಿಪ್ಪನು ಸಂಗನಬಸವಣ್ಣನು ಜಗದಾರಾಧ್ಯ ಬಸವಣ್ಣನು, ಪ್ರಮಥಗುರು ಬಸವಣ್ಣನು, ಶರಣಸನ್ನಿಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ, ನಿತ್ಯನಿಜೈಕ್ಯ ಬಸವಣ್ಣ, ಷಡಸ್ಥಲ ಸಂಪನ್ನ ಬಸವಣ್ಣ, ಸರ್ವಾಚಾರ ಸಂಪನ್ನ ಬಸವಣ್ಣ, ಸರ್ವಾಂಗಲಿಂಗಿ ಬಸವಣ್ಣ, ಸುಜ್ಞಾನಭರಿತ ಬಸವಣ್ಣ, ನಿತ್ಯಪ್ರಸಾದಿ ಬಸವಣ್ಣ, ಸಚ್ಚಿದಾನಂದ ಮೂರ್ತಿ ಬಸವಣ್ಣ, ಸದ್ಯೋನ್ಮುಕ್ತಿರೂಪು ಬಸವಣ್ಣ, ಅಖಂಡಪರಿಪೂರ್ಣ ಬಸವಣ್ಣ, ಅಕಾಯಚಾರಿತ್ರ ಬಸವಣ್ಣ, ಅಸಾಧ್ಯ ಸಾಧಕ ಬಸವಣ್ಣ, ಅಭೇದ್ಯ ಭೇದಕ ಬಸವಣ್ಣ, ಅನಾಮಯ ಮೂರ್ತಿ ಬಸವಣ್ಣ, ಮಹಾಮಹಿಮಯ ಮಾಡಿದಾತ ಬಸವಣ್ಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ, ಶಿವಾಚಾರದ ಘನವ ಮೆರೆದಾತ ಬಸವಣ್ಣ, ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡಿ, ಪ್ರಬಲಿತವ ಮಾಡುವ ಅಶ್ವಪತಿ ಜಗಪತಿ ನರಪತಿರಾಯ ರಾಜಾಧಿರಾಜ ಬಿಜ್ಜಳರಾಯನು. ಆ ಬಸವಣ್ಣನು ಆ ಕಲ್ಯಾಣ ಪಟ್ಟಣದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯಂಗೈವುತ್ತಿರಲು, ಆ ಕಲ್ಯಾಣದ ನಾಮವ ಪಿಡಿದು, ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು. ಲೋಕದೊಳಗೆ

ಕಲ್ಯಾಣವೇ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣವ ದರುಶನವ ಮಾಡಿದರೆ, ಭವಂ ನಾಸ್ತಿ. ಇಂತಪ್ಪ ಕಲ್ಯಾಣವ ನೆನೆದರೆ ಪಾಪಕ್ಷಯ. ಇಂತಪ್ಪ ಕಲ್ಯಾಣದ ಮಹತ್ವವ ಕೇಳಿದರೆ ಕರ್ಮಕ್ಷಯುವಹುದು. ಮೋಕ್ಷ ಸಾಧ್ಯವಹುದು ಇದು ಕಾರಣ ಕೂಡಲ ಚೆನ್ನಸಂಗಮದೇವ ನಿಮ್ಮ ಭಕ್ತ ಬಸವಣ್ಣನಿದ್ದ ಠಾವೆ ಮಹಾಕಲ್ಯಾಣವೆಂದರಿದು ದಿವ್ಯಶಾಸನವ ಬರೆದು ಪಠಿಸಿದ ಕಾರಣ ಎನ್ನ ಭವಂ ನಾಸ್ತಿಯಾಯಿತ್ತಯ್ಯಾ

---

# ಶಿವಾನುಭಾವಿಗಳ ಸಂಕೀರ್ತನ

## ೧. ಮರುಳು ಶಂಕರದೇವರ ಮಹಾತ್ಮೆ

೧೫೮. ಮಾಡಬಾರದ ಭಕ್ತಿಯನೆ ಮಾಡಿ, ನೋಡಬಾರದ ನೋಟವನೆ ನೋಡಿ, ಕೂಡಬಾರದ ಕೂಟವನೆ ಕೂಡಿ, ಸ್ತುತಿಸುವರೆ ಸ್ತುತಿಗೆ ಬಾರದೆ, ಮುಟ್ಟುವರಿಗೆ ಮುಟ್ಟಬಾರದೆ, ಬಟ್ಟಬಯಲಾಗಿ ಹೋದ ಮರುಳುಶಂಕರದೇವರ ಮಹಾತ್ಮೆಗೆ ನಮೋ ನಮೋ ಎಂದು ಬದುಕಿದೆನು ಕಾಣಾ ಕೂಡಲ ಚೆನ್ನಸಂಗಮದೇವಾ.

## ೨. ಮಡಿವಾಳಯ್ಯನ ಮಹಿಮೆ

೧೫೯. ನರಸುರಾದಿಗಳೆಲ್ಲರೂ ನಿಮ್ಮ ಹೊಳೆಯಲ್ಲಿದ್ದರು. ಮನುಮುನಿ ಯತಿ ವ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು ಗಂಗೆ ವಾಳುಕರೆಲ್ಲರೂ ನಿಮ್ಮ ಮಡಿಯೊಳಡಗಿದರು. ಗಂಗೆ ಗೌರೀ ವಲ್ಲಭರೆಲ್ಲರು, ಚತುರ್ಮುಖ, ಪಂಚಮುಖ, ಷಣ್ಮುಖ, ದಶಮುಖರೆಲ್ಲರೂ ನಿಮ್ಮ ಮಡಿಯ ಗಳಿಗೆಯೊಳಡಗಿದರು. ಲೋಕಾದಿಲೋಕವೆಲ್ಲವೂ ನಿಮ್ಮ ಕುಕ್ಷಿಯೊಳಗು. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ನಿಮ್ಮ

ನಿರಾಳ ಪ್ರಸಾದದಿಂದ ನಿರವಯಲ ಹಾದಿಯ ಕಂಡೆನಲ್ಲದೆ, ನಿಮ್ಮಿಂದ ಲಾನು ಘನವೆ ಮಡಿವಾಳ ಮಾಚಯ್ಯ ?

೧೬೦. ಹೊಟ್ಟೆಯಲ್ಲಿ ಎನ್ನ ತೆಗೆದ. ಬೆನ್ನಿನಲ್ಲಿ ಬಸವಣ್ಣನ ತೆಗೆದ. ಬ್ರಹ್ಮರಂಧ್ರದಲ್ಲಿ ಅಲ್ಲಮನ ತೆಗೆದ. ಸಂಗನೋ ಮಡಿವಾಳನೋ, ಮಡಿವಾಳನೋ ಸಂಗನೋ ಕೂಡಲ ಚೆನ್ನಸಂಗನಲ್ಲಿ ಮಡಿವಾಳ ಸ್ವಾಯತ ನಮ್ಮ ಬಸವಣ್ಣಂಗೆ.

## ೩. ಸಿದ್ಧರಾಮನ ಶ್ರೇಷ್ಠತೆ

೧೬೧. ಕಾಯದ ಕಲ್ಪಿತದಿಂದೆ ಭೋಗಾದಿ ಭೋಗಂಗಳ ಭೋಗಿಸಬಲ್ಲ ದೇವಲೋಕವೆ ಪರ್ವತ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ, ಇಂತೀ ಚತುರ್ವಿಧ ಪನೆ ಮೀರಿ ಶಿವನ ಪ್ರಸಾದದಲ್ಲಿ ಇರಬಲ್ಲರೆ ಈ ಕೈಲಾಸವೇ ಕಲ್ಯಾಣ ಲಿಂಗವೆ ತಾನು, ತಾನೆ ಲಿಂಗವಾಗಿರಬಲ್ಲ ಶಿವಯೋಗಿ ಸಿದ್ಧರಾಮಯ್ಯದೇವರ ಶ್ರೀಪಾದದಲ್ಲಿ ಎಂದಿಪ್ಪೆ ಹೇಳಾ ಪ್ರಭುವೇ ಕೂಡಲ ಚೆನ್ನಸಂಗಮದೇವಾ.

೧೬೨. ಹರ ತನ್ನ ರೂಪವ ತೋರಲಿಕ್ಕೆ ಶ್ರೀಗುರುವಾದ. ಆ ಗುರುವೆ ಕರಸ್ಥಲಕ್ಕೆ ಲಿಂಗವಾದ. ಮನಸ್ಥಲಕ್ಕೆ ಮಂತ್ರವಾದ. ತನುಸ್ಥಲಕ್ಕೆ ಪ್ರಸಾದವಾದ. ಪ್ರಾಣಸ್ಥಲಕ್ಕೆ ಜಂಗಮವಾದ. ಕೂಡಲ ಚೆನ್ನಸಂಗಯ್ಯನಲ್ಲಿ ಸಮಯೋಗಿ ಸಿದ್ಧರಾಮಯ್ಯದೇವರು ಒಬ್ಬರೆ ತಾವಾದರು.

೧೬೩. ಕಬ್ಬುನಗಿದ ಗಾಣ ಬಲ್ಲುದೆ ಹಾಲ ಸವಿಯ ? ಗಗನದಲಾಡುವ ಪಕ್ಷಿ ಬಲ್ಲುದೆ ರವಿಯ ನಿಲವ ? ಹಗರಣಕ್ಕೆ ಪೂಜಿಸುವರು ಬಲ್ಲರೆ ನಮ್ಮ ಶರಣರ ಸುಳುಹ ? ನಡುಮುರಿದು ಗುಡಗೂಂದರೇನು, ಲಿಂಗದ ನಿಜವನರಿಯದನ್ನಕ್ಕ ? ಸಾವನ್ನಕ್ಕ ಜಪವ ಮಾಡಿದರೇನು ಲಿಂಗದ ಪ್ರಾಣ ತನ್ನ ಪ್ರಾಣ ಒಡಗೂಡದನ್ನಕ್ಕ ? ಇಂತಿವರೆಲ್ಲರು ಅಭ್ಯಾಸಶಕ್ತಿಗರುಹಿಗರು. ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಮಾಯಾ ಕೋಲಾ

ಹಳ ಸಿದ್ಧರಾಮಯ್ಯದೇವರಿಗೆ ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಪ್ರಭುವೇ.

## ೪. ಅಕ್ಕಮಹದೇವಿಯ ಅಗ್ಗಳಿಕೆ

೧೬೪. ಅಜಕೋಟಿ ವರುಷದವರೆಲ್ಲರು ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಿಯರೆ? ನಡುಮುರಿದು ಗುಡುಗೂರಿ ತಲೆ ನಡುಗಿ ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದನಾಡಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರು ಹಿರಿಯರೆ ? ಅನುವರಿದು ಘನವ ಬೆರಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲ ಚೆನ್ನಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು.

೧೬೫. ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತುವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದುವಚನ. ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಯ್ಯನಲ್ಲಿ ಮಹದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ.

೧೬೬. ತನುವಿನೊಳಗಿದ್ದು ತನುವ ಗೆದ್ದಳು. ಮನದೊಳಗಿದ್ದು ಮನವ ಗೆದ್ದಳು. ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂಗಸಂಗವ ತೊರೆದು, ಭವವ ಗೆದ್ದಳು. ಕೂಡಲ ಚೆನ್ನಸಂಗಯ್ಯನ ಹೃದಯ ಕಮಲವ ಬಗೆದು ಹೊಕ್ಕು ನಿಜಪದವನೈದಿದ ಮಹದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

## ೫. ಬಸವನ ಬೆಳಕು

೧೬೭. ಭಾವದಲ್ಲಿ ಗಮನ, ಪ್ರಾಣದಲ್ಲಿ ಲೋಭ, ಜಿಹ್ವೆಯಲ್ಲಿ ರುಚಿ, ಶ್ರೋತ್ರದಲ್ಲಿ ಕುಶಬ್ದ, ನಾಸಿಕದಲ್ಲಿ ದುರ್ಗಂಧ, ನೋಟದಲ್ಲಿ ಕಾಮ, ಶಬ್ದದಲ್ಲಿ ವಿರೋಧ, ಇಂತಹ ಭವಿಯ ಕಳೆದು, ಭಕ್ತನ ಮಾಡಿದ ಪರಿ

ಎಂತೆಂದೊಡೆ, ಆಕಾರವಿಲ್ಲದಂದಿನ, ನಿರಾಕಾರವಿಲ್ಲದಂದಿನ, ಕಾಮನ ಸುಟ್ಟ ಭಸ್ಮವಿಲ್ಲದಂದಿನ, ತ್ರಿಪುರವ ಸುಟ್ಟ ಭಸ್ಮವಿಲ್ಲದಂದಿನ, ಕಾಲನ ಸುಟ್ಟ ಭಸ್ಮವಿಲ್ಲದಂದಿನ, ಆದಿ ಆಧಾರವಿಲ್ಲದಂದಿನ, ಚಿದ್ವಿಭೂತಿಯನೆ ತಂದು, ಪಟ್ಟವ ಕಟ್ಟಿದರೆ, ಭಾವಕ್ಕೆ ಗುರುವಾಯಿತ್ತು. ಪ್ರಾಣಕ್ಕೆ ಲಿಂಗ ವಾಯಿತ್ತು. ಜಿಹ್ವೆಗೆ ಪ್ರಸಾದವಾಯಿತ್ತು. ಶ್ರೋತ್ರಕ್ಕೆ ಶಿವಮಂತ್ರವಾ ಯಿತ್ತು. ನಾಸಿಕಕ್ಕೆ ಸುಗಂಧವಾಯಿತ್ತು. ನೋಟಕ್ಕೆ ಜಂಗಮವಾ ಯಿತ್ತು. ಶಬ್ದಕ್ಕೆ ಸಂಭಾಷಣೆಯಾಯಿತ್ತು. ಇಂತು ಪೂರ್ವದ ಗುಣಂಗ ಳೆಲ್ಲವ ಕಳೆದು, ಪುನರ್ಜಾತನಾದ ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನಿಂದೆ ಸರ್ವಾಂಗ ಲಿಂಗವಾದೆನು.

೧೬೮. ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಪಂಚಭೂ ತಂಗಳಲ್ಲಿ ಪಂಚಲಿಂಗ ಪ್ರತಿಷ್ಠೆಯ ಮಾಡಿದನಯ್ಯಾ! ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಅಂತಃಕರಣ ಚತುಷ್ಟಯದಲ್ಲಿ ಚತುರ್ಮುಖ ಲಿಂಗವನು ಪ್ರತಿಷ್ಠೆಯ ಮಾಡಿದನಯ್ಯಾ! ಬಹಿರಂಗ ಹತವ ಮಾಡಿ ಶ್ರೋತ್ರ, ಘ್ರಾಣ, ತ್ವಕ್ಕು, ಜಿಹ್ವೆ, ನೇತ್ರ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯಗಳೆಂಬ ದಶ ಇಂದ್ರಿಯಂಗಳಲ್ಲಿ ದಶಮುಖ ಲಿಂಗಪ್ರತಿ ಷ್ಠೆಯ ಮಾಡಿದನಯ್ಯಾ! ಅಂತರಂಗ ಬಹಿರಂಗ ಹತವ ಮಾಡಿದನಯ್ಯಾ, ಕೂಡಲ ಚೆನ್ನಸಂಗಮದೇವ ಎನ್ನ ಶ್ರೀಗುರು ಬಸವಣ್ಣನು.

೧೬೯. ಮಾಂಸಪಿಂಡವೆಂದೆನಿಸದೆ, ಮಂತ್ರಪಿಂಡವೆಂದೆನಿಸಿದನು ಬಸ ಣ್ಣನು. ವಾಯು ಪ್ರಾಣಿಯೆಂದೆನಿಸದೆ ಲಿಂಗ ಪ್ರಾಣಿಯೆಂದೆನಿಸಿದಾತ ಬಸವಣ್ಣನು. ಲಿಂಗ ಭರಿತನೆಂಬ ಶಬ್ದಕ್ಕೆ ಅಂಗವಿಸದೆ ಶರಣಭರಿತ ಲಿಂಗವೆಂದೆನಿಸಿದನು ಕೂಡಲ ಚೆನ್ನಸಂಗನಲ್ಲಿ ಎನ್ನ ಪರಮಗುರು ಬಸವ ಣ್ಣನು.

೧೭೦. ಆದಿ ಬಸವಣ್ಣ, ಅನಾದಿ ಲಿಂಗವೆಂದೆಂಬರು. ಹುಸಿಹುಸಿ. ಈ ನುಡಿಯ ಕೇಳಲಾಗದು. ಆದಿಲಿಂಗ ಅನಾದಿ ಬಸವಣ್ಣನು. ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಜಂಗಮವು ಬಸವಣ್ಣನ ಉದರ

ದಲ್ಲಿ ಹುಟ್ಟಿತ್ತು ಪ್ರಸಾದವು ಬಸವಣ್ಣನನುಕರಿಸಲಾಯಿತ್ತು. ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದರಿದೆನಯ್ಯ ಕೂಡಲ ಚೆನ್ನಸಂಗಮ ದೇವಾ.

೧೭೧. ಪ್ರಥಮ ಕಾಲವಲ್ಲಿ ನಿರಾಲಂಬಿಯಾಗಿರ್ದಿರಯ್ಯ ! ದ್ವಿತೀಯ ಕಾಲದಲ್ಲಿ ತೇಜೋಮೂರ್ತಿಯಾಗಿರ್ದಿರಯ್ಯ ! ತೃತೀಯ ಕಾಲದಲ್ಲಿ ನಾದಮೂರ್ತಿಯಾಗಿರ್ದಿರಯ್ಯ ! ಚತುರ್ಥ ಕಾಲದಲ್ಲಿ ಚೈತನ್ಯರೂಪ ತಾಳಿರ್ದಿರಯ್ಯ ! ಪಂಚಮ ಕಾಲದಲ್ಲಿ ಧರ್ಮಮೂರ್ತಿಯಾಗಿರ್ದಿರಯ್ಯ! ಷಷ್ಠಮ ಕಾಲದಲ್ಲಿ ನೀವು ಪರಮ ಪುರುಷಾರ್ಥ ಸಾಧನವಾಗಿ ತ್ರಿವಿಧ ಭಕ್ತಿಗೆ ನೀವೇ ಕಾರಣವಾಗಿ ಬಂದಿರಿ. ನೀವು ಪ್ರಮಥರು ಸಹಿತ ಮುಟ್ಟಿ ಪ್ರಾಣಲಿಂಗದ ಪರಿಯ ತೋರಿಸಬೇಕೆಂಬ ನಿಮಿತ್ಯ ವೇಷವಿಡಿದು ನಿಮ್ಮ ಕರುಣದ ಶಿಶುವಾಗಿ ಹುಟ್ಟಿದೆ ನಿಮ್ಮ ಕರಸ್ಥಲದಲ್ಲಿ ಕೂಡಲ ಚೆನ್ನಸಂಗಮದೇವ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು.

೧೭೨. ಭಕ್ತಿಯ ಕುಳಸ್ಥಳವನು ಮರ್ತ್ಯಲೋಕದಲ್ಲಿ ಹರಹಲೆಂದು ಬಂದನಯ್ಯ ಬಸವಣ್ಣನು. ಆಚಾರ ಶಿವಾಚಾರದ ಮುಂದಣ ಕನ್ನಡವ ಕಳೆದು, ಕರತಳಾಮಳಕವ ಮಾಡಿದನಯ್ಯ ಬಸವಣ್ಣನು. ಪರವಾದಿ ಬಿಜ್ಜಳನು ಒರೆಗಲ್ಲ ಹಿಡಿದು ಶಿವಭಕ್ತಿಯ ಸಂಪಾದನೆಯ ಮಾಡುವಲ್ಲಿ ಮೂವತ್ತಾರು ಕೊಂಡೆಯರ ಪರಿಹರಿಸಿ, ಶಿವಾಚಾರದ ಧ್ವಜವನೆತ್ತಿಸಿದ ನಮ್ಮ ಬಸವಣ್ಣನು. ಕೂಡಲ ಚೆನ್ನಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ ಎನ್ನಳವಲ್ಲ, ನಿನ್ನಳವಲ್ಲ ಕೇಳಾ ಪ್ರಭುವೆ.

೧೭೩. ಆಕಾಶವಿಲ್ಲದಂದು, ಅನಲ ಪವನ ಜಲ ಕೂರ್ಮರಿಲ್ಲದಂದು, ಚಂದ್ರಸೂರ್ಯರೆಂಬವರು ಕಳೆದೋರದಂದು, ಆತ್ಮಸ್ಥಲ ಅನುಭಾವಕ್ಕ ಬಾರದಂದು ನಿತ್ಯ ನಿಜಲಿಂಗವ ಬಲ್ಲವರಾರಯ್ಯ ನೀವಲ್ಲದೆ ? ಮಹಾ ಘನಕ್ಕೆ ಘನವಾಹನವಾಗಿ ಅಗಮ್ಯ ಸ್ಥಲದಲ್ಲಿ ನಿಂದು ಭರಿತರಾಗಿರಬಲ್ಲವ ರಾರಯ್ಯ ನೀವಲ್ಲದೆ ? ನಿಮ್ಮ ಒಕ್ಕುಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ ವಿಭೂತಿ ಪಟ್ಟವ ಕಟ್ಟಿ ಹಸ್ತ ಮಸ್ತಕ

ಸಂಯೋಗವ ಮಾಡಿ, ಎನ್ನನುಳುಹಿದವರಾರಯ್ಯ ನೀವಲ್ಲದೆ? ಕೂಡಲ ಚೆನ್ನಸಂಗಮದೇವರ ಸಾಕ್ಷಿಯಾಗಿ, ನಾನು ನಿಮ್ಮ ಕರುಣದ ಕಂದನೆಂಬುದ ಮೂರುಲೋಕವೆಲ್ಲ ಬಲ್ಲದು ಕಾಣಾ ಸಂಗನಬಸವಣ್ಣಾ.

೧೭೪. ಅಯ್ಯ ಘನ ಗಂಭೀರವಪ್ಪ ಸಮುದ್ರದೊಳಗೊಂದು ರತ್ನ ಹುಟ್ಟಿದರೆ ಆ ಸಮುದ್ರದೊಳಗಡಗಿಪ್ಪುದಲ್ಲದೆ ಘನವಾಗಿ ತೋರಬಲ್ಲದೆ? ನಿಮ್ಮ ಕರುಣಕಟಾಕ್ಷದಿಂದಲುದಯಿಸಿ ಅನಂತ ಲಿಂಗ ಪುರಾಣವೆಲ್ಲ ನಿಮ್ಮ ಕೃಪೆಯಿಂದೆ ಸಾಧ್ಯವಾಯಿತ್ತೆನಗೆ. ಆದಿ ಅನಾದಿ ಇಲ್ಲದಂದು ನೀನೊಬ್ಬನೆ ಪ್ರಸಾದಿ. ಉಮೆಯ ಕಲ್ಯಾಣವಿಲ್ಲದಂದು ನೀನೊಬ್ಬನೆ ಪ್ರಸಾದಿ. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ಬಸವಣ್ಣ ನಿಮ್ಮ ತೊತ್ತಿನ ತೊತ್ತಿನ ಮರುತೊತ್ತಿನ ಮಗ ನಾನಯ್ಯ.

೧೭೫. ತನುವ ಗುರುವಿನಲ್ಲಿ ಸವಿಸಿ, ಮನವ ಲಿಂಗದಲ್ಲಿ ಸವಿಸಿ, ಧನವ ಜಂಗಮದಲ್ಲಿ ಸವಿಸಿ, ತನುವೆ ಗುರುವಾಗಿ, ಮನವೆ ಲಿಂಗವಾಗಿ, ಧನವೆ ಜಂಗಮವಾಗಿ, ಇಂತೀ ತ್ರಿವಿಧವು ನಿಮ್ಮಲ್ಲಿ ನಿಜಭರಿತವಾದ ಕಾಯುವಿಡಿದು ಕರ್ಮರಹಿತನಾದ ಕೂಡಲ ಚೆನ್ನಸಂಗಮ ದೇವರಲ್ಲಿ ಸಂಗನ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

೧೭೬. ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯರೆಂಬೆ. ಬೇರೆ ಮಾಡಿ ನಡೆದು ಬೇರೆ ಮಾಡಿ ನುಡಿವ ಭಿನ್ನವಿಲ್ಲ. ಅಂತರಂಗದಲ್ಲಿ ಅರಿವು ಪರಿಪೂರ್ಣ, ಬಹಿರಂಗದಲ್ಲಿ ದಾಸೋಹ ಸಂಪನ್ನ. ಮನೋವಾಕ್ಕಾಯ ಕರ್ಮಗಳಲ್ಲಿ ಸದ್ಭಕ್ತಿಸಂಪನ್ನ. ಎಡದೆರಹಿಲ್ಲದೆ ಲಿಂಗಸಂಪನ್ನ. ಸರ್ವಾಂಗದಲ್ಲಿ ಸರ್ವಾಚಾರ ಸಂಪನ್ನ. ಕೂಡಲ ಚೆನ್ನಸಂಗಮದೇವ ರಲ್ಲಿ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

೧೭೭. ಮಾತು ಮಾಣಿಕವ ನುಂಗಿ, ಜ್ಯೋತಿ ಕತ್ತಲೆಯ ನುಂಗಿ, ಆಳು ಅಳ್ಳನ ನುಂಗಿ, ಉಗುಳಿಲ್ಲದ ಮಥನ, ಮಥನವಿಲ್ಲದ ಸಂಗ, ಮರಣವಿಲ್ಲದ ಉದಯ, ಅಳಲಿಲ್ಲದ ಶೋಕ, ಸಮರಸವಿಲ್ಲದ ಉದಯದ ಬೆಳಗನು ಮದಗಜ ಒಳಕೊಂಡು ಮಾವತಿಗನ ನುಂಗಿ, ಉಗುಳ

ಡಲ್ಲಿ ಸದಮುದ ಬರಿ ಕೈಯೊಳಗೆ ಈರೇಳು ಭುವನವನೊದರೆ ಹಾಯಿ೦ಕಿ ತಾನೆ ನಿಂದುದಲ್ಲ ಸದಮಲ ಜ್ಞಾನಸಂಪನ್ನ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣಂಗೆ ಸ್ವಯವಾಯಿತ್ತು.

೧೭೮. ಉರಿಯ ಸೀರೆಯನುಟ್ಟು, ಕಡೆ ಸೆರಗ ಬಿಡಬೀಸಿ, ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ, ಪತಿ ಬಂದು, ಮುಡಿಯ ಹಿಡಿದು, ಉಟ್ಟ ಸೀರೆಯನುಗಿಯೆ. ಮಡದಿ ಒಡಗೂಡುತ್ತಿರೆ, ಸಮರಸ ದಲ್ಲಿ ಸತಿಯಳಿದು ಪತಿಯಾಗಿ ಪತಿಯಳಿದು ನಿಃಪ್ಪತ್ತಿಯಾಗಿ ಸತಿಪತಿ ನಿಃಪ್ಪತ್ತಿ ಎಂಬ ತ್ರಿವಿಧವು ಏಕಾರ್ಥವಾದ ಕೂಡಲ ಚೆನ್ನಸಂಗನಲ್ಲಿ ಬಸ ವಣ್ಣನ ಪಾದಕ್ಕೆ ನಮೋ ನಮೋ ಎನುತ್ತಿರ್ದೆನು.

೧೭೯. ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮ ದಲ್ಲಿ ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿಚಾರಿ, ಕೂಡಲ ಚೆನ್ನಸಂಗಯ್ಯ ನಿಮ್ಮ ಶರಣ ಬಸವಣ್ಣನು.

## ೬. ಪ್ರಭುವಿನ ಪ್ರಭೆ

೧೮೦. ಆಯತವಿಲ್ಲದ ಅನುಭಾವ. ಸ್ವಾಯತವಿಲ್ಲದ ಸಮಾಧಾನ. ಸನ್ನಿಹಿತವಿಲ್ಲದ ಸಂಬಂಧವನೇನೆನಬಹುದಯ್ಯ ? ಘನ ಮನವ ಭೇದಿಸಿ ಆದಿ ಅನಾದಿಯನೊಳಕೊಂಡ ಆಧಾರವಿಲ್ಲದ ನಿಲವು ಸಾಧ್ಯವಾಯಿತ್ತು ನೋಡಾ ! ಕೂಡಲ ಚೆನ್ನಸಂಗಮದೇವರ ಶರಣ ಪ್ರಭುದೇವರು ಅಜಾತ ನೆಂಬ ಭೇದವೆನಗೆ ತಿಳಿಯಿತ್ತು.

೧೮೧ ಬಯಲ ಮೂರ್ತಿಯಾಗಿ ನಿಂದನೊಬ್ಬ ಶರಣ. ಆತನ ವಿದ್ಯಾ ಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿ ಸೈರಣೆಯಿಂದ ಹುಟ್ಟಿ ದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರುಪೀಠವಂತಿರಲಿ, ಈ ತತ್ತ್ವತ್ರಯಂಗಳಿಗೆ ತಾನೆ ಕಾರಣವಾಗಿಪ್ಪ ಶರಣನ ನಿಲವನರಿದು, ಶರಣೆನುತಿರ್ದೆನು ಕೂಡಲ ಚೆನ್ನಸಂಗಮದೇವ.

೧೮೨. ಇಲ್ಲದ ಸಂಸಾರ ಕಣ್ಣಮುಂದೆ ರೂಪಾಗಿ ಕಾಡುತ್ತಿರ್ದರೆ, ಸುಜ್ಞಾನವೆಂಬ ಅಂಜನವನ್ನೆಚ್ಚಿ, ಸಕಲ ಭ್ರಮೆ ಎಂಬ ಕತ್ತಲೆಯ ಕಳೆದು, ನಿಜಲಿಂಗ ಸಂಬಂಧವ ನೆಲೆಗೊಳಿಸಿ ನಿತ್ಯದಲ್ಲಿ ಅಚ್ಚೊತ್ತಿದನಾಗಿ ಕೂಡಲ ಚೆನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

೧೮೩. ಎನ್ನ ಸಂಸಾರ ಸೂತಕವ ತೊಡೆದು ನಿಜಲಿಂಗದಲ್ಲಿ ನಿರಹಂಕಾರವೆಂಬ ಘನವ ತೋರಿದನಯ್ಯ ಒಬ್ಬ ಶರಣನು. ಎನ್ನ ಗುರುವಿಲ್ಲವೆಂದು ಪ್ರಭುದೇವರೆಂಬ ಒಬ್ಬ ಶರಣನ ಕೃತಾರ್ಥವ ಮಾಡಿ, ಎನ್ನ ಕಣ್ಣಮುಂದೆ ಸುಳಿದನಯ್ಯ ಒಬ್ಬ ಶರಣನು. ಆ ಶರಣನ ಕೃಪೆಯಿಂದ ಪ್ರಭುದೇವರೆಂಬ ಘನವ ಕಂಡು ಮನಲೀಯವಾಗಿ, ಘನಘನ ಒಂದಾದ ಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಅಲ್ಲಯ್ಯನೆಂಬ ಮಹಿಮಗೆ ನಮೋ ನಮೋ ಎನುತಿರ್ದೆನು.

೧೮೪. ಅಂಗದ ಮೇಲೆ ಲಿಂಗ ಉಳ್ಳುದೆಲ್ಲವು ಸಂಗಮನಾಥನೆಂಬ ಭಾವ ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ ನೋಡಾ! ಲಿಂಗೈಕ್ಯ ಶರಣರ ಕಂಡರೆ ನಂಬಿ ನಚ್ಚಿ ಅವರ ಪಾದಕ್ಕೆರಗುವದೆನ್ನ ಮನವು. ಅವರ ಕಂಡರೆ ಕರುಣಾಮೃತವು ಸುರಿವುದೆನಗೆ. ಅವರ ಪಾದಕ್ಕೆ ಅಷ್ಟವಿಧಾರ್ಚನೆ, ಷೋಡಶೋಪಚಾರವ ಮಾಡುವದೆನ್ನ ಮನವು. ಕೂಡಲ ಚೆನ್ನಸಂಗಮದೇವ ನಿಮ್ಮ ಪ್ರಭುವೆಂಬ ಜಂಗಮವ ಕಂಡು ಪೂಜಿಸಿ ಪೂಜಿಸಿ ದಣಿಯದೆನ್ನ ಮನವು.

೧೮೫. ಎನ್ನ ಅಂತರಂಗ ಬಸವಣ್ಣ, ಎನ್ನ ಬಹಿರಂಗ ಮಡಿವಾಳನು. ಈ ಉಭಯದ ಸಂಗವೆ ಪ್ರಭುದೇವರು. ಇಂತೀ ಮೂವರ ಕರುಣದ ಕಂದನಾಗಿ ಬದುಕಿದೆನು ಕಾಣಾ ಕೂಡಲ ಚೆನ್ನಸಂಗಮದೇವಾ.

೧೮೬. ರೂಪಿಲ್ಲದ ರೂಪು, ನಿಜವಿಲ್ಲದ ನಿಃಪ್ಪತ್ತಿ, ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದ ಗಮ್ಯ, ನುಡಿಯಡಗಿದ ನಿಃಶಬ್ದ, ಪರವನರಿಯದ ಪರಿಣಾಮಿ, ಕೂಡಲ ಚೆನ್ನಸಂಗನ ಶರಣ ಪ್ರಭುದೇವರಿಗೆ ನಮೋ ನಮೋ ಎನುತಿರ್ದೆನು.

೧೮೭. ಬಟ್ಟಬಯಲೊಳಗೊಂದು ಐವಾಗಿಲ ಪಟ್ಟಣ. ಆ ಪಟ್ಟಣಕ್ಕೆ ಒಡಲಿಲ್ಲದಾತ ಅರಸು ನೋಡಾ. ಆ ಅರಸಂಗೆ ಆರುವರು ಅರಸಿಯರು. ಮೂವರು ಸ್ವರೂಪಿಯರು. ಮೂವರು ಕುರೂಪಿಯರು. ಅವರೊಬ್ಬರಿಗೊಬ್ಬರಿಗೊಂದೊಂದು ಪರಿಯ ಕೂಟ ನೋಡಾ ಐವರ ಕಣ್ಣ ಕಟ್ಟಿ ಒಬ್ಬಳನೆರೆದರೆ ಪ್ರತಿ ಇಲ್ಲದ ಸುಖವು ಸಮವಾದ ಕಾರಣ ಕೂಡಲ ಚೆನ್ನಸಂಗ ನಿಮ್ಮ ಶರಣ ಪ್ರಭುವಿಂಗೆ ನಮೋ ನಮೋ ಎನುತಿರ್ದೆನು

೧೮೮. ಎನ್ನ ಅನುಭಾವದ ಗವ್ಯವೆ, ಎನ್ನರುಹಿನ ವಿಶ್ರಮವೆ, ಎನ್ನ ಭಾವದ ಬಯಕೆಯೆ, ಎನ್ನ ಜೀವದ ನಿಲವೆ, ಎನ್ನ ಪರಿಣಾಮದ ಮೇರುವೆ, ಎನ್ನ ಮನದ ಮಹಿಮನೆ. ನಿಮ್ಮ ಸುಳುವು ಎತ್ತಲಡಗಿತ್ತು? ಎಲೆ ಲಿಂಗವೆ ನಿನ್ನ ನಾಮವೆತ್ತ ನಿರ್ನಾಮವಾಯಿತ್ತು ? ಎಲೆ ಪರಮ ಗುರುವೆ ಕೂಡಲ ಚೆನ್ನಸಂಗಮನಲ್ಲಿ ಉರಿಯುಂಡ ಕರ್ಪುರದಂತಾದೆಯಲ್ಲ ಪ್ರಭುವೆ.

---

# ಚೆನ್ನಬಸವಣ್ಣನ ಗುಣಗಾನ

## ಮರುಳ ಶಂಕರದೇವರಿಂದ

೧. ಎನ್ನ ಜ್ಞಾನಾತ್ಮ ಚೇತನನಯ್ಯ ಪ್ರಭುದೇವರು. ಎನ್ನ ಪರಮಾತ್ಮಚೇತನನಯ್ಯ ಸಿದ್ಧರಾಮಯ್ಯದೇವರು. ಎನ್ನ ಚಿನ್ಮಯಾತ್ಮಚೇತನನಯ್ಯ ಸಂಗನಬಸವಣ್ಣನು. ಎನ್ನ ನಿರ್ಮಲಾತ್ಮ ಚೇತನನಯ್ಯ ಷಡುಸ್ಥಲ ಬ್ರಹ್ಮಿ ಚೆನ್ನಬಸವಣ್ಣನು. ಎನ್ನ ಮಹದಾತ್ಮ ಚೇತನನಯ್ಯ ಬಸವಣ್ಣನ ನಿಜಸುಖಿ ಅಪ್ಪಣ್ಣನು. ಎನ್ನ ಜೀವಾತ್ಮಚೇತನನಯ್ಯ ಮಡಿವಾಳ ಮಾಚಯ್ಯನು. ಎನ್ನರಿವಿನ ಚೇತನಾತ್ಮಕನಯ್ಯ ಕಿನ್ನರಯ್ಯನು. ಇಂತಪ್ಪ ಪ್ರಮಥರ ಕರುಣದಿಂದೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೆ ಚೆನ್ನಮಲ್ಲಿಕಾರ್ಜುನದೇವಯ್ಯ ಬದುಕಿದೆನು ಕಾಣಾ ನಿಮ್ಮ ಧರ್ಮ ನಿಮ್ಮ ಧರ್ಮ.

## ಮಡಿವಾಳಯ್ಯಗಳಿಂದ

೧. ವಾಯುದ ಮಾಯದ ಸಂಭ್ರಮದೊಳಗೆ ಸಿಲುಕಿತ್ತು ನೋಡಾ. ಭವನವೆಲ್ಲವು ಮಾಯಕ್ಕೆ ಹೊರಗಾದ ನಿರ್ಮಾಯನ ಕಂಡೆನು. ತಾನೆಂಬ ನುಡಿಗೆ ನಾಚಿ ನೀನೆಂಬ ನುಡಿಗೆ ಹೇಸಿ ತಾನೆ ತಾನಾದ ಘನ ಮಹಿಮನು. ಕಾಯದಲ್ಲಿ ಕುರುಹಿಲ್ಲ. ಭಾವದಲ್ಲಿ ಭ್ರಮೆ ಇಲ್ಲ. ಜ್ಞಾನ ತಾನೆಂಬ ಭೇದವಿಲ್ಲ. ಸಾಯುವನಲ್ಲ ನಿರವಯವನಲ್ಲ ಕಲಿ ದೇವರದೇವ ನಿಮ್ಮ ಶರಣ ಚೆನ್ನಬಸವಣ್ಣನು.

## ಸಿದ್ಧರಾಮಯ್ಯನವರಿಂದ

೧. ಅಧ್ಯಾತ್ಮ ಅಧ್ಯಾತ್ಮವೆಂದೆಂಬಿರಿ. ಅಧ್ಯಾತ್ಮವಾರಿಗೆ? ಶ್ರೀ ಗುರು ಸ್ವಾಮಿ ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ ಕರಸ್ಥಲಕ್ಕೆ ಕೊಟ್ಟ ಬಳಿಕ ಬೇರೆ ಯೋಗ ಉಂಟೆ? ತನ್ನ ಹಸ್ತವ ಮಸ್ತಕದಲ್ಲಿಟ್ಟು ವಾಯುಪ್ರಾಣಿಯಾಗಿದ್ದುದ ಕೊಂದು ಲಿಂಗಪ್ರಾಣಿಯ ಮಾಡಿದ ಬಳಿಕ ಅಕ್ಷರ ಐದರಲ್ಲಿ ಮುಕ್ತನ ಮಾಡಿದ ಬಳಿಕ ಮರಳಿ ಯೋಗ ಉಂಟೇ, ಶಿವಯೋಗವಲ್ಲದೆ? ಲಿಂಗಾರ್ಚನೆಯ ಮಾಡಿ, ಜಂಗಮ ಪ್ರಸಾದವ ಕೊಂಡ ಬಳಿಕ ಮರಳಿ ಬರಿಯ ಯೋಗಕ್ಕೆ ಒಡಂಬಡುವುದೆ ಅರಿವು? ಇಂತಪ್ಪವನತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚೆನ್ನಬಸವಣ್ಣ. ಆನು ಚೆನ್ನಬಸವಣ್ಣನ ಕರುಣದಿಂದೆ ಅಭ್ಯಾಸಯೋಗವನತಿಗಳೆದು ಶಿವಯೋಗದಲ್ಲಿ ನಿತ್ಯನಾಗಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯನೆಂಬ ಷಡುಸ್ಥಲಕ್ಕಧಿಕಾರಿಯಾದೆ. ನಿನ್ನವರ ಸಲುಗೆಗೆ ಸಂದೆ. ಚೆನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಾ.

೨. ಹೃದಯಕಮಲದ ಅಷ್ಟದಳದ ದ್ವಾತ್ರಿಂಶ ಕುಸುಮ ಮಧ್ಯದಲ್ಲಿ ಇಪ್ಪ ಸೂರ್ಯ, ಆ ಸೂರ್ಯನ ಮಧ್ಯದಲ್ಲಿ ಇಪ್ಪ ಚಂದ್ರ, ಆ ಚಂದ್ರನ ಮಧ್ಯದಲ್ಲಿ ಇಪ್ಪ ಅಗ್ನಿ, ಆ ಅಗ್ನಿಯ ಮಧ್ಯದಲ್ಲಿ ಇಪ್ಪುದು

ಕಾಂತಿ, ಆ ಕಾಂತಿಯ ಮಧ್ಯದಲ್ಲಿ ಇಪ್ಪುದು ಸುಜ್ಞಾನ, ಆ ಸುಜ್ಞಾನದ ಮಧ್ಯದಲ್ಲಿಪ್ಪುದು ಚಿದಾತ್ಮ, ಆ ಚಿದಾತ್ಮನ ಮಧ್ಯದಲ್ಲಿಪ್ಪನಾ ಚಿತ್ಪ್ರಕಾಶನಪ್ಪ ಶಿವನು. ಅಂತಪ್ಪ ಪರಶಿವನು ಎನ್ನ ಸುಜ್ಞಾನದ ಕಾಯದ ಮಸ್ತಕದಲ್ಲಿ ಹಸ್ತವನಿರಿಸಿ ಮನ ಭಾವ ಕರಣೇಂದ್ರಿಯಗಳ ಸ್ವರೂಪೀಕರಿಸಿ ದೃಷ್ಟಿಗೆ ತೋರಿ ಕೈಯ್ಯಲ್ಲಿ ಲಿಂಗವ ಕೊಟ್ಟ ಚೆನ್ನಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂದು ಬದುಕಿದೆನಯ್ಯಾ, ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನ.

೩. ಭಕ್ತಿವಿಡಿದು ಭಕ್ತನಾದ ಪ್ರಸಾದಿ. ಮೋಕ್ಷವಿಡಿದು ಧೈರ್ಯವಿಡಿದು ಆ ಭಕ್ತಂಗೆ ಮಾಹೇಶ್ವರನಾದ ಪ್ರಸಾದಿ. ಕಾರಣವಿಡಿದು ಅವಧಾನ ತಪ್ಪದೆ ಆ ಭಕ್ತಂಗೆ ಪ್ರಸಾದಿಯಾದ ಪ್ರಸಾದಿ. ಕರ್ಮರಹಿತನಾಗಿ ಕಾಲ ಕಲ್ಪಿತವಿಲ್ಲದ ಆ ಭಕ್ತಂಗೆ ಪ್ರಾಣಲಿಂಗಿಯಾದ ಪ್ರಸಾದಿ. ಪತಿಭಕ್ತಿವಿಡಿದು ಧರ್ಮಾರ್ಥ ಕಾಮ ಮೋಕ್ಷಂಗಳಾಸೆ ನಿವೃತ್ತಿಯಂ ಮಾಡಿದ ಆ ಭಕ್ತಂಗೆ ಶರಣನಾದ ಪ್ರಸಾದಿ. ಈ ಉಭಯ ಸಮರಸ ಏಕವೆಂದು ತಿಳಿದು ಉಭಯ ಭಾವ ಉರಿ ಕರ್ಪುರ ಸಂಯೋಗವಾದ ಆ ಭಕ್ತಂಗೆ ಐಕ್ಯನಾದ ಪ್ರಸಾದಿ. ನಮ್ಮ ಕಪಿಲಸಿದ್ಧ ಮಲ್ಲಿನಾಥನಲ್ಲಿ ಸರ್ವಕ್ಕೆ ಚೈತನ್ಯನಾದ ನಮ್ಮ ಚೆನ್ನಬಸವಣ್ಣನೆಂಬ ಅಚ್ಚ ಪ್ರಸಾದಿ.

## ಮಹದೇವಿಯಕ್ಕಗಳಿಂದ

೧. ಎನ್ನ ಭಕ್ತಿ ನಿಮ್ಮ ಧರ್ಮ. ಎನ್ನ ಜ್ಞಾನ ಪ್ರಭುದೇವರ ಧರ್ಮ. ಎನ್ನ ಪರಿಣಾಮ ಚೆನ್ನಬಸವಣ್ಣನ ಧರ್ಮ. ಈ ಮೂವರು ಒಂದೊಂದ ಕೊಟ್ಟರೆನಗೆ ಮೂರು ಭಾವವಾಯಿತ್ತು. ಆ ಮೂರುನ್ನು ನಿಮ್ಮಲ್ಲಿ ಸಮರ್ಪಿಸಿದ ಬಳಿಕ ಎನಗಾವ ಜಂಜಡವಿಲ್ಲ. ಚೆನ್ನಮಲ್ಲಿಕಾರ್ಜುನದೇವರ ಹೆಸರಿನಲ್ಲಿ ನಿನ್ನ ಕರುಣದ ಶಿಸು ನಾನು ಕಾಣಾ ಚೆನ್ನಬಸವಣ್ಣಾ.

೨. ಮಾಟಕೂಟವೆಂಬುದಿಲ್ಲ ಬಸವಣ್ಣಂಗೆ, ನೋಟಕೂಟವೆಬುದಿಲ್ಲ ಪ್ರಭುದೇವರಿಗೆ, ಭಾವಕೂಟವೆಂಬುದಿಲ್ಲ ಅಜಗಣ್ಣಂಗೆ, ಸ್ನೇಹಕೂಟವೆಂಬುದಿಲ್ಲ ಬಾಚರಸಗೆ, ಇವರೆಲ್ಲರ ಕೂಟವೆಂಬುದಿಲ್ಲ ಚೆನ್ನಬಸವಣ್ಣಂಗೆ, ಎನಗೆ ನಿಮ್ಮ ಕೂಟವೆಂಬುದಿಲ್ಲ ಚೆನ್ನಮಲ್ಲಿಕಾರ್ಜುನಾ.

## ಬಸವಣ್ಣನವರಿಂದ

೧. ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಸಿಯ ನೋಡಾ. ಸುಗಂಧ ಬಂಧ ಬಂಧುರದಂತೆ ಹುಟ್ಟುತ್ತವೆ ಪರಿಮಳ. ಆದಿ ಅನಾದಿ ಇಲ್ಲದ ಮುನ್ನವೆ ತನ್ನಿಂದವ ತಾನಾಗಿರ್ದ ಕಾರಣ ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು, ಲಿಂಗಸ್ವಯವಾಗಿ, ಎನಗೆ ಗತಿ ಪಥವ ತೋರಿಸಬೇಕೆಂದು ಹಾಗಾದನು ಕೂಡಲ ಸಂಗಮದೇವರಲ್ಲಿ ಚೆನ್ನಬಸವಣ್ಣನು.

೨. ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯ! ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯ. ಇದರ ಸಂಗಸುಖದನುಭವವನು ಕೂಡಲ ಸಂಗಮದೇವ ತಾನೆ ಬಲ್ಲ.

೩. ನಾನಾ ಸ್ಥಾನದಲ್ಲಿ ಬಂದು ತೊಳಲಿ ಬಳಲಿ ಅಳಿದುಳಿದು ನಿಂದ ನಿಲದವನಲ್ಲ. ಮರ್ತ್ಯಲೋಕದಲ್ಲಿ ಶಿವಾಚಾರದ ಘನವು ಹೊಳೆಹೋಯಿತ್ತೆಂದು ಕರ್ತನು ತಾನೆ ಮಹಾಪ್ರಸಾದಿಯಾಗಿ ಉದಯವಾದನು. ಹಸ್ತ ಮಸ್ತಕ ಸಂಯೋಗವಿಲ್ಲದ ಮುನ್ನವೆ ಆದಿ ಗುರು ಅನಾದಿ ಶಿಷ್ಯನೆಂಬುದ ನೆಲೆಮಾಡಿ ಸಂಗಮನಾಥನೆಂಬ ಲಿಂಗವನೆನ್ನ ಕೈಯ್ಯಲ್ಲಿ ಕೊಟ್ಟು ಸಾಮರ್ಥ್ಯದಿಂದೆ ಅನುಗ್ರಹಿಸಿಕೊಂಡನು. ಎನ್ನ ಹಿಂದಣ ಪೂರ್ವಾಪರವನೆತ್ತಿ ತೋರಿ ತನ್ನತ್ತ ತೆಗೆದುಕೊಂಡನು ಕೂಡಲ ಚೆನ್ನ ಸಂಗಮದೇವರಲ್ಲಿ ಚೆನ್ನಬಸವಣ್ಣನು.

೪. ಅಂಗದ ಮೇಲೆ ಲಿಂಗಸ್ವಾಯತವಾಗಿ, ಲಿಂಗಾರ್ಚನೆಯ ಮಾಡಿದರೆ ಭವ ಹಿಂಗದೆಂದು ಪ್ರಾಣದ ಮೇಲೆ ಲಿಂಗಸ್ವಾಯತವ ಮಾಡಿ, ಎನ್ನಂತರಂಗವ ಶುದ್ಧವ ಮಾಡಿ ಲಿಂಗೈಕ್ಯದ ಹೊಲಬ ತೋರಿದನಯ್ಯ ಚೆನ್ನಬಸವಣ್ಣನು. ಕಾಯದ ಕಳವಳ ದಾಸೋಹ ಮುಖದಲ್ಲಿ ಅಲ್ಲದೆ ಹರಿಯದೆಂದು ಜಂಗಮ ಮುಖ ಲಿಂಗವಾಗಿ ಬಂದು ಎನ್ನ ರಕ್ಷಿಸಿ, ಶಿಕ್ಷಿಸಿ, ಎನ್ನ ಸಂಸಾರದ ಪ್ರಕೃತಿಯ ಹರಿದನಯ್ಯ ಪ್ರಭುದೇವರು. ಕೂಡಲ ಸಂಗಮದೇವರಲ್ಲಿ ಪ್ರಭುದೇವರ ಚೆನ್ನಬಸವಣ್ಣನ ಕರುಣದಿಂದ ಲಾನು ಬದುಕಿದೆನು.

೫. ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಂಗಳು ಭವರಾಟಳದಲ್ಲಿ ತಿರುಗುತ್ತಿಪ್ಪಲ್ಲಿ ಅನಂತ ಕೋಟ್ಯಾನುಕೋಟಿ ಯುಗಂಗಳು ಮಡಿದುಹೋದವು. ಅನಂತ ಜಲಪ್ರಳಯಂಗಳು ಸರಿಸರಿದುಹೋದವು ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡಗಳೆಲ್ಲ ಲಯವಾಗಿ ಹೋದವು. ಇದರೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ ಪ್ರಾಣಲಿಂಗ ಲಿಂಗಪ್ರಾಣವೆಂಬ ಭೇದವನರುಹಿದವರಾರು ಹೇಳಾ ? ಗಂಗೆ ಗೌರೀವಲ್ಲಭರು ಮೊದಲಾದ ಅನಂತ ಕೋಟಿ ರುದ್ರಾದಿಗಳೆಲ್ಲರು ಪ್ರಾಣಲಿಂಗ ಸಂಬಂಧದ ಹೊಲಬನರಿಯದೆ ಅಣಿಮಾದಿ ಚತುರ್ವಿಧ ಫಲಪ್ರಾಪ್ತಕ್ಕೆ ಒಳಗಾದರು. ಶಿವಾಚಾರದ ವಿಚಾರವನರಿಯದೆ, ಜಗವು ಕೆಟ್ಟಿಹುದೆಂದು ಪರಮ ಪುರುಷಾರ್ಥ ಕಾರಣವಾಗಿ, ಮರ್ತ್ಯಲೋಕದಲ್ಲಿ ಅವತರಿಸಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದವೆಂಬ ಪಂಚಾಚಾರವ ನೆಲೆಗೊಳಿಸಿ ಷಟ್ಸ್ಥಲವೆಂಬ ಮಹಾನುಭಾವಮಂ ಕರತಳಾಮಳಕವಾಗಿ ಸ್ಥಲಗೊಳಿಸಿ ಪ್ರಾಣಲಿಂಗ, ಲಿಂಗಪ್ರಾಣವೆಂಬ ಭೇದವನೆನಗೆ ತಿಳುಹಿ ಎನ್ನ ಭ್ರಾಂತಿಸೂತಕವ ಬಿಡಿಸಿ, ಲಿಂಗೈಕ್ಯವೆಂಬುದನೆನಗೆ ತೋರಿದೆಯಾಗಿ, ನಿನ್ನಿಂದಲಾನು ಸಂಗನಬಸವಣ್ಣನೆಂಬ ಹೆಸರು ವಡೆದೆನು ಕೂಡಲ ಸಂಗಮದೇವರು ಸಾಕ್ಷಿಯಾಗಿ, ಎನಗೆ ನೀನು ಪರಮಾರಾಧ್ಯ ಕಾಣಾ ಚೆನ್ನಬಸವಣ್ಣಾ.

೬. ಶಿಶುವೆನ್ನಬಹುದೆ ನಂಬಿಯಣ್ಣನ? ಸೂಕ್ಷ್ಮನೆನಬಹುದೆ ರವಿಯನು? ಜಗವ ಬೆಳಗುವ ದೃಷ್ಟಿ ಕಿರಿಯದೆನಬಹುದೆ? ಸೃಷ್ಟಿಯ ಕಾಂಬುವ ಭಾವ ಕಿರಿದೆನಬಹುದೆ? ಬಳ್ಳ ಲಿಂಗವಾದುದನು ಕೂಡಲ ಸಂಗಮದೇವ ಕೇಳಯ್ಯಾ. ಯುಗ ಜಗವೆಲ್ಲವನು ಮೀರಿದ ಶರಣನು ಕಿರಿದೆನ್ನಬಹುದೆ? ಚೆನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು.

## ಪ್ರಭುದೇವರಿಂದ

೧. ನರಲೋಕದ ನರರುಗಳೆಲ್ಲರು ನರಸಂಸ್ಕಾರಕ್ಕೊಳಗಾದರು. ಸುರಲೋಕದ ಸುರರುಗಳೆಲ್ಲರೂ ಸುರಸಂಸ್ಕಾರಕ್ಕೊಳಗಾದರು. ಮುನಿ ಲೋಕದ ಮುನಿಗಳೆಲ್ಲರೂ ತಪೋ ಸಂಸ್ಕಾರಕ್ಕೊಳಗಾದರು. ಜಂಗಮ ಪೂಜಿಸುವರೆಲ್ಲರೂ ಸಾಯುಜ್ಯ ಸಂಸಾರಕ್ಕೊಳಗಾದರು. ರುದ್ರಲೋಕದ ರುದ್ರಗಣಂಗಳೆಲ್ಲರೂ ರುದ್ರಪದವೆಂಬ ಸಂಸಾರಕ್ಕೊಳಗಾದರು. ಲಿಂಗವ ಧರಿಸಿದವರೆಲ್ಲರೂ ಲಿಂಗಸಂಸಾರಕ್ಕೊಳಗಾದರು. ಪಾದೋದಕ ಪ್ರಸಾದ ಸಂಬಂಧಿಗಳೆಲ್ಲರೂ ಪ್ರಸಾದ ಸಂಸಾರಕ್ಕೊಳಗಾದರು. ಗುಹೇಶ್ವರ ಲಿಂಗದಲ್ಲಿ ಸರ್ವ ಸಂಸಾರ ವಿರಹಿತನು ಚೆನ್ನಬಸವಣ್ಣಂಗೆ ನಮೋ ನಮೋ ಎಂಬೆನು.

೨. ಕಿರಿಯರಾದಡೇನು? ಹಿರಿಯರಾದಡೇನು? ಅರಿವಿಂಗೆ ಹಿರಿದು ಕಿರಿದುಂಟೆ? ಆದಿ ಅನಾದಿ ಇಲ್ಲದಂದು ಅಜಾಂಡ ಬ್ರಹ್ಮಾಂಡ ಕೋಟಿಗಳು ಉದಯವಾಗದಂದು, ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ ಎಂಬುದ ಕಾಣಬಂದಿತ್ತು ಕಾಣಾ ಚೆನ್ನಬಸವಣ್ಣಾ.

೩. ಗಗನ ಪವನದ ಮೇಲೆ ಉಭಯ ಮುಖದನುಭಾವ ಸದಮದ ಗಜವ ನಿಲಿಸುವ ಮಾವತಿಗ ಬಂದ. ಅಷ್ಟದಳ ಕಮಲದೊಳು ಸೃಷ್ಟಿಯಂಕುರದ ಬೀಜವ ಮೆಟ್ಟಿ ನಿಂದಾದ ಪರಮಯೋಗಿಯಾಗದೆ ಮಾಣ. ಬಯಲ ಬಣ್ಣಕ್ಕೆ ತಂದು ನೆಳಲ ಶೃಂಗಾರವ ಮಾಡಿದ ಗುಹೇಶ್ವರನ ಶರಣ ಚೆನ್ನಬಸವಣ್ಣಂಗೆ ಶರಣೆನುತಿರ್ದೆನು.

೪. ಪ್ರಕೃತಿ ಗುಣವುಳ್ಳನ್ನಕ್ಕರ ಭಕ್ತನಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವುಳ್ಳನ್ನಕ್ಕರ ಶರಣನಲ್ಲ. ಹಸಿವು, ತೃಷೆ, ನಿದ್ರೆ, ವಿಷಯವುಳ್ಳನ್ನಕ್ಕರ ಪ್ರಸಾದಿಯಲ್ಲ. ಆಚಾರದಲ್ಲಿ ಅನುಭಾವಿ, ಪ್ರಸಾದದಲ್ಲಿ ಪರಿಣಾಮಿ, ಗುಹೇಶ್ವರ ಲಿಂಗದಲ್ಲಿ ಚೆನ್ನಬಸವಣ್ಣನೆಂಬ ಪ್ರಸಾದಿಗೆ ನಮೋ ನಮೋ ಎನುತಿರ್ದೆನು.

೫. ಸದ್ಯೋಜಾತ ಶಬ್ದಜ್ಞಾನಿ, ವಾಮದೇವನಾತುರಜ್ಞಾನಿ, ಅಘೋರ ಕೋಪಜ್ಞಾನಿ, ತತ್ಪುರುಷ ಕ್ಷಣಿಕ ಜ್ಞಾನಿ, ಈಶಾನ್ಯನತೀತ ಜ್ಞಾನಿ, ಈ ಪರಿಯಲ್ಲಿ ಗುಹೇಶ್ವರ ಲಿಂಗದಲ್ಲಿ ಅವಿರಳ ಜ್ಞಾನಿ ಚೆನಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು.

೬. ವಸುಧೆಯ ಮುಟ್ಟದೆ ರಸವನೋಸರಲೀಯದೆ, ರಸದಲ್ಲಿ ಕಟ್ಟಬಲ್ಲರೆ ಅದು ಯೋಗ. ಹೊರಗಿದ್ದ ರಸವ ಕಟ್ಟಬಲ್ಲೆನೆಂಬವರೆಲ್ಲ ಅಂಜನಸಿದ್ಧರಾಗಿ ಹೋದರು. ಸುಷುಮ್ನ ಸೂಕ್ಷ್ಮ ನಿಧಿಯ ಮಧ್ಯದ ಕೂಪದ ಕಂಭದ ಮೇಲೆ ಪಂಚೇಂದ್ರಿಯ ಗುಹ್ಯವ ತೊಡೆದು ರಸವ ಕಟ್ಟಬಲ್ಲ ಗುಹೇಶ್ವರನ ಶರಣ ಚೆನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು.

೭. ಅಯ್ಯ ತತ್ವಾದಿತತ್ವಗಳಿಲ್ಲದಂದು, ಪ್ರಕೃತಿ ಪುರುಷರಿಲ್ಲದಂದು, ಜೀವಪರಮರೆಂಬ ಭಾವಲೀಲೆದೋರದಂದು, ಏನೇನು ಇಲ್ಲದಂದು, ಬಯಲು ಬಲಿದು ಒಂದು ಬಿಂದುವಾಯಿತ್ತು ನೋಡಾ! ಆ ಬಿಂದು ಅಕ್ಷರತ್ರಯದ ಗದ್ದುಗೆಯಲ್ಲಿ ಕುಳ್ಳಿರಲು, ಓಂಕಾರ ಉತ್ಪತ್ತಿಯಾಯಿತ್ತು. ಆ ನಾದದಲ್ಲಿ ಮೂರ್ತಿಗೊಂಡನೊಬ್ಬ ಶರಣ. ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಾಯಿತ್ತು ಲೋಕ. ಲೋಕಲೋಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗುಹೇಶ್ವರನ ಶರಣ ಚೆನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದರಿದು, ನಮೋ ನಮೋ ಎನುತಿರ್ದೆನು.

———

# ಚೆನ್ನಬಸವಣ್ಣನ ಕಾಲಜ್ಞಾನ ವಚನ

ಮುಂದಣ ಕಲಿಯುಗದ ಮಹಾತ್ಮೆಯನು ಮರ್ತ್ಯಲೋಕದ ಮಹಾಗಣಂಗಳು ಕೇಳಿ ಕೃತಾರ್ಥರಾಗಿರಯ್ಯ! ನಾನು ಹೇಳುವನಲ್ಲ. ಕೂಡಲ ಚೆನ್ನಸಂಗಮದೇವರು ಕೊಟ್ಟ ನಿರೂಪ. ಪಂಚಾಶತ್ ಕೋಟಿ ಭೂಮಂಡಲದ ಮಧ್ಯದಲ್ಲಿ ಪೃಥ್ವಿಗೆ ಕೈಲಾಸವಪ್ಪ ಶ್ರೀ ಶೈಲದ ಮಲ್ಲಿಕಾರ್ಜುನದೇವರ ಮೂಡಲ ಬಾಗಿಲು ಮುಚ್ಚೀತು. ಮನುಷ್ಯರ ರಕ್ತ ಬಿದ್ದೀತು ಸುರೆಯ ಗಡಿಗೆ ಮಾರೀತು. ವೇಶಿಯರ ಗುಡಿಸಲು ಕಟ್ಟೀತು. ಅಲ್ಲಿ ನಾನಾ ವಿಕಾರಂಗಳಾದಾವು. ಎಪ್ಪತ್ತೇಳು ದುರ್ಗದವರು ಅಪವರ್ಗವಾದಾರು. ವಿರೂಪಾಕ್ಷ ಕೆಟ್ಟು ಮೂವತ್ತೆರಡು ಕೊಟ್ಟೆವಾದಾವು. ಮನ್ಮಥಕೊಂಡ ಹಾಳೀತು. ತುರುಕರ ಬಲವೆದ್ದೀತು. ಶಂಭು ತ್ರಿಪುರಾಂತಕದೇವರ ಮುಂದಣ ಅನುಭವ ಮಂಟಪದಲ್ಲಿ ಕಪಿಲೆಯ ಬಾಣಸವ ಮಾಡ್ಯಾರು. ನಂದಿಕಂಭ ಮುರಿದಾರು. ಅಲ್ಲಿ ಗೋರಿಯನಿಕ್ಕಿ ಲಕ್ಷವಮೇಲೆ ತೊಂಬತ್ತಾರು ಸಾವಿರ ಕುದುರೆ ಕಮ್ಮಟದಲ್ಲಿ ಮಡಿದೀತು. ಆ ಬಲ ಆರಾದೀತು. ಆರು ಮೂರಾದೀತು. ಮೂರು ಎರಡಾದೀತು. ಎರಡು ಒಂದಾದೀತು. ಒಂದು ರಾಮೇಶ್ವರಕ್ಕೆ ನಡೆದೀತು. ಆ ಬಲ ಉತ್ತರ ಮಧ್ಯದಲ್ಲಿ ಅಳಿದೀತು. ಮಿಕ್ಕುದು ಉಳಿದೀತು. ಶಿವಸಮಯ ಕೆಟ್ಟೀತು. ಹಿರಿಯರ ಹಿರಿಯತನವಳಿದೀತು. ಭಕ್ತರು ಜಂಗಮದ ಕೈಸೇವೆಯ ಮಾಡಿಸಿಕೊಂಡಾರು. ನಿಜಭಕ್ತಿಯ ಮರೆತಾರು. ದಾಕ್ಷಿಣ್ಯಭಕ್ತಿಯ ಮಾಡ್ಯಾರು. ಕ್ರಿಯೆಗಳಂ ಬಿಟ್ಟಾರು. ಅನೇಕ ನೇಮಂಗಳಂ ಮಾಡ್ಯಾರು ಪ್ರಸಾದವಂ ಮರೆತಾರು. ವಂಚನೆ ಪಂತಿಭೇದವ ಮಾಡ್ಯಾರು. ಮನೆಯ ಹಿರಿಯರಂ ಮರೆತಾರು. ಕುಲದ ಹಿರಿಯರ ಪೂಜೆಯ ಮಾಡ್ಯಾರು. ಜಂಗಮರ ನಿಂದ್ಯವಂ ಮಾಡ್ಯಾರು. ಮತ್ತೆ ಜಂಗಮದ ಪ್ರಸಾದವಂ ಕೊಂಡಾರು. ಭಸಿತ ರುದ್ರಾಕ್ಷಿಯಂ ತೊಟ್ಟಾರು. ವಿಷಯಂಗಳೊಳಗೆ ಮುಳುಗಾಡ್ಯಾರು. ಹದಿನೆಂಟು ಜಾತಿ ಒಂದಾಗಿ ಉಂಡಾರು. ಕುಲಕ್ಕೆ ಹೋರಾಡ್ಯಾರು. ಅನೃತವ ನುಡಿದಾರು. ಅನೃತಕ್ಕೆ ಗುದ್ದಾಡ್ಯಾರು. ನಮ್ಮ ಶರಣರ ಹಿಂದೆ ಹಲವು ದೂರನಾಡ್ಯಾರು. ಅವರು ಹೊಳ್ಳು ಜಳ್ಳಾಗಿ ಹೋದಾರು. ನಮ್ಮ ಪುರಾತರ ಶರಣರು ಬೀಜಕೊಬ್ಬೊಬ್ಬರುಳಿದಾರು. ಷಡುದರ್ಶನ ಕೆಟ್ಟಾವು. ಏಕ ದರುಶನದಲ್ಲಿ ಅಡಗೀತು. ಮತ್ತೆ ಷಡುದರುಶನ

ವೆದ್ದೀತು. ಕಲ್ಯಾಣಕ್ಕೆ ತೆಂಕಲು ತೊಂಬತ್ತೈದು ಗಾವುದ ದಾರಿಯಲ್ಲಿ ಇಬ್ಬರು ಪುರಾತರು ಕಾಯಸಹಿತ ಕೈಲಾಸಕ್ಕೆ ಬಿಜಯಂಗೈದಾರು. ಆ ದಿಕ್ಕಿನಲ್ಲಿ ಒಂದು ಕೆರೆಯಲ್ಲಿ ಕೆಂಡದ ಮಳೆ ಸುರಿದೀತು. ಸುರಿದು ಕುದಿ ಕುದಿದು ಅಡಗೀತು. ಆ ಕೆಂಡದ ಮಳೆ ಹೊಯ್ದು ಗಾವುದ ದಾರಿ ಮಧ್ಯ ದಲ್ಲಿ ಕಲ್ಯಾಣದ ಬಿಜ್ಜಳರಾಯನ ವಂಶದಲೊಬ್ಬ ವೀರವಸವಂತರಾಯ ಹುಟ್ಟ್ಯಾನು. ಆ ದಿಕ್ಕಿನಲ್ಲಿ ನರಸಿಂಹಾವತಾರ ಹೊಕ್ಕು ಹೊಡಕರಿ ಸೀತು. ಮತ್ತೆ ಪಶ್ಚಿಮ ಮುಖವಾದೀತು. ಮತ್ತೆ ದಕ್ಷಿಣಕ್ಕೆ ಬಂದೀತು. ಮತ್ತೆ ಪಶ್ಚಿಮಕ್ಕೆ ಹೋದೀತು. ಮತ್ತೆ ದಕ್ಷಿಣ ಮುಖವಾದೀತು. ಮತ್ತೆ ತುರುಕರ ಬಲವೆದ್ದೀತು. ಆ ಬಲ ಒಂದೇ ಕಡೆಯಲ್ಲಿ ಅಳಿದೀತು. ಮತ್ತೆ ನರಸಿಂಹಾವತಾರ ಪಶ್ಚಿಮ ಮುಖದಲ್ಲಿ ನಿಂದೀತು. ದಕ್ಷಿಣ ಭಾಗದಲ್ಲಿ ಐದು ಕೋಟೆ ಉಳಿದಾವು. ಒಂದು ಕೋಟೆ ಸಿಂದು ತಾನೆ ಅಳಿದೀತು. ಕಾವೇರಿ ಮಧ್ಯದಲ್ಲಿ ಎರಡು ಕೋಟೆ ಉಳಿದಾವು. ಒಂದು ಕೋಟೆ ವಿಷ್ಣು ಸಂಪ್ರದಾಯವಾದೀತು. ಒಂದು ಕೋಟೆ ಈಶ್ವರ ಸಂಪ್ರದಾಯ ವಾದೀತು. ಆ ವಿಷ್ಣು ಕೋಟೆ ವಿರೋಧಿಕೃತು ಸಂವತ್ಸರದಲ್ಲಿ ಬಯ ಲಾದೀತು. ಈಶ್ವರ ಕೋಟೆದಲ್ಲಿ ಹನ್ನೊಂದು ಖಂಡೆ ಇದ್ದಾವು. ಹನ್ನೊಂದು ಖಂಡೆಯದೊಳಗೆ ಮೂರು ಖಂಡೆಯು ಉಳಿದಾವು. ಮತ್ತೊಂದು ಖಂಡೆಯ ತಿರುವಲೂರು ಸಮ್ಮುಖವಾದೀತು. ಅಲ್ಲಿಂದ ಕುಂಜರೇಶ್ವರ ದೇವರಲ್ಲಿಗೆ ಬಂದೀತು. ಅಲ್ಲಿಂದ ಕಪಿಲೆಯ ತೀರಕ್ಕೆ ಬಾದೀತು. ಅಲ್ಲಿ ನಾಲ್ಕು ಪಟ್ಟದ ರಾಯರು ಹುಟ್ಟ್ಯಾರು. ಆ ರಾಯ ರಿಂದ ಮುಂದೆ ಮುವ್ವತ್ತೆರಡು ಕೋಟೆಗಳು ಹುಟ್ಟ್ಯಾವು. ದಕ್ಷಿಣ ಭಾಗ ದಲ್ಲಿ ಒಂದು ಈಶ್ವರ ಕೋಟೆ ಉಳಿದೀತು. ಮಿಕ್ಕಿನ ಕೋಟೆ ಅಳಿದಾವು. ಉತ್ತರದಲ್ಲಿ ಇಪ್ಪತ್ತೇಳು ಮಾನ್ಯಯರು ಹುಟ್ಟ್ಯಾರು. ದಕ್ಷಿಣದಲ್ಲಿ ೨೭ ಮಾನ್ಯಯರು ಹುಟ್ಟ್ಯಾರು. ಪೂರ್ವದಲ್ಲಿ ಹದಿನೆಂಟು ಮಾನ್ಯಯರು ಹುಟ್ಟ್ಯಾರು. ಕೀಲಕ ಸಂವತ್ಸರದಲ್ಲಿ ದುರ್ಗಿ ಹುಟ್ಟ್ಯಾಳು. ಅವಳು ಮೂರಂಗದವರನು ಬೇಟೆಯನಾಡ್ಯಾಳು. ಕೀಲಕ ಸಂವತ್ಸರದಲ್ಲಿ ಮಾರಿ ಯಾಗಿ ತೋರ‍್ಯಾಳು. ಸೌಮ್ಯ ಸಂವತ್ಸರದಲ್ಲಿ ಕನ್ನೆಯಾಗಿ ತೋರ‍್ಯಾಳು. ಸಾಧಾರಣ ಸಂವತ್ಸರದಲ್ಲಿ ಉಡುಚಿಯಾಗಿ ತೋರ‍್ಯಾಳು. ಇವು ಮೂರು ಸಂವತ್ಸರದಲ್ಲಿ ಮೂರು ಭಾಗವಾಗಿ ತೋರ‍್ಯಾಳು. ಒಂದು ಭಾಗ ಉಳಿ ದೀತು. ಅಂದಿಗೆ ನಮ್ಮ ಪುರಾತರು ಬೀಜಕೊಬ್ಬೊಬ್ಬರುಳಿದಾರು. ಅಂದಿಗೆ ನಮ್ಮ ಪುರಾತರು ಸುಳುಹ ತೋರ‍್ಯಾರು. ಅಂದು ಪರಿಯಂತರ

ಬೂದಿ ಮುಚ್ಚಿದ ಕೆಂಡದಹಾಗೆ ಇದ್ದಾರು. ಅಲ್ಲಿಂದ ಮೇಲೆ ನರಸಿಂಹಾವತಾರ ಅಳಿದೀತು. ಕಲಿಯುಗದ ಕಳೆ ಕೆಟ್ಟೀತು. ಭಕ್ತಿಯ ಬೆಳೆ ಬೆಳೆದೀತು. ಉತ್ತರದಿಂದ ಏಳನೂರ ಎಪ್ಪತ್ತು ಚರಲಿಂಗ, ಹನ್ನೆರಡು ಸಾವಿರ ಲಿಂಗದ ಕಂತೆ ತಿರಿಪುರು, ನೆಲ್ಲಿ ಕಾಯಿಯಷ್ಟು ಬಟ್ಟಲು, ಬೇವಿನಕಾಯಿಯಷ್ಟು ಕಮಂಡಲು ಸಹಿತ ಶ್ರೀಶೈಲಕ್ಕೆ ಬಿಜಯಂಗೈದಾರು. ಅಲ್ಲಿಂದ ಕೈಲಾಸಕ್ಕೆ ನಡೆದಾರು. ಅಲ್ಲಿ ತಳಿರು ಚಪ್ಪರವಿಕ್ಕಿ ಮೂರ್ತವಂ ಮಾಡ್ಯಾರು ಕಲ್ಯಾಣ ಕಟ್ಟೀತು. ಉತ್ತರ ದಕ್ಷಿಣ ಭಾಗದ ನೈರುತ್ಯದಿಂದ ವೀರಬಸವಂತರಾಯನು ಕಲ್ಯಾಣಕ್ಕೆ ಬರುವನು. ಗುಡಿ ತೋರಣವಂ ಕಟ್ಯಾರು. ಆ ರಾಯಂಗೆ ಅಳಿಯ ಬಿಜ್ಜಳನ ಅರಮನೆಯ ಶೃಂಗಾರವಂ ಮಾಡ್ಯಾರು. ಪಟ್ಟಾಭಿಷೇಕವಂ ಮಾಡ್ಯಾರು. ಆ ಚಾಳುಕ್ಯರಾಯನ ಕಾಲದ ಮುತ್ತಿನಗದ್ದುಗೆಯಂ ತೆಗೆದು ಸಿಂಹಾಸನವನಿಕ್ಕ್ಯಾರು. ಆ ಗದ್ದುಗೆಯನೇರುತ್ತಾ ಬಂದು ಪವಾಡವಂ ಗೆಲಿದಾನು. ಆ ರಾಯನು ಗದ್ದುಗೆಯ ಮೇಲೆ ಕುಳಿತು ರಾಜ್ಯವಂಗೈಯ್ಯುತ್ತಿರಲು ಏಳನೂರ ಎಪ್ಪತ್ತು ಅಮರ ಗಣಂಗಳು ಸಹಿತ ಪ್ರಭುದೇವರು ಸಹಿತ ನಾವು ಸಹ ಉಳುವೆ ಮಹಾಮನೆಗೆ ಬಂದೇವು. ಅಲ್ಲಿ ಎಲ್ಲಾ ಗಣಂಗಳು ಸಹಿತ ಗಣಪರ್ವವಂ ಮಾಡಿ ಅಲ್ಲಿಂದ ಕಲ್ಯಾಣಕ್ಕೆ ಬಂದೇವು. ಮುಂದೆ ಬಾಚಿಕಾಯಕದ ಬಸವಯ್ಯಗಳು ಬಂದು ನಮಗೆ ನಮ್ಮ ಅರಮನೆಯಂ ಶೃಂಗಾರವಂ ಮಾಡ್ಯಾರು. ಉಪ್ಪರಗುಡಿ ಉಭಯ ನಂದಿಯಕಂಭ ಮುನ್ನೂರ ಅರವತ್ತು ಹೊನ್ನ ಕಳಶವೆದ್ದಾವು. ನಾವು ನಮ್ಮ ಅರಮನೆಗೆ ಹನ್ನೆರಡು ಸಾವಿರ ಜಂಗಮ ಸಹಿತ ಬಂದೇವು. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಸಹಿತ ಎಲ್ಲರಿಗೂ ವಿಸ್ತಾರವಾದೀತು. ತ್ರಿಪುರಾಂತಕದೇವರ ಶಿವಾಲಯ ಕಟ್ಟೀತು. ಎಳನೂರ ಎಪ್ಪತ್ತು ಹೊನ್ನಕಳಶವೆಸೆದಾವು. ಪದ್ಮಪತ್ರ ತೀವಿದ ಸರೋವರಂಗಳು ಮುನ್ನೂರ ಅರವತ್ತು ಆದಾವು. ತ್ರಿಪುರಾಂತಕದೇವರ ಅಕ್ಷರಿಂ ನೋಡಿ ಆನಂದಿಸ್ಯಾವು. ನಾವು ಬಹಪರಿಯಂತರ ನಿಕ್ಷೇಪದಲ್ಲಿಹುದು ನಾವು ಆನಂದ ಸಂವತ್ಸರಕ್ಕೆ ಬಂದೇವು. ನಿಮ್ಮಾಣೆ. ನಿಮ್ಮ ಪ್ರಮಥ ಗಣಂಗಳಾಣೆ ಕಣಾ. ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ ಬಂದೇವು.

# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೩ | ೧೨ | ಅಕಾರಚಯಂ | ಅಕಾರೇಚಲಯಂ |
| ,, | ೧೫ | ದ್ವಿತೀಯಂ | ದ್ವಿತೀಯೇ |
| ,, | ೧೭ | ಸದಶಿವೊ | ಸದಾಶಿವೊ |
| ೪ | ೧೨ | ಅಗ್ನಿಃ | ಅಗ್ನಿ |
| ೭ | ೧೮ | ಪ್ರಚಾರಣಂ | ಪ್ರಸಾರಣಂ |
| ೧೦ | ೨೫ | ಪಂಚಕಃ | ಪಂಚಕಂ |
| ೧೧ | ೧೨ | ಮಹ್ವಾ | ಮಹಾ |
| ೧೫ | ೧೯ | ವಾಯುವೆಂಬವು | ವಾಯುವೆಂಬುದು |
| ೧೬ | ೧೨ | ಮಾನಸಾದ | ಮಾನಸಾದಿ |
| ,, | ೧೯ | ಈಡಾಚೆ | ಈಡಾಚ |
| ,, | ೨೪ | ನೇತ್ರಂ | ನೇತ್ರ |
| ೨೫ | ೪ | ಅಸ್ತಿತೆ | ಅಸ್ತಿ |
| ,, | ೮ | ಅಪಕ್ಷತೆ | ಅಪಕ್ಷತಿ |
| ,, | ೯ | ವಿನಸ್ಯತೆ | ವಿನಶ್ಯತಿ |
| ೨೭ | ೪ | ಪಾಪಿಷ್ಠ | ಪಾಪಿಷ್ಠಂ |
| ೨೮ | ೨ | ಪಂಪಪ್ರಾಣ | ಪಂಚಪ್ರಾಣ |
| ,, | ೧೬ | ವಿನಹ | ವಿರಹ |
| ೩೧ | ೨೨ | ತತ್ತ್ವದ | ತತ್ವದ |
| ೪೮ | ೧೩ | ತತ್ತ್ವ | ತತ್ವಂ |
| ,, | ೨೪ | ಶಿವಾಂಶಿತ | ಶಿವಾಂಶಿಕ |
| ೪೯ | ೧ | ಪರಬ್ರಹ್ಮೋಽಸ್ಮಿ | ಪರಬ್ರಹ್ಮಾಸ್ಮಿ |
| ೫೪ | ೫ | ಪದವನೊಡೆದು | ಪದವನೊದೆದು |
| ೫೫ | ೨೪ | ಉನ್ಮನೀಯ | ಉನ್ಮನಿಯ |
| ೫೬ | ೮ | ವಿಕಾಸವನ್ನೈದು | ವಿಕಾಸವನ್ನೈದಿ |
| ೫೯ | ೭ | ಪ್ರಭೆಯನ್ನೈದು | ಪ್ರಭೆಯನ್ನೈದಿ |
| ೬೪ | ೧೦ | ತೃಪ್ತಿಯನ್ನೈದು | ತೃಪ್ತಿಯನ್ನೈದಿ |
| ೬೫ | ೨೫ | ಜನಾಂಕುರವು | ಜನನಾಂಕುರವು |

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೯೫ | ೨೧ | ಬ್ರಹ್ಮೋಚ್ಯತೆ | ಬ್ರಹ್ಮಮುಚ್ಯತೆ |
| ೧೦೩ | ೧೧ | ಭಾವಂತಹ | ಭಾವಾಂತಹ |
| ೧೧೭ | ೨೨ | ಪ್ರಣಮುಹೊಂಕಾರ | ಪ್ರಣವು ಓಂಕಾರ |
| ೧೧೧ | ೨೪ | ಶದ್ಧ ಪ್ರಣವು | ಶುದ್ಧ ಪ್ರಣವು |
| ೧೨೫ | ೨೪ | ತನಗೆಂದೆನೆ | ತನಗೆಂತೆನೆ |
| ೧೨೯ | ೫ | ಶ್ರೋತ್ರಗಳು | ಇಂದ್ರಿಯಗಳು |
| ೧೩೯ | ೧ | ತಸ್ಯಮಸ್ಯೆಗದಾಸೂರ್ಯ | ತಸ್ಯಮಧ್ಯೇಸದಾಸೂರ್ಯ |
| ೧೪೦ | ೧೨ | ನಳಪರತರಾ | ಸ್ಥಳಪರತರಾ |
| ೧೪೧ | ೨೨ | ತಶ್ಯಬ್ದಶ್ಯ | ತಚ್ಚಬ್ದಸ್ಯ |
| ೧೪೧ | ೨೪ | ತನ್ಮನೋಸಿಲಯಂ | ತನ್ಮನೋವಲಯಂ |
| ೧೪೧ | ೨೪ | ದ್ವಿಪಲ್ಲಿ ಪರಮಂಪದಂ | ತತ್ಸ್ಥಳಂ ಪರಮಂಪದಂ |
| ೧೪೨ | ೪ | ಕೇಚಕ | ರೇಚಕ |
| ೧೪೨ | ೭ | ಷಣ್ಮುಖ | ಷಣ್ಮುಖಿ |
| ೧೪೪ | ೧೦ | ಗಹೇಚಂದ್ರಾ | ಗುಹೇಚಂದ್ರಾ |
| ೧೪೪ | ೧೧ | ಜ್ಞಾನವಧಾರಿಣಃ | ಜ್ಞಾನಾವಧಾರಣಂ |
| ೧೫೧ | ೧೪ | ವೃತಾ | ವೃಥಾ |
| ೧೫೨ | ೧೦ | ದಹನಲೋಕನಾಕಾರ | ದಹನಲೇಖಾಕಾರ |
| ೧೫೬ | ೧೪ | ಪರಿಯಾಗಿ | ಉಪರಿಯಾಗಿ |
| ೧೫೮ | ೧೮ | ಚಿತ್ಕಳೆಮಲ್ಲಚಿತ್ತೆಂಬ | ಅನುಉಚಿತ್ತೆಂಬ |
| ೧೫೯ | ೧೯ | ಆಗಳವಡಿಸಿ | ಆಗಳಳವಡಿಸಿ |
| ೧೬೬ | ೧೦ | ಕಾಂತಿಶಕ್ತಿ | ಶಾಂತಿಶಕ್ತಿ |
| ೧೭೦ | ೧೮ | ತತ್ಪದನೋಚ್ಯತೆ | ತತ್ಪದೇನೋಚ್ಯತೆ |
| ೧೭೩ | ೨೪ | ತ್ರಿವಿಧನ | ತ್ರಿವಿಧವ |
| ೧೭೭ | ೨ | ದ್ವಿಚೋಪಿ | ದ್ವಿಜೋಽಪಿ |
| ೧೯೮ | ೮ | ಶರೀರಾರ್ಥಂ | ಶರೀರಾರ್ಥಂಚ |
| ೨೧೯ | ೧೮ | ನರದ್ವ್ಯಾಚಪಾರ್ಪಿತ | ನದದ್ವ್ಯಾಚ್ಚರಾರ್ಪಿತ |
| ೨೧೯ | ೧೯ | ಸದ್ವ್ಯಾಚ್ಚಲಿಂಗಾಯ | ದದ್ವ್ಯಾಚ್ಚರಲಿಂಗಾಯ |

# ಗ್ರಂಥ ಋಣ

## ತಾಳೆಯೋಲೆಯ ಪ್ರತಿಗಳು

೧. ಕೊಪ್ಪಳ ಗವಿಮಠದಲ್ಲಿ ದೊರೆತ ಪ್ರತಿ.

೨. ಕುದರಿಮೋತಿ ವೈಸೂರು ಮಠದಲ್ಲಿ ದೊರೆತ ಪ್ರತಿ.

೩. ಬೆಂಗಳೂರ ಶ್ರೀ ಆರ್. ಮೃತ್ಯುಂಜಯರಿಂದ ಗೆ. ಹಕಾರಿಯವರ ಮುಖಾಂತರ ದೊರೆತ ಪ್ರತಿ.

೪. ಕಲುಬುರಿಗೆ ಶ್ರೀ ಶರಣಬಸವೇಶ್ವರ ಸಂಸ್ಥಾನದ ಪೂಜ್ಯ ದೊಡ್ಡಪ್ಪ ಅಪ್ಪ ಅವರಲ್ಲಿ ದೊರೆತ ಪ್ರತಿ.

೫. ಪಂ. ಕಲ್ಲಿನಾಥಶಾಸ್ತ್ರಿಗಳವರಲ್ಲಿದ್ದ ಪ್ರತಿಗಳು.

## ಅಚ್ಚಾದ ಪ್ರತಿಗಳು

೬. ರಾ. ಬ. ಶ್ರೀ ಹಳಕಟ್ಟಿಯವರಿಂದ ದೊರೆತ ಸುಮಾರು ೬೦ ವರ್ಷಗಳ ಮೊದಲು ಅಚ್ಚಾದ ಪ್ರತಿ. (ಬ)

೭. ಛತ್ರದಹಳ್ಳಿ ಪಂ. ಚಂದ್ರಶೇಖರ ಶಾಸ್ತ್ರಿಗಳವರು ಪ್ರಕಟಿಸಿದ ಹಿರಿಯ ಮಂತ್ರಗೋಪ್ಯ. (ಶಿ)

೮. ಇದೂವರೆಗೆ ಪ್ರಕಟವಾದ ವಚನ ಸಾಹಿತ್ಯ.

ಮೇಲ್ಕಾಣಿಸಿದ ಸಾಹಿತ್ಯವನ್ನು ಒದಗಿಸಿದ ಮಹನೀಯರೆಲ್ಲರಿಗೂ ಹಾರ್ದಿಕ ಕೃತಜ್ಞತೆಗಳನ್ನರ್ಪಿಸುತ್ತೇವೆ.

**ಸಂ.**